

ಬರಹಗಾರ ಜಯತೀರ್ಥ ರಾಜಪುರೋಹಿತ

# ಜಯತೀರ್ಥ

## (ಅಭಿನಂದನ ಗ್ರಂಥ)


ಸಂಪಾದನ ಸಲಹೆಗಾರ

**ಜಿ. ನಾರಾಯಣ**

ಮಾಜಿ ಅಧ್ಯಕ್ಷ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಪ್ರಧಾನ ಸಂಪಾದಕ

**ಬಿ. ವಿ. ಹಂಪನಗೌಡ್ರ**

ಸಹ ಸಂಪಾದಕ

**ಶಂ. ಗು. ಬಿರಾದಾರ**



ಪ್ರಕಾಶನ

**ಜಿಲ್ಲಾ ಸಾಹಿತ್ಯ ಸಂಸ್ಕೃತಿ ಸಂಘ, ವಿಜಾಪುರ**

**ಅಭಿನಂದನ ಗ್ರಂಥ ಸಂಪಾದಕ ಮಂಡಲಿ**

ಜಿಲ್ಲಾ ಸಾಹಿತ್ಯ ಸಂಸ್ಕೃತಿ ಸಂಘ, ವಿಜಾಪುರ

'ಜಯತೀರ್ಥ' ಅಭಿನಂದನ ಗ್ರಂಥ

ಸಂಪಾದಕ ಮಂಡಲಿ

ಅಧ್ಯಕ್ಷರು : ಸಾ. ಮಾ. ಹುಂಡೇಕಾರ

ಉಪಾಧ್ಯಕ್ಷರು : ಶಾಂತಾಬಾಯಿ ಓಂಕಾರ್

ಸಂಪಾದನ ಸಲಹೆಗಾರ : ಜಿ. ನಾರಾಯಣ

ಪ್ರಧಾನ ಸಂಪಾದಕ : ಬಿ. ವಿ. ಹಂಪನ ಗೌಡ್ರ

ಸಹ ಸಂಪಾದಕ : ಶಂ. ಗು. ಬಿರಾದಾರ

ಸದಸ್ಯ ಸಲಹೆಗಾರರು :

ಜಿ. ಎಲ್. ಮುದ್ದೇಬಿಹಾಳ

ಎ. ವಿ. ಕತ್ತಿ

ಸಿ. ದಾ. ಉಗ್ರಾಣ

ರಕ್ಷಾ ಪುಟದ ಪಾರದರ್ಶನ ಚಿತ್ರಗಳು

ಬಿ. ಕೇಸರ್ ಸಿಂಗ್

ಮುದ್ರಣ

ಐಬಿಎಚ್ ಪ್ರಕಾಶನ ಪ್ರಿಂಟರ್ಸ್, ಬೆಂಗಳೂರು 560 054

# ಸಂಪಾದಕರ ನಿವೇದನೆ

ವಿಜಾಪುರ ಜಿಲ್ಲೆ ಅನೇಕ ವೈಶಿಷ್ಟ್ಯಗಳಿಂದ ಕೂಡಿದ ಜಿಲ್ಲೆ. ನಾಡಿನ ಎಲ್ಲೆಡೆ ವಿಶ್ವಕ್ಕೆಲ್ಲ ಪರಿಚಿತ ಜಿಲ್ಲೆ. ಜಗತ್ಪ್ರಸಿದ್ಧ ಗೋಲಗುಮ್ಮಟವುಂಟು. ವಿಶ್ವಧರ್ಮ ಬೋಧಿಸಿದ ಸಮಾಜವಾದಿ, ಜಗದಣ್ಣ ಬಸವಣ್ಣ ಈ ಜಿಲ್ಲೆಯವರೇ. ಪಂಚನದಿಗಳ ತೋಳ ತೆಕ್ಕೆಯಲ್ಲಿ ಪವಡಿಸಿದರೂ ಬಡತನದ ಬವಣೆಯಿಂದ ಬಳಲುತ್ತಿದ್ದರೂ ಭಾರತದ ಪ್ರಧಾನಿಯನ್ನು ಬಂಗಾರದಲ್ಲಿ ತೂಗಿ ಆನಂದಪಟ್ಟ ಜಿಲ್ಲೆ.'ಜಯತೀರ್ಥ' ಅಭಿಧಾನದ ಅಭಿನಂದನ ಗ್ರಂಥ ಪ್ರಕಟಿಸುತ್ತಿರುವದನ್ನು ನೋಡಿ ರಾಯಚೂರ ಜಿಲ್ಲೆಯ ಅನೇಕ ಮಿತ್ರರು, ರಾಯಚೂರ ಜಿಲ್ಲೆಯವರು ಮಾಡಬೇಕಾದುದನ್ನು ನಾವು ಮಾಡುತ್ತಿರುವದಕ್ಕೆ ಅಭಿವಂದನೆಯ ಕಾಗದಗಳನ್ನು ಬರೆದಿದ್ದಾರೆ. ಜಯತೀರ್ಥ ರಾಜಪುರೋಹಿತರು ಜಿಲ್ಲೆಯವರಾದರೂ, ಕರ್ನಾಟಕ ನಾಡ ನುಡಿಯ ಸೇವೆಗಾಗಿ ಮಾಡಿದ ಸೇವೆ ಅನುಪಮ; ಅಪರಿಮಿತ. ಇದನ್ನು ಗಮನದಲ್ಲಿಟ್ಟು ಕೊಂಡು ಅವರನ್ನು ಕೇಳಿಕೊಂಡಾಗ ನಿರಾಶೆ ಮಾಡದೆ ನಮ್ಮ ಕೇಳಿಕೆಯನ್ನು ಈಡೇ ರಿಸಿಕೊಟ್ಟದ್ದಕ್ಕಾಗಿ ಅವರಿಗೆ ನಮ್ಮ ಪ್ರಥಮ ವಂದನೆಗಳು.

ಬೆಂಗಳೂರಿನ ಮಾಜಿ ಮೇಯರರೂ ಕನ್ನಡ ಸಾಹಿತ್ಯ ಪರಿಷತ್ತಿನ ಹಿಂದಿನ ಅಧ್ಯಕ್ಷರೂ ಆಗಿದ್ದ ಮಾನ್ಯ ಶ್ರೀ ಜಿ. ನಾರಾಯಣರವರನ್ನು ಸಂದರ್ಶಿಸಿದಾಗ, ನಮ್ಮ ಮನೋಬಯಕೆಯನ್ನು ಅವರೆದುರಿಗೆ ತೋಡಿಕೊಂಡೆವು. ಶ್ರೀ ದೇಶಹಳ್ಳಿ ಜಿ. ನಾರಾಯಣರವರು ತುಂಬು ಹೃದಯದಿಂದ ನಮ್ಮ ಕಾರ್ಯಕ್ಕೆ ಬೆಂಬಲ ನೀಡಿ ದರು. ಕನ್ನಡ ಜನ ಜಯತೀರ್ಥರಿಗೆ ಋಣಿಯಾಗಿರಬೇಕಾದುದು ಸಾಹಿತ್ಯ ಸೇವೆ ಗಿಂತ ಕನ್ನಡ ಆಡಳಿತ ಭಾಷೆಯಾಗಬೇಕೆಂದು ಪಟ್ಟು ಹಿಡಿದು ಜಯ ಸಾಧಿಸಿದ ಕೆಲಸಕ್ಕಾಗಿ. ಅಂಥವರಿಗಾಗಿ ಮಾಡತಕ್ಕ ಕೆಲಸ ನಿಜಕ್ಕೂ ಸರಾಹನೀಯವೆಂದು ಹೇಳಿ ಬೆನ್ನು ಚಪ್ಪರಿಸಿದರು. ಸಾದಾ ಉಡುಪು ಧರಿಸಿದ್ದ ಅವರನ್ನು ಕಂಡೊಡನೆ ಶರಣ ಹರ್ಡೇಕರ ಮಂಜಪ್ಪನವರ ಭಾವಚಿತ್ರ ಸುಳಿದುಹೋಯಿತು. ಸಾತ್ವಿಕರು, ಸಜ್ಜನರು, ಸಂಭಾವಿತರು, ಸುಶೀಲರು, ಸ್ಪಷ್ಟವಾದಿಗಳು, ಮೇಲಾಗಿ ಸಹನಶೀಲತೆ ಯುಳ್ಳ ಶ್ರೀಯುತರನ್ನು ಕಂಡು **ಸಂಪಾದನಾ ಸಲಹೆಗಾರರಾಗಿ** ನಮ್ಮನ್ನು ಮುನ್ನಡೆಸ ಬೇಕೆಂದು ಆಮೇಲೆ ಕೇಳಿಕೊಂಡೆವು. ಅವರ ಮಾರ್ಗದರ್ಶನದಲ್ಲಿ ತಯಾರಾದ ಈ ಗ್ರಂಥಕ್ಕೆ ಮೌಲ್ಯ ಹೆಚ್ಚಾದುದಕ್ಕೆ ಅವರೇ ಕಾರಣ. ಗ್ರಂಥದ ರೂಪರೇಷೆಯನ್ನು ಸಿದ್ಧಗೊಳಿಸುವಲ್ಲಿ ನಾಡಿನ ನಾಮಾಂಕಿತ ಸಾಹಿತಿಗಳಿಂದ ಲೇಖನ ತರಿಸಿಕೊಳ್ಳುವಲ್ಲಿ ಮಾರ್ಗದರ್ಶಿಯಾದ ಸಂಪಾದನಾ ಸಲಹೆಗಾರರಾದ ಶ್ರೀ ಜಿ. ನಾರಾಯಣರ ಉದಾರ ಹೃದಯಕ್ಕೆ ತುಂಬು ಹೃದಯದ ನಮನಗಳು.

'ಜಯತೀರ್ಥ' ಅಭಿನಂದನ ಗ್ರಂಥಕ್ಕೆ ಆಶೀರ್ವಚನ ಕಳುಹಿಸಿದ ಡಾ. ವಿ. ಕೆ. ಗೋಕಾಕರವರನ್ನು, ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರವರನ್ನು ಹೃತ್ಪೂರ್ವಕವಾಗಿ ಅಭಿನಂದಿಸದಿರಲಾರೆ. ಕನ್ನಡ ನಾಡಿನ ನಾಮಾಂಕಿತ ಮಹನೀಯರನೇಕರು ಮಹತ್ವದ ಲೇಖನಗಳನ್ನು ಕಳುಹಿಸಿ ಉಪಕರಿಸಿದ್ದಾರೆ. ಅವರೆಲ್ಲರನ್ನೂ ಮನಸಾರೆ ನೆನೆಯುತ್ತೇನೆ. ಅತ್ಯಂತ ಹೊಣೆಗಾರಿಕೆಯ ಈ ಕೃತಿಯ ಸಿದ್ಧತೆಗೆ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಶಂ. ಗು. ಬಿರಾದಾರರ ಸೇವೆಯನ್ನು ಮರೆಯುವಂತಿಲ್ಲ.

ಹಳ್ಳಿಯಲ್ಲಿ ಹುಟ್ಟಿದ ಜಯಣ್ಣ ಉಚ್ಚ ವ್ಯಾಸಂಗ ಮಾಡಿ, ಹತ್ತಾರು ಹುದ್ದೆಗಳನ್ನು ಅಲಂಕರಿಸಿದ ಅಕ್ಕರೆಯ ಅಧಿಕಾರಿಯಾಗಿ ಮೆರೆಯುತ್ತಿದ್ದಾರೆ.ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಪ್ರಶಸ್ತಿಗಳಿಸಿ ಕನ್ನಡ ಸಾರಸ್ವತ ಲೋಕಕ್ಕೆ ಹಲವಾರು ಮೌಲಿಕ ಕೊಡುಗೆಗಳನ್ನು ನೀಡಿದ್ದಾರೆ. ಕನ್ನಡ ಮತ್ತು ಸಂಸ್ಕೃತಿಯ ನಿರ್ದೇಶಕರಾಗಿ ಮಾಡಿದ ಸೇವೆಯನ್ನು ಮನ್ನಿಸಿ, ರಾಜ್ಯ ಸರ್ಕಾರ, ವಿಶೇಷ ರಾಜ್ಯ ಪ್ರಶಸ್ತಿ ನೀಡಿದೆ. ಸಮರ್ಥ ಯಶಸ್ವಿ ಆಡಳಿತಗಾರರಲ್ಲಿರಬೇಕಾದ ಸಮತೂಕದ ಮನಸ್ಸು, ಮಾನವೀಯ ದೃಷ್ಟಿ, ಅನುಕಂಪ, ಸಕಲರನ್ನು ಸೌಜನ್ಯದಿಂದ ಕಾಣುವ ವಿನಯದ ಸಾಕಾರ ಮೂರ್ತಿಯಾದ ಶ್ರೀ ಜಯತೀರ್ಥರು ಕಲಬುರ್ಗಿ ವಿಶ್ವವಿದ್ಯಾಲಯದ ವಿಶೇಷ ಅಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಅವರಿಗೆ ಇನ್ನೂ ಹೆಚ್ಚಿನ ಸ್ಥಾನಗಳು ದೊರೆಯಲೆಂದು ಹಾರೈಸುತ್ತೇನೆ. ಅವರಿಂದ ನಾನಾ ರೀತಿಯಲ್ಲಿ ನೆರವು ಪಡೆದ ಕಲಾವಿದರು, ಸಾಹಿತಿಗಳು ಹಾಗೂ ಜನ ಸಾಮಾನ್ಯಶ್ರೀಗಳು ಕನ್ನಡ ನಾಡಿನಾದ್ಯಂತ ಹಬ್ಬಿಕೊಂಡಿದ್ದಾರೆ. ಅವರೆಲ್ಲರ ಪ್ರೀತಿಯ ದ್ಯೋತಕವಾಗಿಯೇ 'ಜಯತೀರ್ಥ' ಸಂಭಾವನಾ ಗ್ರಂಥದ ಪ್ರಕಟಣೆ.

ಶ್ರೀ ಜಯತೀರ್ಥ ರಾಜಪುರೋಹಿತರಿಗೆ ಗೌರವ ಸಲ್ಲಿಸಲು, ಸಾಹಿತ್ಯ ಸಂಸ್ಕೃತಿ ಸಂಘದ ಅಧ್ಯಕ್ಷರಾದ ಶ್ರೀ ಎಸ್. ಎಮ್. ಹುಂಡೇಕಾರ ವಕೀಲರು, ಸಂಪಾದಕ ಸಮಿತಿಯ ಸದಸ್ಯರಾದ ಶ್ರೀ ಎ. ವಿ. ಕತ್ತಿ, ಜಿ. ಎಲ್. ಮುದ್ದೇಬಿಹಾಳ, ಶ್ರೀ ಸೀ. ರಾ. ಉಗ್ರಾಣ ಮೊದಲಾದ ಮಹನೀಯರನೇಕರು ಹಲವಾರು ಬಗೆಯಲ್ಲಿ ಕಾರ್ಯಗೈದು 'ಜಯತೀರ್ಥ' ಅಭಿನಂದನಾ ಗ್ರಂಥ ಹೊರಬರಲು ಕಾರಣಕರ್ತರಾಗಿದ್ದಾರೆ. ಅವರಿಗೆಲ್ಲ ಅಭಿನಂದನೆಗಳು.

ನಮ್ಮೆಲ್ಲರ ಬಲವಂತಕ್ಕಾಗಿ 'ಬದುಕು ಬೆಳಕು'ಎಂಬ ತಮ್ಮ ಜೀವನ ವಿವರಗಳನ್ನು ಬರೆದು ಅದನ್ನಿಲ್ಲಿ ಸೇರಿಸಲು, ಅವರ ಹೇಳಿಕೆಗಳನ್ನು ಅಲ್ಲಲ್ಲಿ ಉದ್ಧರಿಸಲು ಅನುಮತಿ ನೀಡಿದ್ದಕ್ಕಾಗಿ ಶ್ರೀ ರಾಜಪುರೋಹಿತರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

**ಬಿ. ವೀ. ಹಂಪನ ಗೌಡ್ರ**

**ಎಂ.ಎ.,ಎಂ.ಈಡಿ.**

**(ಪ್ರಧಾನ ಸಂಪಾದಕರು)**

# ವಿಷಯಸೂಚಿ

## ಭಾಗ : ಒಂದು, ಬದುಕು ಬೆಳಕು


| | | |
|---|---|---|
| ಬದುಕು ಬೆಳಕು | ಜಯತೀರ್ಥ ರಾಜಪುರೋಹಿತ | 3 |


## ಭಾಗ : ಎರಡು, ವ್ಯಕ್ತಿತ್ವ ಮತ್ತು ಚಟುವಟಿಕೆ


| | | |
|---|---|---|
| ಶುಭೇಚ್ಛೆಯ ಹಿತವಾಕ್ಯ | ಡಾ. ವಿ. ಕೃ. ಗೋಕಾಕರು | 45 |
| ಅಖಿಲ ಕರ್ನಾಟಕವನ್ನು ತಬ್ಬಿಕೊಂಡಿರುವ ರಾಜಪುರೋಹಿತರು | ಪ್ರೊ. ಕು. ಶಿ. ಹರಿದಾಸಭಟ್ಟ | 47 |
| ನಾ ಕಂಡ ಜಯತೀರ್ಥರು | ಎನ್ಕೆ. ಕುಲಕರ್ಣಿ | 52 |
| ನಾ ಕಂಡ ರಾಜಪುರೋಹಿತರು | ಡಾ. ಸಂಗಮೇಶ್ವರ ಸರದಾರ | 56 |
| ಹೋರಾಟಗಾರ | ಪ್ರೊ. ಡಿ. ಆರ್. ಬಳೂರಗಿ | 59 |
| ಸಂಘಟನಾಚತುರ, ಸ್ನೇಹಜೀವಿ-ನೆನಪುಗಳು | ಕೆ. ವಿರೂಪಾಕ್ಷ ಗೌಡ | 65 |
| ಹೈದ್ರಾಬಾದಿನ ನಾಡಹಬ್ಬದ ಕಾರ್ಯದರ್ಶಿ | ಪಿ. ಗೋವಿಂದರಾವ್ | 69 |
| ಪುರುಷ 'ದಾದಿ' ಪುರೋಹಿತರು | ರಾಮಪ್ರಸಾದ | 75 |
| ವಿಶೇಷ ರಾಜ್ಯ ಪ್ರಶಸ್ತಿ ವಿಜೇತ ಜಯತೀರ್ಥ ರಾಜಪುರೋಹಿತ | ಪಿ.ಎಂ.ಗಲಗಲಿ | 84 |
| ನಮ್ಮ ಜಯಣ್ಣ | ಬಿ. ಮರಿಯಪ್ಪ | 89 |
| ಸೀಮಾಪುರುಷ ಶ್ರೀ ಜಯತೀರ್ಥ ರಾಜಪುರೋಹಿತರನ್ನು ನಾನು ಕಂಡಂತೆ | ವೈ. ಎಂ. ಸಿ. ಶರ್ಮ | 92 |
| ಷಾಹಿಮುಲ್ಲಾ-ಯಾನೆ-ರಾಜಪುರೋಹಿತ | ನರಸಿಂಹ ಕಠಾವಿ, | 96 |
| ಸಾಹಿತ್ಯ ಪ್ರಪಂಚದಲ್ಲಿ ರಾಜಪುರೋಹಿತರ ರಾಜಮಾರ್ಗ | ಬಿ. ಎ. ಸನದಿ | 99 |
| ಜಯತೀರ್ಥ ರಾಜಪುರೋಹಿತರು ಬಹುಮುಖ ಪ್ರತಿಭಾವಂತ | ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್ | 105 |
| ಕನ್ನಡದ ಕಟ್ಟಾಳು ರಾಜಪುರೋಹಿತ | ಶ್ರೀ ಸುರೇಂದ್ರ ದಾನಿ | 109 |
| ಸ್ನೇಹಶೀಲ ರಾಜಪುರೋಹಿತರು | ಸಿ. ಕೆ. ನಾಗರಾಜರಾವ್ | 113 |
| ನಾಕಂಡ ಕನ್ನಡ ಅಭಿಮಾನಿ | ಸಾ. ಮಂಚಯ್ಯ | 118 |
| ಕನ್ನಡದ ಜಯತೀರ್ಥರು | ದೇಶಹಳ್ಳಿ ಜಿ. ನಾರಾಯಣ | 120 |
| ಒಬ್ಬ ಕನ್ನಡದ ಕಾವಲುಗಾರ | ಡಾ. ಹಾ. ಮಾ. ನಾಯಕ | 125 |
| ನಮ್ಮವರು | ಸೌ. ಸೀತಾ ರಾಜಪುರೋಹಿತ | 129 |
| ನಮನ | ಶಿವಲಿಂಕ | 132 |
| ಪದ್ಯಮಾಲಿಕಾ | ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ | 133 |
| ಜಯತೀರ್ಥ | ಶಂ. ಗು. ಬಿರಾದಾರ | 134 |

## ಭಾಗ : ಮೂರು, ಕೃತಿ ವಿಮರ್ಶೆ


| | | |
|---|---|---|
| 'ಕನ್ನಡ ಶೀರ್ಷಗಳು'-ಒಂದು ಮೈಲಿಗಲ್ಲು | ಪ್ರೊ. ಪ್ರಧಾನಗುರುದತ್ | 137 |
| ಇನ್ನೊಂದು ಒಳ್ಳೆಯ ಕಾದಂಬರಿ 'ಜೊಹರಾ' | ಡಾ. ಎಸ್. ಎಲ್. ಭೈರಪ್ಪ | 142 |
| 'ಜೊಹರಾ' ಪಾತ್ರಗಳ ಸುತ್ತಮುತ್ತ | ಪ್ರೊ. ಚೆನ್ನಣ್ಣವಾಲೀಕಾರ | 145 |
| ಜೊಹರಾ | ಪ್ರೊ. ಗೋಪಾಲ ಆಶ್ರಿತ | 151 |
| 'ಹಾಲು-ಜೇನು' ಒಂದು ಸುಂದರ ಪ್ರಾದೇಶಿಕ ಕಾದಂಬರಿ | ರಾ. ಪ್ರ. | 154 |
| 'ಸುಳಿಗಾಳಿ' ಒಂದು ಅಭಿಪ್ರಾಯ | ಪ್ರೊ. ನಾಗರಾಜ ಕಾಳೆ | 157 |
| 'ಕಡಲ ತೋಳ' ಒಂದು ಸಾರ್ಥಕ ಅನುವಾದ | ಪ್ರೊ. ಸೂರ್ಯನಾರಾಯಣ ಭಟ್ಟ | 162 |
| 'ಶಿಥಿಲಶಿಲೆ'-ಐತಿಹಾಸಿಕ ಕಥೆಗಳು | ಎಸ್. ಟಿ. ಕಲ್ಲಾಪುರ | 170 |
| ರಾಜಪುರೋಹಿತರ ಸಣ್ಣಕಥೆಗಳು | ಪ್ರೊ. ಜಿ. ಕೃಷ್ಣರಾವ್ | 171 |
| 'ಪಾರವ್ವನ ಪಂಚಾಯಿತಿ' | ಇಟಗಿ ರಾಘವೇಂದ್ರ | 175 |
| 'ತುಂಗೆಯಂಗಳದಲ್ಲಿ' ಅಂತಸ್ಸತ್ವವುಳ್ಳ ರೂಪಕಗಳು | ಪ್ರೊ. ಎಂ.ವಿ. ಸೀತಾರಾಮಯ್ಯ | 178 |
| 'ತಂಗೆಯಂಗಳದಲ್ಲಿ' ಏಕಾಂಕ ರೂಪಕ | ವಿ. ಕೃ. ಗೋಕಾಕ್ | 179 |
| ಶ್ರೀ ಜಯತೀರ್ಥ ರಾಜಪುರೋಹಿತರ ಕಿರು ಪುಸ್ತಕಗಳು | ವೆಂ. ಮು. ಜೋಶಿ | 180 |
| ಸಾಹಿತ್ಯಿಕ ಅಭಿಪ್ರಾಯಗಳು | | 183 |


## ಅನುಬಂಧ


| | |
|---|---|
| ವಿಶೇಷ ಪ್ರಶಸ್ತಿ ಪತ್ರ | 188 |
| ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ ಪತ್ರ | 190 |
| ಜಯತೀರ್ಥ ರಾಜಪುರೋಹಿತರ ಕೃತಿಗಳು | 191 |
| ಹಿರಿಕಿರಿಯರ ಅನಿಸಿಕೆಗಳು | 195 |



ಮಾತಾ ಪಿತೃಗಳು–ಶ್ರೀ ಶೇಷಾಚಾರ್ಯ, ಶ್ರೀಮತಿ ರಂಗಮ್ಮ



ರಾಜಪುರೋಹಿತ ಕುಟುಂಬ

ಎಡದಿಂದ : ಸುಧಾ, ಪ್ರಕಾಶ, ಪತ್ನಿ ಸೀತಾ, ಪೂರ್ಣಿಮಾ, ರಾಜಪುರೋಹಿತ ಮತ್ತು ಗೀತಾ



ಗ್ರ್ಯಾಜುಯೇಟ್ ಸತ್ಯಾಗ್ರಹಿ



1944 - ಹೈದರಾಬಾದಿನಲ್ಲಿ ನಾಡು ಹಬ್ಬ. ಈ ಸಮಿತಿಯ ಕಾರ್ಯದರ್ಶಿಯಾಗಿ ಎಡದಿಂದ ಮೂರನೆಯವರು ರಾಜಪುರೋಹಿತರು



ಆದವಾನಿಯಲ್ಲಿ ಕನ್ನಡಿಗರ ಸ್ನೇಹ ಸಮ್ಮೇಳನ 1970-71. ಎಡದಿಂದ : ಸರ್ವಶ್ರೀ ಕೆ. ವಿರೂಪಾಕ್ಷ ಗೌಡ, ನಾರಾಯಣ ಮಾನೆ, ಆತಿಥೇಯರು, ಎನ್. ಎಂ. ಕೆ. ಸೋಗಿ, ರಾಜಪುರೋಹಿತ, ಜಿ. ನಾರಾಯಣ, ಶಾಂತರಸ, ಈಶ್ವರ ಚಂದ್ರ




ದಿಲ್ಲಿಯಲ್ಲಿ ಅಖಿಲ ಭಾರತ ರಾಜಭಾಷಾ ಸಮ್ಮೇಳನದ ವೇದಿಕೆಯ ಮೇಲೆ



ಪ್ರಧಾನ ಮಂತ್ರಿಯವರ ಹಿಂದಿ ಭಾಷಣವನ್ನು ಕನ್ನಡೀಕರಿಸುತ್ತಿರುವುದು




ಶಿವಮೊಗ್ಗ ಸಾಹಿತ್ಯ ಸಮ್ಮೇಳನದಲ್ಲಿ



ಇತರ ಸಾಹಿತಿ ಹಿರಿಯ ಮಿತ್ರರೊಡನೆ



ಜಿಲ್ಲಾ ಸಾಹಿತ್ಯ ಸಂಸ್ಕೃತಿ ಸಂಘ, ವಿಜಾಪುರದಲ್ಲಿ ಸನ್ಮಾನ



ಡಾ. ಎಂ. ಎಸ್. ಸುಂಕಾಪುರ ಅವರಿಂದ ಸನ್ಮಾನ




ಕನ್ನಡ ಅಭಿವೃದ್ಧಿ ನಿರ್ದೇಶನಾಲಯದ ಒಂದು ಸಮಾರಂಭದಲ್ಲಿ



"ಕನ್ನಡ ಶೀರ್ಷಿಕೆಗಳು" ಗ್ರಂಥಕ್ಕೆ ವಿಶೇಷ ರಾಜ್ಯಪ್ರಶಸ್ತಿ



ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪ್ರದಾನ 1979

# ಬದುಕು ಬೆಳಕು

ಜಯತೀರ್ಥ ರಾಜಪುರೋಹಿತ

ಕನಕಗಿರಿ

## ಮನೆತನ

ನನಗೆ ನೆನಪಿರುವ ಮಟ್ಟಿಗೆ ನಮ್ಮದೇನೂ ಅಗರ್ಭ ಶ್ರೀಮಂತ ಮನೆತನವಾಗಿರಲಿಲ್ಲ. ಹಾಗೆಂದು ನಮ್ಮನ್ನು ಬಡವರೆಂತಲೂ ಸುತ್ತಲಿನ ಜನ ತಿಳಿದಿರಲಿಲ್ಲ. ನಮ್ಮೂರಾದ ಕನಕಗಿರಿಯ ಇತರ ಬಡ ಬ್ರಾಹ್ಮಣ ಕುಟುಂಬಗಳ ಸ್ಥಿತಿಗಿಂತ ನಾವು ಸುಸ್ಥಿತಿಯಲ್ಲೇ ಇದ್ದೆವು. ನನ್ನ ಬಾಲ್ಯದಲ್ಲಿ ಅಕ್ಕಿಯ ಅನ್ನ ಉಣ್ಣುವವರು ಬಡವರಲ್ಲ ಎಂಬ ಗ್ರಹಿಕೆಯಿತ್ತು. ನಮ್ಮ ಮನೆಯಲ್ಲಿ ಅಕ್ಕಿ ಅನ್ನ ಉಣ್ಣುತ್ತಿದ್ದೆವು. ಒಮ್ಮೊಮ್ಮೆ ನನಗೆ, ನಮ್ಮ ತಂದೆಗೆ ಮಾತ್ರ ಅಕ್ಕಿ ಅನ್ನ. ಅಂದರೆ ನಮ್ಮ ತಾಯಿ, ಅಜ್ಜಿಯರು ನವಣಕ್ಕಿ ಅನ್ನ ಉಣ್ಣುತ್ತಿದ್ದರೂ ಸಹ ನಾವು ಉಳ್ಳವರೆಂದೇ ಜನ ಭಾವಿಸಿದ್ದರು. ಅಷ್ಟೇ ಏಕೆ ನಮ್ಮ ಅಜ್ಜಿ ಬಹಳಷ್ಟು ಚಿನ್ನ, ನಾಣ್ಯ ಹುಗಿದಿಟ್ಟಿದ್ದಾಳೆಂದು ಜನ ಆಡಿಕೊಳ್ಳುತ್ತಿದ್ದುದನ್ನೂ ನಾನು ಕೇಳಿದ್ದೆ. ಸಾಲದ್ದಕ್ಕೆ ಸಂಸ್ಕೃತ ಪಂಡಿತನಾಗಿ ಬೆಳೆದು, ಗಳಿಕೆಮಾಡದ ಏಕೈಕ ಪುತ್ರನಾದ ನಮ್ಮ ತಂದೆ ಪೀಡಿಸಿದಾಗಲೆಲ್ಲ ಹೆಣ್ಣು ಮಕ್ಕಳ ರೀತಿಯಲ್ಲಿ ಬಂಗಾರ ಮಾರಿಯೋ, ಒತ್ತೆ ಇಟ್ಟೋ ಹಣ ಒದಗಿಸಿ ಹಬ್ಬ ಹುಣ್ಣಿಮೆ ಜೋರಾಗಿ ಏರ್ಪಾಡಾಗುವಂತೆ ಅಜ್ಜಿ ನೆರವಾಗುತ್ತಿದ್ದಳು. ನಮ್ಮ ಸುಮಾರು 200 ಎಕರೆ ಹೊಲಗಳೂ ಆಗ ಚೆನ್ನಾಗಿ ಬೆಳೆದು ಮನೆ ತುಂಬ ಕಾಳುಕಡ್ಡಿ ಇರುತ್ತಿದ್ದುದನ್ನು ನಾನೂ ಕಂಡಿದ್ದೆ, ಜನರೂ ನೋಡುತ್ತಿದ್ದರು. ಅಂದ ಮೇಲೆ ನಮ್ಮದು ಬಡ ಮನೆತನ ಹೇಗಾದೀತು ? ಆಗ ನಮ್ಮ ಮನೆತನಕ್ಕೆ ನಮ್ಮ ತಂದೆಯ ತಾಯಿ ಜೀವಮ್ಮ – ಅಂದರೆ ನಮ್ಮ ಅಜ್ಜಿಯೇ ಕೇಂದ್ರವ್ಯಕ್ತಿ.

ಮಧ್ಯ ವಯಸ್ಕರಾದ ನಮ್ಮ ತಾತ ಶ್ರೀನಿವಾಸಾಚಾರ್ಯರಿಗೆ ಎರಡನೇ ಹೆಂಡತಿಯಾಗಿ ಲಗ್ನವಾಗಿ ಅನೇಕ ಮಕ್ಕಳನ್ನು ಹೆತ್ತರೂ, ಉಳಿದಾತ ಒಬ್ಬನೇ ಮಗ ನಮ್ಮ ತಂದೆ ಶೇಷಾಚಾರ್ಯರು. ಅವರಿಗೊಬ್ಬ ಅಕ್ಕ ಶೇಷಮ್ಮ. ಈ ಮಗ ಕೇವಲ

ನಾಲ್ಕು ವರ್ಷದವನಿದ್ದಾಗ ವಿಧವೆಯಾದ ನಮ್ಮ ಅಜ್ಜಿ ಈ ಮನೆತನ ನಿಲ್ಲಿಸಲು ಎಷ್ಟೋ ಹೆಣಗಾಡಿದ್ದಳು. ಈ ಅಜ್ಜಿಗೆ ನಾನೂ ಬಹಳ ವರ್ಷಗಳ ವರೆಗೆ ಒಬ್ಬನೇ ಮೊಮ್ಮಗನಾಗಿದ್ದೆ. ಅದಕ್ಕೆಂದೇ ನನಗೆ ನಮ್ಮ ತಂದೆ ತಾಯಿಗಿಂತ ಅಜ್ಜಿಯ ಸಲುಗೆ ಮಮತೆಯೇ ಹೆಚ್ಚಾಗಿತ್ತು. ಹೆಚ್ಚೆಂದರೇನು ? ಮಾಸ್ತರ್ ಬಸಲಿಂಗಯ್ಯನವರು ಶಾಲೆಗೆ ಕರೆಯಬಂದಾಗ ನನಗೆ ಅಜ್ಜಿಯ ಸೆರಗಿನ ಮುಸುಕೇ ಆಶ್ರಯದ ನಿರ್ಭಯ ಸ್ಥಾನ. ಅವರು ಮುಟ್ಟುವಂತಿಲ್ಲ; ನಾನು ಬಿಡುವಂತಿಲ್ಲ. ಅಂತೂ ಶಾಲೆ ವರ್ಜ್ಯ. ನಮ್ಮದು ಜೋಯಿಸರ ಮನೆತನ. ಈಗಲೂ ಇಪ್ಪತ್ತು ಹಳ್ಳಿಗಳ ಜೋಯಿಸ ಕೆಲಸ ನಮ್ಮದೇ.

## ಪೂರ್ವಿಕರು

ಬಹುಶಃ ನಮ್ಮ ತಾತ ಬರೆದಿಟ್ಟ ಒಂದು ವಂಶಾವಳಿಯೂ ನಮ್ಮ ಮನೆತನಕ್ಕಿದೆ. ಅದರಲ್ಲಿ ಯಾವ ಯಾವ ಭಟ್ಟರಿಂದಲೋ ಆರಂಭವಾಗಿ ಮುಂದೆ ಆಚಾರ್ಯತ್ವ ವನ್ನು ಪಡೆದಿದ್ದಾರೆ ನಮ್ಮ ಹಿರಿಯರು. ಮಾಧ್ವರೆಲ್ಲ ಆಚಾರ್ಯರಾಗುವ ಮುಂಚೆ ಭಟ್ಟರೇ ಆಗಿದ್ದರಲ್ಲ ? ಈ ಎಲ್ಲ ನಮ್ಮ ಪೂರ್ವಿಕರು, ವಿದ್ವಾಂಸರೋ, ಮೂರ್ಖರೋ, ದಡ್ಡರೋ ಎಂಬುದನ್ನು ನಾನು ಹೇಳಲಾರೆ. ಅವರು ಬರೆದೂ ಇಟ್ಟಿಲ್ಲ. ನಮ್ಮ ತಾತ ಮಾತ್ರ ಸ್ವಲ್ಪ ಜ್ಯೋತಿಷ್ಯ, ಯಾಜ್ಞಿಕ. ಮತ್ತಿಷ್ಟು ಪುರಾಣ ಗಳ ಜ್ಞಾನವುಳ್ಳವರಾಗಿದ್ದಿರಬಹುದೆಂದು ಆತ ಬರೆದಿಟ್ಟ ಪುಸ್ತಕಗಳಿಂದ ಊಹಿಸ ಬಹುದು. ನಮ್ಮ ತಂದೆಯಂತೂ ಸಂಸ್ಕೃತ ವಿದ್ವಾಂಸ, ಖ್ಯಾತ ಪುರಾಣಿಕರಾಗಿದ್ದರು. ಪುಸ್ತಕವಿಲ್ಲದೆ ಭಾಗವತ ಹೇಳುವಷ್ಟು ಸಾಧನೆ ಅವರದು.

ನಮ್ಮ ಪೂರ್ವಿಕರಲ್ಲೊಬ್ಬ ಅಷ್ಟೇನು ಸಂಭಾವಿತ ಚರಿತ್ರೆಯುವನಿದ್ದಿಲ್ಲ ವೆಂಬುದು ನಮ್ಮ ಮನೆಯಲ್ಲಿ ದೊರೆತ ಕೆಲವು ಸನದುಗಳಿಂದ ತಿಳಿದು ಬರುತ್ತದೆ. ಈ ಮನುಷ್ಯ 'ಬೇಮಾನಿ' ಮಾಡಿದುದಕ್ಕಾಗಿ ಅರಮನೆಯ ಪೌರೋಹಿತ್ಯದಿಂದ ಆತನನ್ನು ವಜಾ ಮಾಡಿ ನಮ್ಮ ಪೂರ್ವಿಕರಲ್ಲಿ ಮತ್ತೊಬ್ಬನಿಗೆ ಆ ಹಕ್ಕು ಕೊಟ್ಟಂತೆ ಕಾಣುತ್ತದೆ. ಇದೆಂಥ 'ಬೇಮಾನಿಯೋ ?' ಅರಮನೆಯ ಒಳಗೆ ನಡೆದದ್ದೋ ? ಹೊರಗೆ ನಡೆದದ್ದೋ ? ಅದರ ವಿವರಗಳಂತೂ ಇಲ್ಲ.

ವಿಜಯನಗರದ ಅರಸರಿಗೆ ಪಾಳೇಗಾರರಾಗಿ ಬೆಳೆದ ಕನಕಗಿರಿಯ ನಾಯಕರಿಗೆ ನಮ್ಮ ಪೂರ್ವಿಕರು ಪುರೋಹಿತರಾಗಿದ್ದಂತೆ ದಾಖಲೆಗಳಿವೆ. ಹಿರಿಯ ಶಾಖೆಗೆ ಸಂತಾನವಿಲ್ಲವಾಗಿ ಈ ರಾಜ ಪೌರೋಹಿತ್ಯ ನಮ್ಮ ಶಾಖೆಗೆ ಸೇರಿದಂತೆ ಕಾಣುತ್ತದೆ. ಆ ಮೂಲಕ ಸಂಬಂಧಿತ ಜಮೀನುಗಳೂ, ಮಾನ ಮರ್ಯಾದೆಗಳೂ ಸೇರಿರಬೇಕು. (ಈಗ ಅವೆಲ್ಲ ಹೋಗಿವೆ.) ಅಂತೂ 'ರಾಜಪುರೋಹಿತ' ಶಬ್ದದ ಬಳಕೆ ಒಂದು ಪ್ರತಿಷ್ಠೆಯ ಗುರುತಾಗಿ ನಮ್ಮ ತಂದೆ ಹೆಚ್ಚಾಗಿ ಬಳಕೆಗೆ ತಂದರು. ಅದನ್ನೇ ನಾನು

ಬಳಸುತ್ತಿದ್ದೇನೆ. ನಮಗೆ ಬರೀ ಹೆಸರಿನಿಂದ ಸಮಾಧಾನವೆಲ್ಲಿ ? ಪುಂಡರೂ ದರೋಡೆಕೋರರೂ, ನಾಯಕರಾಗಿ, ನಾಯಕಾಚಾರ್ಯರಾಗಿ, ರಾಜರಾಗಿ ಹೇಳಲು ಗೋತ್ರವಿಲ್ಲದೆ ಪುರೋಹಿತರು ಸೂಚಿಸಿದ ಧನುರ್ಧಾರಿ, ಖಡ್ಗಧಾರಿ–ಇನ್ನೇನೋ ಗೋತ್ರ ಹಚ್ಚಿಕೊಂಡು ಚಂದ್ರನನ್ನೋ, ಸೂರ್ಯನನ್ನೋ ವಂಶ ಗೌರವಕ್ಕಾಗಿ ಆಶ್ರಯಿಸುವುದಿಲ್ಲವೆ ? ಹಾಗೆಯೇ ಪರೋಪಜೀವಿಗಳಾದ ಪುರೋಹಿತರಿಗೂ ಅದೇ ಭ್ರಮೆ. ಇಂಥದಕ್ಕೆ ಮನ್ನಣೆ, ಲಾಭ ಎರಡೂ ಇರುವಾಗ ಯಾರು ಬಿಟ್ಟಾರು ? ಈಗಲೂ ರಾಜಕೀಯ ಅಥವಾ ಆರ್ಥಿಕ ಕ್ಷೇತ್ರಗಳಲ್ಲಿ ಹೇಗೆ ಹೇಗೋ ಮುಂದೆ ಬಂದವರು, ಹಿಂದೆ ನೋಡಿಕೊಂಡಾಗ ಅಷ್ಟೇನೂ ಭವ್ಯ ಪರಂಪರೆ ತಮಗಿಲ್ಲ ದುದನ್ನು ಗಮನಿಸಿ, ತಮ್ಮ ಗತ ಇತಿಹಾಸಕ್ಕೆ ಸ್ವಾತಂತ್ರ್ಯ ಹೋರಾಟ, ಸಮಾಜ ಸೇವೆಗಳ ಸಂದಿಗ್ಧ ಹಿನ್ನೆಲೆಯನ್ನೋ, ಮತ್ತೇನನ್ನೋ ಸೇರಿಸಿಕೊಳ್ಳಲು ಹೆಣಗುವು ದಿಲ್ಲವೆ ?

## ಜನನ ಬಾಲ್ಯ

ನಮ್ಮ ತಂದೆ ಹಾಗೂ ತಾಯಿ ರಂಗಮ್ಮನಿಗೆ ನಾನು ಮೂರನೆಯ ಮಗ. ಒಟ್ಟು ಹನ್ನೆರಡು ಮಕ್ಕಳನ್ನು ನಮ್ಮ ತಾಯಿ ಹಡೆದರೂ ಉಳಿದವರು ನಾನು ಮತ್ತು ನನ್ನ ತಮ್ಮ ನರಸಿಂಹ. ಅವನಿಗೂ ನನಗೂ ಹದಿನಾರು ವರ್ಷಗಳ ಅಂತರ. ನನಗೀಗ ಐವತ್ತೈದು ವರ್ಷ. 1925ರ ಆಷಾಢ ಬಹುಳ ಅಮಾವಾಸ್ಯೆ ಆದಿತ್ಯವಾರ ಅರ್ಧ ರಾತ್ರಿಯಲ್ಲಿ ಆಶ್ಲೇಷಾ ನಕ್ಷತ್ರದಲ್ಲಿ ಜನಿಸಿದೆನೆಂದು ನಮ್ಮ ತಂದೆ ಪ್ರಾಸಬದ್ಧವಾಗಿ ಹೇಳುತ್ತಿದ್ದರು. ಹುಲಿ ಹೈದರದ ನಮ್ಮ ಸೋದರತ್ತೆಯ ಮನೆಯಲ್ಲಿ ಹುಟ್ಟಿದೆನಂತೆ. 'ಡಿಂಡಿಮ' ನನ್ನ ಜನ್ಮನಾಮವಂತೆ.

ನಾನು ಹುಟ್ಟುವ ಮುಂಚೆ, ನಮ್ಮ ತಂದೆ ಮಳಖೇಡದಲ್ಲಿ ಜಯತೀರ್ಥರ (ಟೀಕಾ ರಾಯರು) ವೃಂದಾವನದ ಹತ್ತಿರ ಕೆಲ ದಿನ ಪಾರಾಯಣ ಮಾಡಿದ್ದರಂತೆ. ಅದೇ ಪ್ರಭಾವವನ್ನು ನೆನೆದು ನನಗೆ ಆ ಹೆಸರನ್ನಿಡಲಾಯಿತೆಂದೂ ನಮ್ಮ ತಂದೆ ಇತ್ತೀಚೆಗೆ ಹೇಳುತ್ತಿದ್ದರು. ಇದ್ದೀತು.

ಆದರೆ ನಮ್ಮ ತಂದೆ, ನನ್ನ ತಾಯಿಯನ್ನು ನಾ ಹುಟ್ಟುವಾಗ ನಡೆಸಿಕೊಳ್ಳುತ್ತಿದ್ದ ವಿಚಾರ ನಮ್ಮ ಅಜ್ಜಿಯ ಬಾಯಿಂದ ಕೇಳಿದಾಗ ನನಗೇ ಆಶ್ಚರ್ಯವಾಗುತ್ತಿತ್ತು. ನಮ್ಮಪ್ಪ ಶೀಘ್ರ ಕೋಪಿ: ಅಷ್ಟೇ ಮೃದು. ಆತನ ಬೌದ್ಧಿಕ ಮಟ್ಟಕ್ಕೆ ಸರಿಯಾಗಿ ಅನಕ್ಷರಸ್ಥಳಾದ ನಮ್ಮ ತಾಯಿ ಇಲ್ಲವಲ್ಲ ಎಂಬ ಕೊರಗು ಆತನನ್ನು ಕಾಡುತ್ತಿತ್ತು. ಇದನ್ನು ನಾನು ದೊಡ್ಡವನಾದ ಮೇಲೂ ಗಮನಿಸಿದ್ದೆ. ತಾಯಿ ಮನೆಯ ಹಿರಿಯರ ವ್ಯಾಪಕ ಅಂಕೆಯಲ್ಲಿ ಬೆಳೆದು ಸ್ವಲ ಮುಂದವಾದುದೂ ನಿಜವಿತ್ತು.

ಮನೆಯಿಂದ ಓಡಿ ಹೋಗುವುದು ಬಹುಶಃ ನಮ್ಮಪ್ಪನಿಂದ ನಮಗೆಲ್ಲ ಬಂದ

ಬಾಳಿಯೆಂದು ಕಾಣುತ್ತದೆ. ಅವರು ತಮ್ಮ ಹದಿನಾಲ್ಕನೇ ವಯಸ್ಸಿನಲ್ಲೇ ಓಡಿ ಹೋಗಿ ಬಿಜಾಪುರ, ಪುಣೆಗಳಲ್ಲಿ ಎಂಟು ಹತ್ತು ವರ್ಷ ಕಳೆದು ಸಂಸ್ಕೃತ ಓದಿ ಬಂದರು. ನಾನೂ ಸಂಸ್ಕೃತ ಓದುತ್ತಿದ್ದಾಗ ಕೊಪ್ಪಳದಿಂದ ಆ ವಿದ್ಯೆಯೇ ಬೇಕಾಗಿಲ್ಲ ವೆಂದು ಪತ್ರ ಬರೆದಿಟ್ಟು ಓಡಿಹೋಗಿದ್ದೆ. ಇತ್ತೀಚೆಗೆ ನನ್ನ ಮಗನೂ ಒಬ್ಬ ಓದಿನ ಸಂಬಂಧದಲ್ಲೇ ಓಡಿಹೋಗಿದ್ದ. ಆದರೆ ಎಲ್ಲರೂ ಮರಳಿ ಮನೆ ಸೇರಿದೆವೆನ್ನಿ.

ವಿದ್ವಾಂಸರಾಗಿ ಬಂದ ಹೊಸದರಲ್ಲಿ ರಾತ್ರಿಯೆಲ್ಲ ನಮ್ಮ ತಂದೆ ಶಾಕುಂತಲ ವನ್ನೋ, ಮಾಘಕಾವ್ಯವನ್ನೋ ಮೆಲಕು ಹಾಕುತ್ತ ಕೂತಿರಬೇಕಂತೆ. ನಮ್ಮ ತಾಯಿ ಹಾಗೇ ಮೂಲೆಯಲ್ಲಿ ನಿಂತಿರಬೇಕಂತೆ. ಸುಸ್ತಾಗಿ ಕೂತು, ತೂಕಡಿಸಿ ಯಾವಾ ಗಲೋ ನಿದ್ದೆ ಹತ್ತಬೇಕು. ತಾಯಿಗೆ ಮಾನಸಿಕ ವೇದನೆಯಂತೂ ಆಗಿರಬೇಕು. ಆದರೆ ಆದಾವುದೋ ಕಾವ್ಯಮಯ ರಸನಿಮಿಷದ ಪರಿಣಾಮವಿರಬೇಕು. ಆ ದಿನ ಗಳಲ್ಲಿ ನನ್ನನ್ನು ಹೊತ್ತು ಹೆತ್ತ ತಾಯಿ, ಅದನ್ನರಗಿಸಿಕೊಂಡು ನನ್ನಲ್ಲಿ ಕಿಂಚಿತ್ ಮೂಡಿ ಬೆಳೆಯುವಂತೆ ಮಾಡಿರಬೇಕು. ಆಕೆ ಗಂಡನಿಂದ ಹೊಡೆತ ತಿನ್ನುವುದನ್ನಂತೂ ನಾನು ದೊಡ್ಡವನಾದ ಮೇಲೂ ನೋಡಿದ್ದೆ.

ಬಾಲ್ಯದಲ್ಲಿ ನಮ್ಮ ಅಜ್ಜಿ ಮುದ್ದಿನಿಂದ ತಿನ್ನಿಸುತ್ತಿದ್ದ ಬೆಣ್ಣೆ, ನನ್ನ ಸೋದ ರತ್ತೆಯ ಮಗಳು ರಮಾನೊಂದಿಗೆ ಆಡುತ್ತಿದ್ದ ಆಟಗಳು, ಮನೆಯಲ್ಲಿ ಸಂಜೆ ನಡೆಯುತ್ತಿದ್ದ ಭಜನೆ, ಏಳು ಮೈಲಿಗಳ ದೂರದಲ್ಲಿ ಇರುವ ಹುಲಿ ಹೈದರ, ಅಲ್ಲಿಯ ಚೆಲುವೆ ರಾಣಿ ಗೌರಮ್ಮ, ಆಕೆ ನನಗೆ ಕೊಡುತ್ತಿದ್ದ ಬೇಸನ್ ಉಂಡಿ, ನಮ್ಮ ಅಕ್ಕರೆಯ ಶೀನಪ್ಪ ಮಾವ, ಸೋದರತ್ತೆ ಶೇಷಮ್ಮ, ಅವರ ಧೀರ ಮಗ ಧೀರೇಂದ್ರ (ಈಗ ಹಿರಿಯ) ಅಲ್ಲಿಯ ಮಾವಿನ ಹಣ್ಣಿನ ಸುಗ್ಗಿ, ನಮ್ಮೂರ ಗರುಡೋತ್ಸವದ ದೀವಟಿಗೆಗಳು, ಕನಕಗಿರಿಯ ಜಾತ್ರೆ, ಹುರ್ರಿ ಕುಣಿತ, ದೇವರ ಬಸವಿಯರು ಇವೆಲ್ಲವುಗಳ ನೆನಪಿರುವಂತೆ, ಅಪ್ಪ ನನಗೆ ಆರೇಳನೆಯ ವಯಸ್ಸಿನಲ್ಲಿಯೇ ಕಲಿಸು ತ್ತಿದ್ದ ಸಂಸ್ಕೃತ ಶ್ಲೋಕಗಳೂ, ದಾಸರ ಹಾಡುಗಳೂ, ಮಣಿ ಮಂಜರಿ ಮೊದ ಲಾದ ಕಾವ್ಯಗಳ ಪಾಠಗಳೂ ಅವನ್ನು ಸರಿಯಾಗಿ ಮಾಡದಿದ್ದಾಗ ತಿನ್ನುವ ಏಟು ಗಳೂ ನೆನಪಿವೆ. ನನ್ನ ತಂದೆ ನನಗೆ ಕಲಿಸುವುದಕ್ಕಿಂತ ಹೊಡೆಯುವುದೇ ಹೆಚ್ಚೆಂ ಬುದು ನನ್ನ ಅಜ್ಜಿಯ ಅಭಿಪ್ರಾಯವಾಗಿತ್ತು. ಅಂತೂ ಅಜ್ಜಿಯ ಗದರಿಕೆ ಕೇಳಿ ನಮ್ಮಪ್ಪ ಬಿಟ್ಟುಕೊಟ್ಟಾಗ ಮಾತ್ರ ನನಗೆ ಸಂಗ್ಯಾ, ಸಿದ್ದಾ, ಬಾಳ್ಯಾ,ಮಡಿವಾಳಪ್ಪ, ಚೆನ್ನಾ—ಮೊದಲಾದವರೊಂದಿಗೆ ಗಜ್ಜುಗ, ಸರಮುನಿ ಆಡುವ ಅವಕಾಶ ಸಿಕ್ಕುತ್ತಿತ್ತು. ಶೂದ್ರ ಹುಡುಗರೊಂದಿಗೆ ಹೋಗಬಾರದೆಂಬುದು ಅಪ್ಪನ ನಂಬಿಕೆ. ಬ್ರಾಹ್ಮಣ ಹುಡುಗರಲ್ಲಿ ಕೆಲವರಿಗೆ ನನ್ನನ್ನು ಕಂಡರಾಗುತ್ತಿದ್ದಿಲ್ಲ. ಮಂತ್ರ, ಪಾಠಗಳಲ್ಲಿ, ಶಾಲೆ ಯಲ್ಲಿ ಕೆಲ ವಿಷಯಗಳಲ್ಲಿ ನನ್ನ ಮುನ್ನಡೆ ಬಹುಶಃ ಸ್ವಲ್ಪ ಅಸೂಯೆಗೆ ಕಾರಣ ವಿರಬೇಕು. ಉಳಿದವರಿಗೆ ಆ ಸಂಕಟವಿರಲಿಲ್ಲ.

ನನ್ನ ಶಾಲಾ ಜೀವನವೇ ಏಕೆ ? ಎಲ್ಲವೂ ಹಾರಿಕೆಯಲ್ಲೇ ನಡೆದಿದೆಯೆನ್ನ ಬೇಕು. ಓ ನಾಮ ತೀಡಿಸಿದ ಬಸಲಿಂಗಯ್ಯನವರು, ಅವರು ನೀಡುತ್ತಿದ್ದ, ಕಂಭಕ್ಕೆ ತಲೆಹಾಯಿಸುವ ಶಿಕ್ಷೆ, ಫಕೀರ ಸಾಹೇಬರು ಕಲಿಸಿದ ಉರ್ದು, ಎಲ್ಲವನ್ನೂ ಗಂಭೀರ ವಾಗಿ ಗಮನಿಸಿ ಜರ್‌ದಾ ಪಾನ್ ಸವಿಯುತ್ತ ನಮಗೆ ಇಂಗ್ಲೀಷ್ ಕಲಿಸುತ್ತಿದ್ದ ಸಂಗಪ್ಪ ಹೆಡ್ ಮಾಸ್ತರ್ ಮತ್ತು ಅವರು ಮೊನ್ನೆ ಮೊನ್ನೆ ಸಾಯುವವರೆಗೂ ನನ್ನಲ್ಲಿ ತೋರುತ್ತಿದ್ದ ಪ್ರೀತಿ, ಶಂಕರರಾಯರ ಇತಿಹಾಸ, ಭೂಗೋಳ ಪಾಠ, ಶಾಲೆಯ ಪಕ್ಕದ ಗುಡಿಸಲಲ್ಲಿ ಕರಿಯುತ್ತಿದ್ದ ಅಮರಪ್ಪನ ವಡೆಗಳು, ಅವನ್ನು ತಿಂದ ಮುಸುರೆಗಾಗಿ ಅಪ್ಪನ ಹೊಡೆತ. ನಾನು ಲೆಕ್ಕದಲ್ಲಿ ಅಷ್ಟಕ್ಕಷ್ಟೆ. ತೆಗ್ಗಿನ ಮನಿ ಬಾಳ್ಯಾ ಲೆಕ್ಕದಲ್ಲಿ ನನಗೆ ಗುರು. ಅವೆಲ್ಲ ಈಗ ಸ್ಮೃತಿಗಳಾಗಿವೆ. ಎರಡನೆಯ ವರ್ಗ ದಿಂದ ನಾಲ್ಕನೇ ವರ್ಗಕ್ಕೂ ಡಬಲ್ ಪ್ರಮೋಷನ್. ನಾಲ್ಕನೇ ವರ್ಗದಿಂದ ಆರನೇ ವರ್ಗಕ್ಕೆ ಮತ್ತೆ ಡಬಲ್ ಪ್ರಮೋಷನ್ ಆದಾಗ ನಾನು ನಮ್ಮೂರ ಪ್ರಾಥಮಿಕ ಶಾಲೆ ದಾಟಿ ಗಂಗಾವತಿಯ ಮಿಡ್ಲಸ್ಕೂಲಿಗೆ ಬಂದಿದ್ದೆ. ನನಗಾಗ ಹತ್ತು ವರುಷ ವಯಸ್ಸು ಸಹ ಇರಲಿಲ್ಲ.

ಏಳನೇ ವರ್ಗ ಸೇರುವದರೊಳಗಾಗಿ ನಮ್ಮಪ್ಪನಿಗೆ ನಾನು ವೈದಿಕ ಸಂಸ್ಕೃತ ವಿದ್ವಾಂಸನಾಗಬೇಕೆಂಬ ಹುರುಪು ಹೆಚ್ಚಾಯಿತು. ಆಗ ಒಬ್ಬನೇ ಮಗನಾಗಿದ್ದ ನನ್ನನ್ನು ಊರಿನಿಂದ ದೂರ ಕಳಿಸಲು ನಮ್ಮ ಅಜ್ಜಿಯೂ ಕೊರಗುತ್ತಿದ್ದಳು. ನನ್ನ ಎಂಟನೆಯ ವಯಸ್ಸಿನಲ್ಲಿ ಆಗ ಕಿನ್ನಾಳಿಗೆ ಬಂದಿದ್ದ ಶ್ರೀ ಸತ್ಯಧ್ಯಾನ ತೀರ್ಥಸ್ವಾಮಿ ಗಳ ಮತ್ತು ಇತರ ವಿದ್ವಾಂಸರ ಎದುರಿನಲ್ಲಿ ಚಿಕ್ಕ ಉಪನ್ಯಾಸವನ್ನು (ಹೇಳಿ ಕೊಟ್ಟಷ್ಟು) ಮಾಡಿ ಅವರಿಂದ ಬೆಳ್ಳಿ ಬಟ್ಟಲು ಬಹುಮಾನ ಪಡೆದಿದ್ದೆ. ಅವರು ನನ್ನನ್ನು ಸಂಸ್ಕೃತ ಅಧ್ಯಯನಕ್ಕೆ ತಿರುಗಿಸಲು ನಮ್ಮ ತಂದೆಗೆ ಸೂಚಿಸಿದ್ದರು. ಇದಾದ ನಂತರ ನನ್ನ ಸಂಸ್ಕೃತ ಕಾವ್ಯಗಳ ಅಧ್ಯಯನಕ್ಕೆ ವೇಗ ಬಂದಿತ್ತು. ನನಗೆ ಹನ್ನೆರಡು ವರ್ಷ ತುಂಬುವದರೊಳಗಾಗಿ ಪೂರ್ತಿ ರುಘುವಂಶ, ಕುಮಾರಸಂಭವ, ಕಿರಾತಾರ್ಜು ನೀಯ, ಸ್ವಲ್ಪ ಮಾಘಕಾವ್ಯಗಳ ಭಾಗಗಳನ್ನು ಮಧ್ವವಿಜಯ, ಮಣಿಮಂಜರಿ, ಇತ್ಯಾದಿ ಮತೀಯ ಕಾವ್ಯಗಳನ್ನು ಲಘುವ್ಯಾಕರಣಗಳನ್ನು ನಮ್ಮ ತಂದೆ ಕಲಿಸಿದ್ದರು. ಮೇಘದೂತ ಶಾಕುಂತಲ ಭಾಗಶಃ ಆಗಿತ್ತು.

ಆತನ ಸಿಟ್ಟು, ಹೊಡೆತ ಮರೆತರೆ ನಮ್ಮ ತಂದೆ ಪಾಠ ಹೇಳುವ ಕ್ರಮ ಚೆನ್ನಾ ಗಿತ್ತು. ನಾಲ್ಕು ಜನ ಸೇರುವ ಯಾವ ಸ್ಥಳದಲ್ಲೇ ಆಗಲಿ ನನ್ನನ್ನು ಮುಂದುಮಾಡಿ ಪದವನ್ನು ಹಾಡಲಿಕ್ಕೊ, ಉಪನ್ಯಾಸಕ್ಕೋ ಪ್ರೋತ್ಸಾಹ ಕೊಡುತ್ತಿದ್ದರು. ಆಗಾಗ ಒಮ್ಮೊಮ್ಮೆ ಬಾಲ್ಯ ಸಹಜ ಬೇಸರವೆನಿಸುತ್ತಿದ್ದರೂ, ಆ ಪ್ರಯತ್ನಗಳಿಂದ ಕಳೆದು ಹೋದ ಸಭಾಕಂಪ, ನಿರ್ಭೀತ ಚರ್ಚೆ, ಮಂಡನೆಯ ಧೈರ್ಯ ಮತ್ತು ಮುಂದಿನ

ನನ್ನ ಅಧ್ಯಯನಕ್ಕೆ ದೊರೆತ ಸಂಸ್ಕೃತ ಬುನಾದಿ ಇವುಗಳಿಗಾಗಿ ನಮ್ಮ ತಂದೆಯ ಉಪಕಾರವನ್ನು ಸ್ಮರಿಸಲೇಬೇಕು.

ಪ್ರಾಣೇಶದಾಸರು ರಚಿಸಿದ ಪೌರಾಣಿಕ ಕಥನ ಪದ್ಯಗಳನ್ನು ಬಳಸಿಕೊಂಡು ಹರಿಕಥೆ ಹೇಳುವುದನ್ನು ನಮ್ಮಪ್ಪ ಕಲಿಸಿದ್ದರು. ಹಲವೆಡೆ ಉತ್ಸವ ಆರಾಧನೆಗಳಲ್ಲಿ ಮಾಡಿಯೂ ಇದ್ದೆ. ಚಿಕ್ಕ ವಯಸ್ಸು; ನಾನು ಹೇಳುವ ಹಾಸ್ಯ ಸನ್ನಿವೇಶಗಳಲ್ಲಿ ನಾನೇ ನಗುತ್ತಿದ್ದೆನಂತೆ. ಅಂತೂ ಮುದುಕ ಮುದುಕಿ ಶ್ರೋತ್ರಿಯರು ಮೆಚ್ಚಿ ಹಾಲು, ಹಣ್ಣು ಕೊಡುತ್ತಿದ್ದರು.

ಅಂತೂ ನಾನು ಮಿಡ್ಲ ಸ್ಕೂಲ್ ಪರೀಕ್ಷೆ ಪಾಸಾಗಲಿಲ್ಲ. ಆ ಸಮಯಕ್ಕೆ ನನ್ನ ಆರೋಗ್ಯವೂ ಸ್ವಲ್ಪ ತೊಂದರೆ ಕೊಟ್ಟಿತ್ತು. ನಾನಾಗ ಭೋಗೇಶಾಚಾರ್ ವಕೀಲರ ಮನೆಯಲ್ಲಿ ಇದ್ದು ಓದುತ್ತಿದ್ದೆ. ಆ ದಂಪತಿಗಳು ತುಂಬ ಉದಾರಿಗಳು. ನಮ್ಮ ತಂದೆಯ ಸ್ನೇಹಿತರು ಕೂಡ. ಪರೀಕ್ಷೆಯಲ್ಲಿ ಫೇಲಾದನಂತರವೂ ಅವರಲ್ಲಿ ಇರುವುದು ನನಗೆ ಸಂಕೋಚವೆನಿಸಿತು. ವಕೀಲ ದಂಪತಿಗಳೇನೋ ಮುಂದುವರಿಸಲು ಹೇಳಿದರು. ಆದರೆ ಈ ನಡುವೆ ನಾನು ಸಂಸ್ಕೃತಕ್ಕೆ ತಿರುಗುವ ನಿರ್ಧಾರವಾಗಿತ್ತು ಮತ್ತೆ ಮನೆಯಲ್ಲಿ ಕೆಲ ದಿನ ಸಂಸ್ಕೃತದ ಕೃಷಿ ಜರುಗಿತು.

ಆಗೀಗ ನಮ್ಮ ಗುಮಾಸ್ತ ಶೇಷಭಟ್ಟನೊಂದಿಗೆ ಲಗ್ನ, ಶ್ರಾದ್ಧ, ಸತ್ಯನಾರಾಯಣ ವ್ರತ ಮಾಡಿಸುವಲ್ಲಿಯೂ ಹೋಗಿ ನೋಡಿಕೊಳ್ಳುತ್ತಿದ್ದೆ. ಒಮ್ಮೆ ಚಂದ್ರಾಸಾನಿಯ ಮನೆಯಲ್ಲಿ ಶ್ರಾದ್ಧ. ಎಲ್ಲ ಮುಗಿದು ಭಟ್ಟರಿಗೆ ದಕ್ಷಿಣೆಕೊಟ್ಟು ಅವರ ಪಾದಗಳಿಗೆ ತಲೆಹಚ್ಚಿದಳು. ಆಕೆಯ ಮುಖ, ಗಲ್ಲಗಳಸ್ಪರ್ಶದಿಂದ ಪುಳಕಿತಗೊಂಡ ಭಟ್ಟರು, ಆಕೆಯ ಎರಡೂ ರಟ್ಟೆಹಿಡಿದೆಬ್ಬಿಸಿ ಆಶೀರ್ವಾದ ಮಾಡಿದ್ದರು. ಸಾನಿ ನನ್ನ ಕಡೆಗೆ ತಿರುಗಿ ತುಂಟನಗೆ ಬೀರಿ ಕಣ್ಣು ಮಿಟುಕಿಸಿ "ಸಣ್ಣ ಸ್ವಾಮಿ ! ನಿನಗೆ ದಕ್ಷಿಣೆ ಬ್ಯಾಡ, ರಾತ್ರಿ ನಮ್ ಶಾಂತಿ ಹತ್ತರ ಬಂದುಬಿಡು" ಎಂದಿದ್ದಳು. ಶಾಂತಿ ನನಗಿಂತ ನಾಲ್ಕು ವರ್ಷ ಹಿರಿಯ ಹುಡುಗಿ; ಆಕೆಯ ಮಗಳು. ಈ ಹಾಸ್ಯ ಅರ್ಥವಾಗುವ ವಯಸ್ಸು ನನಗಿನ್ನೂ ಇರಲಿಲ್ಲ. ನಾನು ಮತ್ತೆಮತ್ತೆ ಕೇಳಿ ದಕ್ಷಿಣೆಯನ್ನೇ ಪಡೆದಿದ್ದೆ.

## ಶಾಸ್ತ್ರಾಧ್ಯಯನ ಮತ್ತು ಪಲಾಯನ

ಕೊಪ್ಪಳದಲ್ಲಿ ಇದ್ದು ತರ್ಕವೇದಾಂತ ಶಾಸ್ತ್ರಗಳಲ್ಲಿ ಖ್ಯಾತ ವಿದ್ವಾಂಸರಾಗಿದ್ದ ಶ್ರೀ ಹುಲಗಿ ಹುಚ್ಚಾಚಾರ್ಯರದು (ಈಗ ಅವರಿಲ್ಲ) ಪಾರಂಪರ್ಯವಾಗಿ ಪಾಠಪ್ರವಚನ ಮಾಡಿಕೊಂಡುಬಂದ ವಿದ್ವಾಂಸರ ಮತ್ತು ಸಾಧಕರ ಮನೆತನ. ಹುಚ್ಚಾಚಾರ್ಯರು ಉತ್ತರಾದಿಮಠದ ಪ್ರಖ್ಯಾತ ಯತಿಗಳಾಗಿದ್ದ ಶ್ರೀ ಸತ್ಯಧ್ಯಾನತೀರ್ಥರ ಸಾಕ್ಷಾತ್ ಶಿಷ್ಯರು. ತಮ್ಮ ಮನೆಯಲ್ಲಿ ವಿದ್ಯಾರ್ಥಿಗಳಿಗೆ ಊಟ ವಸತಿ ನೀಡಿ ಅಧ್ಯ

ಯನ ಮಾಡಿಸುತ್ತಿದ್ದ ಪರಂಪರೆ. ಶಿಷ್ಯಸಂಪ್ರದಾಯಕ್ಕೆ, ಶೀಲ, ಶಾಂತಿ ಸಂಯಮಗಳಿಗೆ ಹೆಸರಾದ ವ್ಯಕ್ತಿತ್ವ ಹುಚ್ಚಾಚಾರ್ಯರದು.

ನನ್ನ ಹದಿಮೂರನೇ ವಯಸ್ಸಿನ ಆರಂಭದಲ್ಲಿ ಈ ಗುರುಗಳ ಸನ್ನಿಧಾನ ಸೇರಿದೆ, ವೇದಾಂತಕ್ಕೆ ಮೊದಲು ತರ್ಕದ ಬುನಾದಿಬೇಕು. 'ತರ್ಕಸಂಗ್ರಹ' ಪಾಠದಿಂದ ನನ್ನ ಶಾಸ್ತ್ರಾಧ್ಯಯನ ಆರಂಭವಾಯಿತು. ಸ್ವಲ್ಪ ನನಗಿಂತ ಮುಂಚೆ ಸೇರಿದ್ದ ಸಂತೆಬಿದನೂರ ಭೀಮಸೇನಾಚಾರ್ಯನೂ ನನ್ನ ಸಹಪಾಠಿಯಾದ. (ಈಗ ಆತ ದೊಡ್ಡ ವಿದ್ವಾಂಸನಾಗಿದ್ದಾನೆ). ಆತನದೂ ಚುರುಕು ಬುದ್ಧಿ. ಪಾಠಗಳು ಚುರುಕಾಗಿ ಸಾಗುತ್ತಿದ್ದವು. ಆಚಾರ್ಯರ ಮನೆಯಲ್ಲೇ ಊಟ. ಹನುಮದೇವರ ಗುಡಿಯ ಪೌಳಿಯೊಳಗೆ ಇದ್ದ ಒಂದು ದೊಡ್ಡ ಕೋಣೆಯೇ ನಮ್ಮ ಪಾಠಶಾಲೆ ಮತ್ತು ವಿಶ್ರಾಂತಿ ಸ್ಥಳವಾಗಿತ್ತು.

ನಿಯಮಿತ ಜೀವನ. ಬೆಳಗಿನಲ್ಲಿ ಕೆರೆಯಲ್ಲೋ ಮನೆಯಲ್ಲೋ ತಣ್ಣೀರ ಸ್ನಾನ, ಸಂಧ್ಯಾವಂದನ, ಹಾಲಿನ ಸೇವನ, ಪಾಠ, ಚಿಂತನ, ಊಟ, ಮತ್ತೆ ಚಿಂತನ, ಸಾಯಂಕಾಲ ಸ್ವಲ್ಪ ತಿರುಗಾಟ – ರಾತ್ರಿ ಊಟ ಮತ್ತೆ ನಿದ್ದೆ ಬರುವವರೆಗೆ ಚಿಂತನ. ಹೀಗೆ ಯಾಂತ್ರಿಕವಾಗಿ ಸಾಗಿತ್ತು. ನಮ್ಮ ಪಾಠಶಾಲೆಯಲ್ಲಿದ್ದ ಶ್ರೀನಿವಾಸಮೂರ್ತಿ (ಈಗ ತುಮಕೂರ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರು) ಎಂಬ ಹಿರಿಯ ವಿದ್ಯಾರ್ಥಿ ಅಧ್ಯಯನ ನಡೆದಾಗಲೇ ಹರಿಪುರ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿಬಂದು ಸುಭಾಷ್‌ಚಂದ್ರ ಬೋಸರ ವ್ಯಕ್ತಿತ್ವದ ವರ್ಣನೆಯನ್ನು ಕಣ್‌ಕಟ್ಟುವಂತೆ ಹೇಳಿದ್ದ. ಕೆಲದಿನಗಳ ನಂತರ ಆತ ಪಾಠಶಾಲೆ ಬಿಟ್ಟುಹೋದ.

1935-36ರ ದಿನಗಳವು. ಭಾರತದಲ್ಲೆಲ್ಲ ರಾಜಕೀಯಗಾಳಿ ಬೀಸುತ್ತಿತ್ತು ಸಾಯಂಕಾಲದ ನಮ್ಮ ತಿರುಗಾಟಗಳಲ್ಲಿ ಕಾಲೇಜು, ಹೈಸ್ಕೂಲ್, ವಿದ್ಯಾರ್ಥಿಗಳು ಅತಿ ಗಂಭೀರವಾಗಿ ತಮಗೆ ತಿಳಿದಿದ್ದ ಅರ್ಧಮರ್ಧ ರಾಜಕೀಯ ವರದಿಗಳನ್ನು ಬಂದಷ್ಟು ಇಂಗ್ಲೀಷ್‌ನಲ್ಲಿ ಚರ್ಚಿಸುವದನ್ನು ಕೇಳುತ್ತಿದ್ದೆವು. ನನ್ನ ಕುತೂಹಲ ಕೆರಳುತ್ತಿತ್ತು, ನಮಗೆ ಹಾಗೆ ಪತ್ರಿಕೆಗಳನ್ನು ಓದುವ ಮತ್ತು ರಾಜಕೀಯ ಚರ್ಚಿಸುವ ಸಾಮರ್ಥ್ಯ ಇಲ್ಲವಲ್ಲ ಎನಿಸುತ್ತಿತ್ತು. ಆಗಾಗ ಬಂದುಹೋಗುತ್ತಿದ್ದ ನಮ್ಮ ಪ್ರೀತಿಯ ಸಂಗಪ್ಪ ಹೆಡ್‌ಮಾಸ್ತರರು ಹೇಗಾದರೂ ಸ್ಕೂಲ್‌ವಿದ್ಯೆ ಮುಂದುವರಿಸಲು ಒಂದೆರಡು ಸಲ ಹೇಳಿದ್ದರು. ಆಗೊಮ್ಮೆ ಈಗೊಮ್ಮೆ ಬೇರೆಯವರ ಮನೆಗೆ ಮಡಿಯಿಂದ ದೇವರಪೂಜೆ, ಊಟಗಳಿಗೆಂದು ಮಧ್ಯಾಹ್ನದವರೆಗೆ ಉಪವಾಸವಿದ್ದು ಹೋಗುತ್ತಿದ್ದ ನನಗೆ ಕ್ರಾಪು ಹಾರಿಸುತ್ತ ಗುರುರಾಜನ ಹೋಟಲ್ ಹೊಕ್ಕು ಯಥೇಚ್ಛ ತಿಂದು ಹೊರ ಬೀಳುವ ಸ್ಕೂಲು ವಿದ್ಯಾರ್ಥಿಗಳನ್ನು ಕಂಡು ಹೊಟ್ಟೆ ಕಿಚ್ಚಾಗುತ್ತಿತ್ತು. ನಾನೂ ಹಾಗಿದ್ದರೆ ? ಎಂದು ಅದೆಷ್ಟೋ ಸಲ ಅನಿಸುತ್ತಿತ್ತು. ಇನ್ನೊಬ್ಬ ಚಿಕ್ಕ ಶಿಷ್ಯನಿಂದ ಹೋಟಲ್ ಉಪ್ಪಿಟ್ಟು ತರಿಸಿ ಕದ್ದು ತಿನ್ನುತ್ತಿರುವಾಗ

ಒಮ್ಮೆ ಸಿಕ್ಕಿಬಿದ್ದಿದ್ದೆ. ನಮಗೆ ಊಟ ತಿಂಡಿಯ ಕೊರತೆ ಇತ್ತೆಂದಲ್ಲ. ಆಚಾರ್ಯರೇ ಸ್ವಂತ ಹಣಕೊಟ್ಟು ಹಣ್ಣು ತಿನ್ನಲು ಮತ್ತು ಹಾಲು ಕುಡಿಯಲು ಹೇಳುತ್ತಿದ್ದರು. ಹಣ್ಣಿನ ಅಂಗಡಿಯವನಿಗೇ ಅವರು ಹೇಳಿಬಿಟ್ಟಿದ್ದರು. ಆದರೂ ನನಗೆ ಅದೇನೊ ಕ್ರಾಪು, ಹೋಟಲ್ ತಿಂಡಿ, ರಾಜಕೀಯ ಚರ್ಚೆ, ಇಂಗ್ಲೀಷ್ ಟಿಪ್‌ಟಾಪ್ ಎಂದರೆ ಆಕರ್ಷಣೆ ಎನಿಸುತ್ತಿತ್ತು.

ಹೀಗಿದ್ದರೂ ಐದು ವರ್ಷ ಚೆನ್ನಾಗಿಯೇ ಅಧ್ಯಯನ ನಡೆಯಿತು. ತರ್ಕಶಾಸ್ತ್ರದ ಏಳೆಂಟು ಗ್ರಂಥಗಳಾದವು. ಮದ್ರಾಸ್ ಮಹಾಸಭೆಯಲ್ಲಿ (ಉತ್ತರಾದಿಮಠದ್ದು) ಪರಿಕ್ಷೆಯಾಗಿ ಸಂಭಾವನೆಗಳು ದೊರೆತವು. ಬಳ್ಳಾರಿಯಲ್ಲಿ ಸ್ವಾಮಿಗಳು ಚಾತುರ್ಮಾಸ್ಯಕ್ಕೆ ಕೂತಾಗ ಆಚಾರ್ಯರೊಂದಿಗೆ ಮಠದಲ್ಲೇ ನಾಲ್ಕು ತಿಂಗಳು ಇದ್ದು ಸ್ವಾಮಿಗಳ ಹತ್ತಿರ ಪಾಠ ಮಾಡುವ ಅವಕಾಶ ಸಿಕ್ಕಿತ್ತು. ಮುಂದೆ ಅದೇ ಪೀಠದ ಸ್ವಾಮಿಯಾದ ಕುಸೂನೂರ ವೆಂಕಣ್ಣಾಚಾರ್ಯರ ಸ್ನೇಹವೂ ಆಗಿತ್ತು. ಉತ್ತರಾದಿ ಮಠವೆಂದರೆ ಆಗ ಸಂಸ್ಕೃತ ವಿದ್ಯಾರ್ಥಿಗಳಿಗೂ ವಿದ್ವಾಂಸರಿಗೂ ಸ್ವರ್ಗವಾಗಿತ್ತು. ಬೇಕಾದಷ್ಟು ಪಕ್ವಾನ್ನ, ಹಣ್ಣು, ಹಂಪಲು, ಮಾನಸನ್ಮಾನಗಳು. ಆಗ ತಿಂದ ಪಕ್ವಾನ್ನಗಳ ರಸವೇ ನನ್ನ ಮೈಯ ಕೊಬ್ಬಿನ ಅಂಶವಾಗಿ ಇನ್ನೂ ಉಳಿದಿರಬೇಕು. "ಚತುರ್ದಶ ಲಕ್ಷಣಿ"ಯಂಥ ಪ್ರೌಢ ತರ್ಕಗ್ರಂಥವನ್ನು ಮುಗಿಸಿ, ಮಧ್ವವೇದಾಂತದ ಪ್ರಾರಂಭ ಗ್ರಂಥವಾದ ಪ್ರಮಾಣ ಪದ್ಧತಿಯ ಅಧ್ಯಯನ ಸಾಗಿತ್ತು. ತರ್ಕಶಾಸ್ತ್ರದ ಅಧ್ಯಯನವೂ ಮುಂದುವರಿಯಬೇಕಾಗಿತ್ತು.

ಆದರೆ ವಯೋ ಸಹಜ ತಳಮಳ ಹೆಚ್ಚುತ್ತಿತ್ತು. ವೈಚಾರಿಕತೆ ಚುಚ್ಚಿಚುಚ್ಚಿ ಎಬ್ಬಿಸುವಂತೆ ಅನಿಸುತ್ತಿತ್ತು. ಹರಿಕಥೆ, ಉಪನ್ಯಾಸ, ಕೀರ್ತನೆಗಳನ್ನು ಮಾಡುವ ರೂಢಿ, ಧೈರ್ಯಗಳಂತೂ ಇದ್ದೇ ಇದ್ದವು. ಇನ್ನೂ ಚಿಕ್ಕವನಿರುವಾಗಲೇ ಲಿಂಗಸೂರ, ಗಂಗಾವತಿ ಮುಂತಾದೆಡೆಗಳಲ್ಲಿ ಕೀರ್ತನೆ ಮಾಡಿದ್ದೆ. ಆ ನನ್ನ ಹರಿಕಥೆ ಕಿರ್ತನೆ ಕೇಳಿದ್ದ ನನ್ನ 'ಓರಗೆಯ ಹುಡುಗರು ಈಗ ದೊಡ್ಡವರಾಗಿ ಬೇರೆ ಬೇರೆ ಕಡೆಗೆ ಇದ್ದಾರೆ. ಕೆಲವರು ನನ್ನ ಸಹೋದ್ಯೋಗಿಗಳೂ ಆಗಿದ್ದಾರೆ. ಅವರು ನನ್ನ ಆಗಿನ ಕೀರ್ತನೆಗಳನ್ನು ಮೆಚ್ಚಿಕೆಯಿಂದಲೋ ವ್ಯಂಗ್ಯವಾಗಿಯೋ ಸ್ಮರಿಸುವದುಂಟು. ಕೀರ್ತನಕಾರನಾಗಿ ತಾಳಹಾಕುತ್ತ ತಿರುಗಬೇಕಾದವನು ಅಧಿಕಾರಿಯಾಗಿ, ಸಾಹಿತಿಯಾಗಿ ಮೇಲೆ ಬಂದನಲ್ಲ. ಎಂದೆನಿಸಿದ್ದೀತು. ಅದು ಅವರವರ ಹಣೆಬರಹವೆನ್ನಬೇಕಲ್ಲವೇ ? ಸಂಸ್ಕೃತ ವಿದ್ವಾಂಸನಾಗುವವನು ಕೀರ್ತನೆ ಮಾಡುವದು ಅಗೌರವ. ಒಬ್ಬರು ಕುಳಿತು ವ್ಯಾಖ್ಯಾನ ಮಾಡಿದರೆ ಇನ್ನೊಬ್ಬರು ನಿಂತು ಕಿರಿಚಿಕೊಳ್ಳುತ್ತಾರೆ. ನಾನೊಮ್ಮೆ ಕೀರ್ತನೆ ಮಾಡಿದಾಗ ನಮ್ಮ ಆಚಾರ್ಯರು ಆಡಿದ ಕಿವಿ ಮಾತು. ನಾನು ವಿದ್ವಾಂಸನಾಗಲು ಅವರ ಬಳಿಗೆ ಹೋಗಿದ್ದೆನಲ್ಲವೇ ? "ಪುರಾಣ ಅಥವಾ ಕೀರ್ತನೆ ಹೇಳುವದು ದರ್ಜೆಯಲ್ಲಿ ಕಮ್ಮಿ.*"

* ಪಾಂಡಿತ್ಯಹೀನಾಃ ಕವಯೋಭವಂತಿ । ಕವಿತ್ವಹೀನಾಸ್ತು ಪುರಾಣಭಟ್ಟಾಃ ॥
ಪುರಾಣಹೀನಾಃ ಕೃಷಿಮಾಶ್ರಯಂತಿ । ನಷ್ಟೇಕೃಷೌಭಾಗವತಾ ಭವಂತಿ ॥
—ಪಂಡಿತರಚೇಷ್ಟೆಯ ರಚನೆ

ಭಾರತೀಯರು ಪ್ರಧಾನವಾಗಿ ಪಾರಮಾರ್ಥಿಕ ದೃಷ್ಟಿಯವರೆಂದು ಹೇಳುವದು ಸರಿಯಲ್ಲವೆಂಬ ಸಂದೇಹ ನನಗೆ ಅನೇಕಸಲ ಬಂದಿದೆ. ನಮ್ಮ ಭಕ್ತಿ, ವಿಶ್ವಾಸ, ಆಚಾರ ದೇವತಾರ್ಚನೆ, ಪುರಾಣ, ಕೀರ್ತನೆ ಮಠ ಮಂದಿರಗಳೊಂದಿಗೆ ನಮಗಿರುವ ಸಂಪರ್ಕ, ಇವೆಲ್ಲವನ್ನೂ ನಮ್ಮ ನಮ್ಮ ಲೌಕಿಕಸ್ತರಗಳಿಂದಲೇ ನೋಡಿ, ಅಳೆಯುವ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದೇವೆ, ಇದೆಲ್ಲ ಲೌಕಿಕಮಯ. ಇದರಲ್ಲಿ ಪಾರಮಾರ್ಥಿಕತೆ ಅಥವಾ ಅಧ್ಯಾತ್ಮ ಎಂಥದು ? ಇಂಥ ಅಳತೆಗೆ ಸಿಲುಕದುದು, ಇದರ ಅಗತ್ಯವಿಲ್ಲದ್ದು ಏನಾದರೂ ಇದ್ದರೆ ಅದು ಆಧ್ಯಾತ್ಮಿಕವಾದೀತೇನೊ ? ಆಮೇಲೆ ರೂಪುಗೊಂಡ ಇಂಥ ವಿಚಾರಗಳ ಅಮೂರ್ತ ಬೆಳವಣಿಗೆ ಆಗ ಆರಂಭವಾಗಿರಬೇಕು.

ಮನೆತುಂಬ ಮಡಿ, ಆಚಾರ; ಹೊರಗೂ ಅದೆ. ಯಾವಾಗಲೂ ಸ್ವಪ್ರೇರಣೆ, ಶ್ರದ್ಧೆ ಇರುತ್ತಿತ್ತೆಂದಲ್ಲ. ಇದೆಲ್ಲ ಏನೋ ಕೃತಕ, ಡಾಂಭಿಕವೆನಿಸತೊಡಗಿತ್ತು. ಈ ನಡುವೆ ನನಗೆ ಲೌಕಿಕ ವಿದ್ಯಾಭ್ಯಾಸದ ವ್ಯವಸ್ಥೆ ಮಾಡಲು ನಮ್ಮ ತಂದೆಯನ್ನು ಕೇಳಿ ಕೊಂಡುದು ಫಲಿಸಲಿಲ್ಲ. ಈ ಎಲ್ಲ ತಮುಲದಲ್ಲಿ ಪಲಾಯನದ ದಾರಿಕಂಡಿತು. ಬಹುಶಃ ಆಗಾಗ ಕದ್ದು ಸಿನೇಮಾ ನೋಡುತ್ತಿದ್ದ ಪ್ರೇರಣೆಯೂ ಇರಬೇಕು.

ಒಂದು ರಾತ್ರಿ "ಈ ಸಂಸ್ಕೃತವಿದ್ಯೆ ನನಗೆ ಬೇಕಿಲ್ಲ"ವೆಂದು ಬರೆದಪತ್ರವೊಂದನ್ನು ಆಚಾರ್ಯರಿಗೆ ಕೊಡಲು ನನ್ನ ಸಹಪಾಠಿ ಭೀಮಸೇನನಿಗೆ ಹೇಳಿ ರಾತ್ರಿ ರೈಲಿಗೆ ರಾಯಚೂರ್ ಟಿಕೆಟ್ ತೆಗೆದುಕೊಂಡು ಹೊರಟುಬಿಟ್ಟೆ. ನಮ್ಮ ಆಚಾರ್ಯರ ಮೃದು ಮನಸ್ಸಿಗೆ ಆಘಾತವಾಗಿರಬೇಕು. ರಾಯಚೂರಿನಲ್ಲಿ ನಮ್ಮ ಬಂಧುಗಳ ಹತ್ತಿರ ತಾತ್ಕಾಲಿಕ ಆಶ್ರಯ ಸಿಕ್ಕಿತು.

## ಪಂಚಶಿಖಾಮುಂಡನ

ಅಪ್ರಬುದ್ಧ ಮನಸ್ಸು, ಅಪ್ರಬುದ್ಧ ವಿಚಾರವೆಂದು ಈಗ ಅನಿಸುತ್ತಿದೆ. ಸಂಗೀತದ ಅಧ್ಯಯನಕ್ಕಾಗಿ ಬಡೋದೆಗ ಹೋಗಬೇಕು ಅಥವಾ ಚಲಚ್ಚಿತ್ರ ಸೇರಬೇಕೆಂಬ ವಿಚಾರಗಳೂ ಸುಳಿದುಹೋದವು.(ಈಗ ನನ್ನ ಹಿರಿಯ ಮಗಳು ಸೌ. ಗೀತಾ ಬಡೋದೆಯಲ್ಲಿ ಹಿಂದೂಸ್ತಾನಿ ಸಂಗೀತದಲ್ಲಿ ಪ್ರೌಢಸಾಧನೆ ಮಾಡುತ್ತಿದ್ದಾಳೆ.) ಕೈಯಲ್ಲಿ ಕಾಸಿರಲಿಲ್ಲ. ಒಬ್ಬ ಬಹುಶಿಷ್ಟ ವಿದ್ವಾಂಸರು ನನ್ನ ಚಿನ್ನದ ಉಂಗುರವನ್ನು ಒತ್ತೆ ಇಟ್ಟುಕೊಂಡು ಹತ್ತುರೂಪಾಯಿಕೊಟ್ಟು ಅದಕ್ಕೆ ತಿಂಗಳಿಗೆ ಒಂದುರೂಪಾಯಿ ಬಡ್ಡಿ ಮುರಿದುಕೊಂಡು ಬಹಳ ಧಾರ್ಮಿಕ ಕಾರ್ಯಮಾಡಿದೆವೆಂದು ತೃಪ್ತರಾದರು. ನಾನೀಗ ಹಣ ಸಂಪಾದನೆಗೆಂದು ಗದ್ವಾಲ್ ರಾಜ ನಡೆಸುತ್ತಿದ್ದ ಸಭೆಗೂ ಮಂತ್ರಾಲಯದಲ್ಲಿ ಆರಾಧನೆಯಲ್ಲಿ ನಡೆಯುವ ಸಭೆಗೂ ಹೋದೆ. ನಾನು ಓದಿದ ತರ್ಕ ಗ್ರಂಥಗಳ ಪರೀಕ್ಷೆಯಾಯಿತು. ಕಿಂಚಿತ್ ಹಣವೂ ಸಿಕ್ಕಿತು.

ಆದರೆ ಮಂತ್ರಾಲಯಕ್ಕೆ ಹೋದಾಗ ನನ್ನನ್ನು ಹುಡುಕುತ್ತ ಬಂದ ನಮ್ಮ

ತಂದೆಯ ಸಮಾಗಮವಾಯಿತು. ತಂದೆ ಮಕ್ಕಳ ಮಿಲನ ಅಳುವಿನಲ್ಲಿ ಕೊನೆಗೊಂಡಿತು. ನಮ್ಮ ತಂದೆಯ ಸ್ನೇಹಿತರಾದ ವಿದ್ವಾನ್ ವೆಂಕೋಬಾಚಾರ್ಯರ ಮನೆಯಲ್ಲೇ ನಾನೂ ಇತರ ವಿದ್ಯಾರ್ಥಿಗಳೂ ಇದ್ದೆವು. ನಾನಾಗಲೇ ಕೊಪ್ಪಳ ಬಿಟ್ಟು ಓಡಿಬಂದು ತಿಂಗಳ ಮೇಲಾಗಿತ್ತು. ಕ್ರಾಪ್‌ಕಟ್ ಮಾಡಿಸಿಬಿಟ್ಟಿದ್ದೆ. ಚಂಡಿಕೆ ಸೊರಗಿತ್ತು,ಇದನ್ನು ಪರೀಕ್ಷೆ ತೆಗೆದುಕೊಳ್ಳುವಾಗ ಗಮನಿಸಿದ ಪಂಡಿತ ವೆಂಕೋಬಾಚಾರ್ಯರು ತಮ್ಮ ಮನೆಯ ಕೋಣೆಯಲ್ಲಿ ನನ್ನನ್ನು ಕರೆದು "ಏನೋ ಹುಲಗಿ ಆಚಾರ್ಯರ ಶಿಷ್ಯನಾಗಿ ಇದೇನೋ ನಿನ್ನ ತಲೆ, ಕ್ರಾಪು, ಮುಖಕ್ಷೌರ?" ಎಂದು ಗದರಿಸಿದರು. ಅವರೊಂದಿಗೆ ಕುಳಿತಿದ್ದ ನಮ್ಮ ತಂದೆಗೆ ಸಂಕೋಚವೆನಿಸಿರಬೇಕು. ಸುಮ್ಮನೇ ಕುಳಿತುಬಿಟ್ಟರು. ನಾನೇ "ಸ್ವಾಮಿ ಜ್ವರಬಂದಿತ್ತು ಬೋಳಿಸಬಾರದೆಂದು ಹೀಗೆಮಾಡಿಸಿದೆ. ಯಾಕೆ ? ಕಟ್‌ಮಾಡಿಸುವದು ನಿಷಿದ್ಧವೆ?" ಎಂದೆ. ಪಂಡಿತರು ಗರ್ಜಿಸಿದರು "ಹೇ ರಂಡೇ ಗಂಡ? ಪಂಚಶಿಖಾಮುಂಡಯೇತ್ ಎಂದು ಶಾಸ್ತ್ರಹೇಳಿಲ್ಲವೇನೊ" ನಾನು ಬಿಡಲಿಲ್ಲ. "ಸ್ವಾಮಿ ಬ್ರಹ್ಮಚಾರಿಗೆ ಪಂಚಶಿಖಾಮುಂಡನ ಹೇಗೆ?" ಎಂದೆ. ಆಚಾರ್ಯರು ಹಾರಿಬಿದ್ದರು "ಥುತ್-ಹೋಗು-ಹಾಳಾಗಿಹೋಗು ಅಧಿಕ ಪ್ರಸಂಗಿ" ಎಂದು ಕೋಪದಲ್ಲಿ ಕೊನೆಗಾಣಿಸಿದರು. ನಮ್ಮಪ್ಪ ಈಗಲೂ ಮೌನವಾಗಿಯೇ ಕುಳಿತಿದ್ದರು. ನಾನು ಈ ಪಂಡಿತವಲಯದಿಂದ ಹೊರಬಿದ್ದೆ. ಅಲ್ಲಿಯೇ ಇದ್ದ ಅಗ್ನಿಹೋತ್ರಿ ಮಧ್ವಾಚಾರ್ಯ ಎಂಬ ವಿದ್ವಾಂಸರು ನನ್ನನ್ನು ಸಮರ್ಥಿಸಿದರು. ಬಯಲಗಾಳಿ ಹಿತ ವೆನಿಸಿತು. ಬಾಳಿಗೆ ಬೇರೊಂದು ತಿರುವುಸಿಕ್ಕಿತು.

## ಜ್ಯೋತಿಷ್ಯ ಮತ್ತು ಮದುವೆ

ಮಂತ್ರಾಲಯದಿಂದ ಕನಕಗಿರಿಗೆ ವಾಪಸ್ ಬರಬೇಕಾಯಿತು. ನಾನು ಓದು ಬಿಟ್ಟು ಓಡಿ ಹೋದುದು ಮದುವೆಗಾಗಿಯೆಂದು ಮನೆಯವರು ತಿಳಿದರು. ಹದಿನೆಂಟು, ಹತ್ತೊಂಬತ್ತು ವರ್ಷವೆಂದರೆ ಅವರ ದೃಷ್ಟಿಯಲ್ಲಿ ಮದುವೆಯ ವಯಸ್ಸು. ಅಲ್ಪ ಸ್ವಲ್ಪ ಆಸ್ತಿ ಇದ್ದ ನಮ್ಮಂಥವರಿಗಂತೂ ಬೇರೆ ಯೋಚನೆಯೇ ಬೇಡ. ಆದರೆ ಆಗ ನನಗೆ ಮದುವೆ ಬೇಕಾಗಿತ್ತೆ? ಬೇಡವೆನ್ನಿಸಲಿಲ್ಲ. ಹಾಗೆ ಹೇಳಲೂ ಇಲ್ಲ.

ಅನೇಕ ಹಳ್ಳಿಗಳ ಪೌರೋಹಿತ್ಯ, ಕನಕಗಿರಿಯಂಥ ದೊಡ್ಡ ಊರಿನ ಪೌರೋಹಿತ್ಯ, ಹೊಲ ಮನೆಗಳು, ಇದನ್ನೆಲ್ಲ ನೋಡಿಕೊಳ್ಳಲಿ, ಇನ್ನು ಓದು ಸಾಕು ಎಂಬುದು ನನ್ನ ಅಜ್ಜಿಯ ಮತ. ಅದರಲ್ಲಿ ಇನ್ನು ಒಂದು ಗುಟ್ಟೂ ಇತ್ತು. ಸಂಸ್ಕೃತ ವಿದ್ವಾಂಸನಾದ ನಮ್ಮ ತಂದೆಗೆ ಪೌರೋಹಿತ್ಯವೆಂದರೆ ತನ್ನ ಅಂತಸ್ತಿನ ಕೆಲಸ ವಾಗಿರಲಿಲ್ಲ. ಅದಕ್ಕಾಗಿ ಶೇಷಭಟ್ಟನೆಂಬ ಗುಮಾಸ್ತನನ್ನು ನೇಮಿಸಿದ್ದರು. ಹಿಂದೊಮ್ಮೆ ವೈಶ್ಯನೊಬ್ಬ ಮರಣ ಹೊಂದಿದಾಗ ಕರ್ಮ ಮಾಡಿಸುವ ಸಂದರ್ಭದಲ್ಲಿ ವಿವಾದ ಬಂದಿತ್ತು. ಪುರೋಹಿತನಾದವನು ಮೃತನ ಮನೆಯಲ್ಲಿ, ಸತ್ತ ಜಾಗದಲ್ಲಿ

ಊಟಕ್ಕೆ ಕೂಡಬೇಕೆಂಬ ಪ್ರಶ್ನೆ ಬಂದಾಗ ನಮ್ಮ ತಂದೆ ಅದೆಲ್ಲ ಶಿಷ್ಟ ಸಂಪ್ರದಾಯ ವಲ್ಲವೆಂದು ನಿರಾಕರಿಸಿದ್ದರು. "ಇದೇನು ಈತನ ಶಾಠ್ಯ ?" ಎಂದು ನಮ್ಮೂರಿನ ಇತರ ಬ್ರಾಹ್ಮಣರು ವೈಶ್ಯರಿಗೆ ಕುಮ್ಮಕ್ಕು ಕೊಟ್ಟಾಗ ವೈಶ್ಯರ ಪೌರೋಹಿತ್ಯವೇ ತನಗೆ ಬೇಕಿಲ್ಲವೆಂದು ನಮ್ಮ ತಂದೆ ತಿರಸ್ಕರಿಸಿದರು. ವೈಶ್ಯರ ಪೌರೋಹಿತ್ಯವೆಂದರೆ ಒಳ್ಳೆಯ ವರಮಾನ. ಅವರ ಮನೆಗಳಲ್ಲಿ ಹಾಲು ತುಪ್ಪಗಳಲ್ಲಿಯೇ ಬೆಂದು, ಗೋಡಂಬಿ, ದ್ರಾಕ್ಷಿ ತುಂಬಿದ ಆ ಸತ್ಯನಾರಾಯಣ ಪ್ರಸಾದದ ರುಚಿ ನನಗಿನ್ನೂ ನೆನಪಿದೆ. ಉಡುಗೊರೆ ಬಾಗಿನ, ದಾನ ಬೇಕಾದಷ್ಟು. ಆದರೆ ಅಂಥದನ್ನು ಧಿಕ್ಕರಿಸಿತ್ತು ನಮ್ಮಪ್ಪನ ಸ್ವಾಭಿಮಾನ. ಆ ನೆಪದಿಂದ ನಮ್ಮೂರ ಬ್ರಾಹ್ಮಣರೆಲ್ಲ ಒಂದು ರೀತಿಯಲ್ಲಿ ಅಸಹಕಾರ ತೋರಿಸುತ್ತಿದ್ದರು. ಪುರೋಹಿತರೆಂದರೆ ಗೃಹಸ್ಥರ ಮನೆಗಳಲ್ಲಿ ಊಟದ ಎಲೆ ಹಚ್ಚಿ ಅವರ ಹೆಂಗಸರ ಹಿಂದೆಮುಂದೆ ಹಲ್ಲು ಕಿರಿದು ಓಡಾಡಿಕೊಂಡು ತಿರುಗುವ ಪ್ರಾಣಿಯೆಂಬಂತೆ ನಮ್ಮೂರ ಕೆಲವು ಮುದುಕ ಗೃಹಸ್ಥರು ಆಡಿ ತೋರಿಸುತ್ತಿದ್ದರು. ಇವ್ಯಾವುದಕ್ಕೂ ಜಗ್ಗದ ನಮ್ಮ ತಂದೆ ಸಹಜವಾಗಿ ಮೊದಮೊದಲು ಅಂಥವರ ಅಸಹನೆಗೆ ತುತ್ತಾಗಿದ್ದರು. ಆದರೇನು ? ನೂರಾರು ಸಲ ನಾಡಿನಾದ್ಯಂತ ಭಾಗವತಾದಿ ಪುರಾಣ ಹೇಳಿ ಖ್ಯಾತನಾದವಗೆ ಇದಾವ ಲೆಕ್ಕ ?

ಅದೇನೇ ಆದರೂ ಮನೆತನದ ಆಸ್ತಿ ಗುಮಾಸ್ತರ ಪಾಲಾದುದನ್ನು ನೋಡಿದ ನಮ್ಮ ಅಜ್ಜಿ ನಾನಾದರೂ ಈ ವೃತ್ತಿಗೆ ಹೊಂದಿಕೊಳ್ಳಲೆಂದು ಬಯಸಿದಳು. ಲಿಂಗಾಯಿತರನ್ನುಳಿದು ಎಲ್ಲ ಜಾತಿಯವರ ಮದುವೆ, ಶ್ರಾದ್ಧಾದಿಗಳನ್ನು ನಾವೇ ಮಾಡಿಸುತ್ತಿದ್ದೆವು. ಇನ್ನೂ ಚಿಕ್ಕವನಿರುವಾಗಲೇ ಕೆಲವು ಸಲ ಗೊಲ್ಲರ ಮದುವೆ ಮಾಡಿಸಲು ನಾನು ಹೋಗಿದ್ದೆ. ಸಂಬಂಧವಿಲ್ಲದ ಮಂತ್ರ ಹೇಳಿ ನನಗಿಂತ ಎತ್ತರವಿರುವ ಹುಡುಗಿಯರ ಕೊರಳ ಸುತ್ತ ಕೈಚಾಚಿ ತಾಳಿ ಕಟ್ಟಿದ್ದೆ. "ಎಪ್ಪಾ ದೋಶೆಪ್ಪನಾ ! ನೆತ್ತಿ ವ್ಯಾಗಳ ಜುಟ್ಟೊ ! ಗಟ್ಯಾಗಿ ಹಾಕೋ ಬರಮು ಗಂಟೋ...... ಸೋ!" ಎಂದು ಹಾಡುವ ಹೆಂಗೆಳೆಯರ ನಡುವೆ ನುಗ್ಗುವಾಗ ಯಾರೋ ನನ್ನ ಶಲ್ಯಕ್ಕೂ ಇನ್ನೊಬ್ಬಾಕೆಯ ಸೆರಗಿಗೂ ಗಂಟು ಹಾಕಿರುತ್ತಿದ್ದರು. ಅಥವಾ ನನ್ನ ಚೆಂಡಿಕೆಗೆ ಮಾವಿನ ಎಲೆ ಸಿಕ್ಕಿಸಿರುತ್ತಿದ್ದರು, ಅದೆಲ್ಲ ಒಂದು ತಮಾಷೆ. ಎಲ್ಲವೂ ಶುದ್ಧ ಮತ್ತು ಲಘು ಹಾಸ್ಯ.

ಈಗಲೂ ಕೆಲವೆಡೆ ಲಗ್ನ ಮಾಡಿಸಲು ಹೋದೆ. ಆದರೆ ಏಳೆಂಟು ವರ್ಷಗಳ ಹಿಂದಿನ ಮುಗ್ಧತೆ ಹೇಗೆ ಬಂದೀತು ? ಅಂತೂ ಅದೇಕೋ ಅಷ್ಟು ಹೊಂದಾಣಿಕೆಯಾಗಲಿಲ್ಲ. ನಮ್ಮ ತಂದೆಗೆ ನಾನು ಪಂಡಿತನಾಗಬೇಕೆಂಬ ಹಂಬಲ ಇನ್ನೂ ಇತ್ತು. ಮತ್ತೆ ಹುಲಗಿ ಆಚಾರ್ಯರಲ್ಲಿ ಕಳಿಸಿದರು. ಈಗ 'ಅನುವ್ಯಾಖ್ಯಾನ' ಪ್ರಾರಂಭಿಸಿದರು. ಮನಸ್ಸಿಲ್ಲದ ಮನಸ್ಸಿನಿಂದ ಪಾಠ ಸಾಗಿತ್ತು. ಮಡಿಯ ಡಂಭಾಚಾರ

ಟೀಕಿಸಿ ಒಂದು ಚಿಕ್ಕ ಪ್ರಹಸನ ಬರೆದೆ. ಅದು ಆಚಾರ್ಯರಿಗೆ ತಿಳಿದು ಅವರು ಬೇಡವೆಂದ ಕಾರಣ ಅದು ಪ್ರಕಟವಾಗಲಿಲ್ಲ.

ಇತ್ತ ನನಗಾಗಿ ಕನ್ಯಾ ನೋಡುವದನ್ನು ಸಹ ನಮ್ಮ ತಂದೆ ನಡೆಸಿದ್ದರು. ನನ್ನ ಸೋದರತ್ತೆಯ ಚಿಕ್ಕ ಮಗಳನ್ನೇ ನನಗೆ ತರಬೇಕೆಂಬುದು ನನ್ನ ಅಜ್ಜಿಯ ಆಶೆ. ಎಷ್ಟೆಂದರೂ ಮೊಮ್ಮಗಳು. ಇದಲ್ಲದೆ ನಮ್ಮ ಶೀನಪ್ಪ ಮಾವ ಬಹಳ ಅಂತಃಕರುಣದ ಮನುಷ್ಯ. ಸ್ವತಃ ಜೋತಿಷ್ಯ, ರಮಲಗಳಲ್ಲಿ ಗಟ್ಟಿಗ. ನಮ್ಮ ವೃತ್ತಿಗೂ ಕುಮ್ಮಕ್ಕು. ಇದೆಲ್ಲ ಲೆಕ್ಕಾಚಾರ ಅಜ್ಜಿಯದು. ನಮ್ಮ ತಂದೆಗೆ ಇನ್ನಷ್ಟು ಪ್ರತಿಷ್ಠೆಯ ಸಂಬಂಧದ ವಿಚಾರವಿತ್ತೆಂದು ಕಾಣುತ್ತದೆ. ತಮ್ಮ ಸ್ನೇಹಿತರಾದ ಒಬ್ಬ ಸಂಪ್ರದಾಯಸ್ಥ ವಕೀಲರ ಮಗಳ ಬಗ್ಗೆ ಸೂಚನೆ ಬಂತು. ಆದರೆ ಅದೇಕೋ ಯಾರದೋ ಚಿತಾವಣಿಯಿಂದ ಬಿದ್ದುಹೋಯಿತು. ಸೋದರತ್ತೆಯ ಮಗಳಿಗೂ ನನಗೂ ಹತ್ತು ವರ್ಷಗಳ ಅಂತರವಿತ್ತು. ಈ ಹಿರಿಯರು ತಾವು ನಿರ್ಧರಿಸುವ ಬದಲು ನನ್ನ ಅಭಿಪ್ರಾಯ ಕೇಳಿದಾಗ ನಾನು ಹುಡುಗಿ ಚಿಕ್ಕದೆಂದು ಹೇಳಿ ಬಿಟ್ಟೆ. ನನ್ನದೇ ಲಗ್ನದ ವಿಚಾರದಲ್ಲಿ ಆ ಕಾಲದಲ್ಲಿ ನಾನು ಅಷ್ಟು ಸ್ಪಷ್ಟ ಮಾತಾಡಿದುದು ಔಚಿತ್ಯವಾಗಿರಲಿಲ್ಲವೇನೋ ಎಂದು ಈಗ ಅನಿಸುತ್ತಿದೆ. ನಮ್ಮ ಅಜ್ಜಿಯ ಮನನೊಂದರೂ ಒತ್ತಾಯಪಡಿಸಲಿಲ್ಲ. ಮಾವ ಅತ್ತೆಯರ ಮನಸ್ಸು ಮುದುರಿಕೊಂಡರೂ ಗಾಂಭೀರ್ಯ ಕಳೆದುಕೊಳ್ಳಲಿಲ್ಲ. ದೊಡ್ಡ ಮನುಷ್ಯರು.

ಈ ನಡುವೆ ನಮ್ಮೂರಿನವರೇ ಆದ ಅನಂತರಾವ್, ಕಿಷನ್‌ರಾವ್ ಅವರು ಕುಕನೂರಿನ ವಿದ್ಯಾನಂದ ಗುರುಕುಲದಲ್ಲಿ ಶಿಕ್ಷಕರಾಗಿದ್ದ ರಾಮಚಂದ್ರರಾವ್ ಪಟ್ವಾರಿಯವರ ಮಗಳ ಸಂಬಂಧದ ಸೂಚನೆ ತಂದರು. ಅನಂತರಾವ್ ಮತ್ತು ಪಟ್ವಾರಿಯವರೆಲ್ಲ ಗುರುಕುಲದಲ್ಲಿಯೂ ನಂತರ ಹೈದ್ರಾಬಾದಿನಲ್ಲಿಯೂ ಓದುತ್ತ ಸ್ನೇಹಿತರಾದವರು. ನಾನು ಕನ್ಯಾ ನೋಡ ಬಯಸಿದೆ. ಆಗ ಅದೇ ಒಂದು ಊರ ಚರ್ಚೆಯ ವಿಷಯವಾಯಿತು. "ಕನ್ಯೆಯನ್ನು ತಾನೇ ನೋಡಿ ಮಾಡಿಕೊಳ್ಳುತ್ತೇನೆಂದು, ಇವನೊಬ್ಬ ಹೊಸ ಹಾದಿ ಹಾಕಿದ" ಎಂದು ಹಿರಿಯರು ಹುಬ್ಬೇರಿಸಿದರು. ಅಂತೂ ನಾವೆಲ್ಲ ಬಂಡಿಯಲ್ಲಿ ಕುಕನೂರಿಗೆ ಹೋಗಿ ಕೆಂಚನ್ನ ಹುಡುಗಿ ನನ್ನ ಭಾವಿ ಪತ್ನಿಯನ್ನು ನೋಡಿಯಾಯಿತು. ಅವರ ಮನೆಯಲ್ಲಿ ಉಪ್ಪಿಟ್ಟು, ಉಂಡಿ ತಿಂದಾಯಿತು. ಎಷ್ಟೆಂದರೂ ಗೃಹಸ್ಥರ ಮನೆಯ ಉಪ್ಪಿಟ್ಟು. ಆ ಸಂದರ್ಭದಲ್ಲಿ ಮತ್ತಷ್ಟು ರುಚಿ ಹೆಚ್ಚೆನಿಸಿ-ಎರಡನೆಯ ಸಲ ಕೇಳಿ ಹಾಕಿಸಿಕೊಂಡಿದ್ದೆ. ವರನ ಪ್ರತಿ ಚಲನವಲನವನ್ನು ಗಮನಿಸುತ್ತಿದ್ದ ಕನ್ಯಾ ಬಂಧುಗಳಲ್ಲಿ ಕಿರಿಯರು ಒಳಗೊಳಗೇ ನಕ್ಕಿರಬೇಕು. ಹುಡುಗ ಸರಳ ಅಥವಾ ಹೊಟ್ಟೆಬಾಕ ಎಂದುಕೊಂಡಿರಬೇಕು. ಆಗ ಗೌರವನೀಯ ಕಾರ್ಯಕರ್ತರಾಗಿದ್ದ ನಿಟ್ಟಾಲಿ ಶ್ರೀನಿವಾಸರಾಯರ ಹಿರಿತನದಲ್ಲಿ ಮತ್ತು ಆ ಊರಿನ ಎಲ್ಲ ಕಾರ್ಯಗಳಲ್ಲೂ ಅನಿವಾರ್ಯರಾಗಿದ್ದ ಅಡಿವೆಕ್ಕನ ಆತಿಥ್ಯದಲ್ಲಿ ಎಲ್ಲ ಮಾತುಕತೆ

ಗಳು ಮುಗಿದವು. ಈ ವರಶ್ರೇಷ್ಠನಿಗೆ ನಾಲ್ಕುನೂರು ರೂಪಾಯಿ ವರದಕ್ಷಿಣೆ ಕೊಡಬೇಕೆಂದಾಯಿತು. ನನ್ನಲ್ಲಿದ್ದ ಅರ್ಹತೆ ಏನು ? "ಬೆಲ್ಲದ ಅಚ್ಚಿನಂಥ ಮನಿ, ಅಕ್ಕಿ ಅನ್ನ ಉಣ್ಣೋವಷ್ಟು ಆಸ್ತಿ, ಮನ್ಮಥನಂಥ ವರ–ಇನ್ನೇನು ಬೇಕು ?" ಎಂಬ ಅಡಿವೆಕ್ಕನ ಭಾಷೆಯ ವರ್ಣನೆ ನಮ್ಮ ಬೀಗರಿಗೆ ಸಮಾಧಾನ ತಂದಿತ್ತು.

ಆಗ ರಾಮಚಂದ್ರರಾವ್ ಪಟ್ವಾರಿಯವರು ಹೈದ್ರಾಬಾದ್‌ನ ಉಸ್ಮಾನಿಯಾ ವಿಶ್ವವಿದ್ಯಾಲಯದ ಬಿ.ಎ. ಮುಗಿಸಿ ಶಿಷ್ಯವೇತನ ಪಡೆದು ಮೈಸೂರಿನಲ್ಲಿ ಕನ್ನಡ ಎಂ.ಎ. ಮಾಡಲು ಹೋಗಿ ಬಂದಿದ್ದರು. ಕೊನೆಯ ವರ್ಷದಲ್ಲಿ ಪಾಸಾಗಿರಲಿಲ್ಲ. ಮೊದಲೇ ಬಡ ಕುಲಕರ್ಣಿಗಳ ಮನೆತನ, ಒಂಕಲಕುಂಟೆ ಅವರ ಊರು. ಬಾಲ್ಯ ವಿವಾಹ ಅವರದು. ಮಕ್ಕಳಾಗುವದು ಆರಂಭವಾದ ಮೇಲೆ ವಿದ್ಯಾಭ್ಯಾಸ ಪ್ರಾರಂಭಿಸಿ-ಕುಕನೂರ ರಾಘವೇಂದ್ರರಾವ್ ದೇಸಾಯರ ನೆರವಿನಿಂದ ಎಂ. ಎ. ದ ವರೆಗೂ ಬಂದವರು. ಅವರ ಆಗಿನ ಸ್ಥಿತಿಯ ದೃಷ್ಟಿಯಿಂದ ನಮ್ಮ ಸಂಬಂಧ ಅಪೇಕ್ಷಣೀಯವೇ ಅನಿಸಿರಬೇಕು. ಆದರೆ ನಮ್ಮ ಮದುವೆ ನಿಶ್ಚಯವಾದ ನಂತರ ಎಂ.ಎ. ಪಾಸಾದರು. ಕೂಡಲೇ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸಕ ಕೆಲಸವೂ ಸಿಕ್ಕಿತು.

ಆಗ ಅವರ ತಮ್ಮಂದಿರು ಈ ಸಂಬಂಧ ಬಿಟ್ಟುಕೊಟ್ಟು ಯಾವನಾದರೂ ನೌಕರೀ ಮಾಡುವ 'ಸುಶಿಕ್ಷಿತ' ಹುಡುಗನಿಗೆ ಮಗಳನ್ನು ಕೊಡಲು ಸೂಚಿಸಿದರಂತೆ. ಆದರೆ ಪಟ್ವಾರಿಯವರು ಕೊಟ್ಟ ಮಾತಿಗೆ ತಪ್ಪಲಿಲ್ಲ. ನನ್ನ ಮತ್ತು ಅವರ ಮಗಳು 'ಸೀತಾ'ನ ಮದುವೆ ಕನಕಗಿರಿಯ ಕನಕಾಚಲಸ್ವಾಮಿಯ ದೇವಸ್ಥಾನದಲ್ಲಿ ಎರಡು ದಿನಗಳ ಲಡ್ಡಿನ ಪ್ರಸ್ತದೊಂದಿಗೆ ನಡೆದು ಹೋಯಿತು. ಭೋಜನ ಕಾಲದಲ್ಲಿ ನಾನೇ ಶ್ಲೋಕಗಳನ್ನು ರಾಗವಾಗಿ ಹೇಳಿ ಪಕ್ಕದ ಪತ್ನಿಯನ್ನು ನೋಡಿದ್ದೆ. ಅವಳ ಕಣ್ಣು ಫಳಕ್‌ನೆ ಮಿಂಚಿದ್ದವು. ನನ್ನನ್ನು ಮೀರಿಸಲೆಂಬಂತೆ ಉರುಟಣೆಯ ಹಾಡುಗಳನ್ನು ಹಾಡಿದ್ದಳು. ಕೆಲವು ನನಗಿನ್ನೂ ನೆನಪಿವೆ.

ಅದೊಂದು ಗೊಂಬೆಯ ಮದುವೆಯಂತೆ. ಹದಿನೆಂಟೂ ಇಲ್ಲದ ವರ, ಹದಿ ನಾಲ್ಕು ದಾಟದ ಕನ್ಯೆ. ವಿದ್ಯೆಯೆಂದರೆ ಶಾಲಾ ಶಿಕ್ಷಣವೆನ್ನುವದಾದರೆ ನಾನಾಗ ಏಳನೇ ಕ್ಲಾಸ್ ಫೇಲಾಗಿದ್ದೆ. ಆಕೆ ಏಳನೇ ಕ್ಲಾಸಿನಲ್ಲಿ ಫೇಲಾಗದೆ ಓದಿದ್ದಳು. "ಹುಡುಗಿ ಮೈಸೂರಿನಲ್ಲಿ ಓದಿ, ಸಂಗೀತ, ಹಾರ್ಮೋನಿಯಂ ಕಲಿತಿದಾಳಂತೆ" ಎಂದು ನಮ್ಮೂರ ಹೆಂಗಸರ ಗುಜುಗುಜು. ನಮ್ಮೂರ ಮಟ್ಟಕ್ಕೆ ಅದೆಲ್ಲ ಹೆಚ್ಚೆಂಬ ಭಾವನೆ. ನಮ್ಮ ಅಜ್ಜಿ ಮತ್ತು ಸೋದರತ್ತೆ ಹಾಗೂ ಮಾವ ಮದುವೆಯಲ್ಲಿ ನಡೆದುಕೊಂಡ ಸಹಜ ಮತ್ತು ಆತ್ಮೀಯ ರೀತಿ ನನ್ನ ನೆನಪಿನಲ್ಲಿ ಉಳಿದು ಅವರ ಬಗ್ಗೆ ಗೌರವವನ್ನು ಹೆಚ್ಚಿಸಿದೆ.

## ತಿರುವು – ಹರವು

1941ರ ಶ್ರಾವಣದಲ್ಲಿ ನಮ್ಮ ಮದುವೆಯಾಯಿತು. ಮದುವೆಯಾದ ಮರು ದಿನ ಸಾಯಂಕಾಲ ಬೀಗರೂ, ನಮ್ಮ ಇತರ ಬಂಧುಗಳೂ ನಮ್ಮ ಮನೆಯಲ್ಲಿ ಗ್ರಾಮಫೋನ್ ರೆಕಾರ್ಡ್ ಕೇಳುತ್ತ ವಿರಾಮವಾಗಿ ಕುಳಿತಿದ್ದರು. ಅಶ್ವತ್ಥಮ್ಮ, ಸುಶೀಲಾ ತೆಂಬೆ, ಬಾಲ ಗಂಧರ್ವರ ನಾಟಕ ಸಂಗೀತದ ಹಾಡುಗಳು ಒಂದಾದ ಮೇಲೆ ಒಂದರಂತೆ ಜನರನ್ನು ರಂಜಿಸುತ್ತಿದ್ದವು. ಗ್ರಾಮಫೋನ್ ನಮ್ಮದಾಗಿರ ಲಿಲ್ಲ. ಆಗ ಸುತ್ತಲಿನ ಹಳ್ಳಿಗಳಲ್ಲಿ ಪ್ರಬಲರೆಂದು ಹೆಸರಾದ ನಾಲ್ಕೈದು ಜನ ಶಾನುಭೋಗಿತಿಯರಿದ್ದರು. ಪ್ರಬಲರೆಂದರೇನು ? ನಡು ವಯಸ್ಸಿನಲ್ಲಿ ಅಕಸ್ಮಾತ್ ಪತಿಗಳನ್ನು ಕಳೆದುಕೊಂಡು ಸಂತತಿ ಇಲ್ಲದ ಕಾರಣ ಕುಲಕರ್ಣಿಕೆಯ ಪಟ್ಟೆದಾರ್ತಿಯ ರಾಗಿ ಗುಮಾಸ್ತರ ಮೂಲಕ ಸ್ವತಃ ಕಾರುಭಾರು ನಡೆಸುವ ದಿಟ್ಟತನಕ್ಕಾಗಿ ಹೆಸರಾದ ವರು. ಅಂಥ ಸ್ಥಿತಿಯಲ್ಲಿ ಇನ್ನೇನು ಮಾಡಿಯಾರು ? ಸಮೃದ್ಧಿ ಇದ್ದರೂ ಉಪ ಭೋಗದಿಂದ ವಂಚಿತರಾದ ಇವರು ಪುರಾಣ, ಪುಣ್ಯ ಕಥೆ, ದಾನ ಧರ್ಮಗಳಲ್ಲಿ ಬಹುತೇಕ ಉದಾರತೆ ತೋರುತ್ತಿದ್ದರು. ಇಂಥವರ ಸುತ್ತ ಸಹಜವಾಗಿ ಪುರಾಣಿ ಕರೂ, ವೈದಿಕರೂ ಸೇರುವದು ರೂಢಿ. ಇಂಥವರು ನಮ್ಮ ಜ್ಯೋತಿಷ್ಯದ ಹಳ್ಳಿ ಗಳಲ್ಲೇ ಇದ್ದರು. ಆ ಭಾಗದಲ್ಲಿ ಆಗ ಒಬ್ಬನೇ ಪುರಾಣಿಕನಾಗಿದ್ದ ನಮ್ಮ ತಂದೆಗೆ ಸ್ವಾಭಾವಿಕವಾಗಿ ಬೇಡಿಕೆ ಹೆಚ್ಚಾಗಿತ್ತು. ಇಂಥ ಒಬ್ಬ ಶಾನುಭೋಗಿತಿಯ ಹತ್ತಿರ ಇದ್ದ ಗ್ರಾಮಫೋನ್‌ನ್ನು ನಮ್ಮ ತಂದೆ ಮದುವೆಗಾಗಿ ತಂದಿದ್ದರು.

ಎರಡು ಹಾಡುಗಳ ನಡುವಣ ವಿರಾಮ ಸಮಯದಲ್ಲಿ ಇದ್ದಕ್ಕಿದ್ದಂತೆಯೇ ನಮ್ಮ ಮಾವ ರಾಮಚಂದ್ರರಾಯರು ನೇರವಾಗಿ ನನ್ನನ್ನೇ ಕೇಳಿಬಿಟ್ಟರು "ನೀವೇಕೆ ಲೌಕಿಕ ವಿದ್ಯೆ ಕಲಿಯಲಿಲ್ಲ ?"

ನಾನೂ ಅಷ್ಟೆ ಸಹಜವಾಗಿ ಉತ್ತರಿಸಿದೆ "ನಮ್ಮ ತಂದೆಗೆ ಇಷ್ಟವಿರಲಿಲ್ಲ."

"ನಿಮ್ಮ ಇಷ್ಟವೇನು ?" ಎಂದರು ಮಾವ.

"ಕಲಿಯಬೇಕೆಂಬುದು ನನ್ನ ಇಚ್ಛೆ" ಎಂದೆ.

"ಈಗ ಹೇಗೂ ಹೈದ್ರಾಬಾದಿನಲ್ಲಿ ನಮ್ಮ ಮನೆಯೇ ಇದೆ. ಅಲ್ಲಿ ಬಂದು ಇದ್ದು ಕಲಿಯಬಹುದಲ್ಲವೆ ?"

"ಆಗಬಹುದು–ನಮ್ಮ ತಂದೆ ಕಳಿಸಿದರೆ" ಎಂದು ನಮ್ಮಪ್ಪನನ್ನು ನೋಡಿದೆ. ಇದುವರೆಗೆ ಮಾವ ಅಳಿಯ ಇಬ್ಬರೂ ನೇರವಾಗಿ ಮಾತಾಡಿಕೊಂಡುದು ನಮ್ಮ ತಂದೆಗೆ ರುಚಿಸಿತ್ತೋ ಇಲ್ಲವೊ ಹೇಳಲಾರೆ.

"ನಿಮ್ಮ ಮಗನನ್ನು ಕಳಿಸಬಹುದಲ್ಲ ? ಆಚಾರ್ಯರೆ !" ಎಂದು ನಮ್ಮಪ್ಪನನ್ನು ಕೇಳಿದರು ಮಾವ. ಇದೆಲ್ಲ ತೀರ ಅನಿರೀಕ್ಷಿತವಾಗಿತ್ತು. ಚೇತರಿಸಿಕೊಂಡು ನಮ್ಮ ತಂದೆ "ಆಗಲಿ, ಅವನ ಇಷ್ಟವಿದ್ದರೆ" ಎಂದರು ಚುಟುಕಾಗಿ.

ಮದುವೆ ಮುಗಿದು ಬೇಗರು ಹೈದ್ರಾಬಾದಿಗೆ ತಲುಪಿದ ಎಂಟು ಹತ್ತು ದಿನಗಳಲ್ಲಿಯೇ ಮಾವನ ಪತ್ರ ಬಂತು. ನನ್ನನ್ನು ಕಳಿಸಿಕೊಡಲು ಬರೆದಿದ್ದರು. ನಮ್ಮ ಮನೆಯಲ್ಲಿ ಒಂದು ಹೊಸ ಸಮಸ್ಯೆ ಎದ್ದಂತೆ ಕೋಲಾಹಲ ಆರಂಭವಾಯಿತು. ನಾನು ಹೊರಡುವ ಆತುರದಲ್ಲಿದ್ದೆ. ನಮ್ಮ ಅಜ್ಜಿಗೆ ಕಾತರ. ಮೊಮ್ಮಗ ಕೈಬಿಟ್ಟು ಹೋಗುತ್ತಾನೆಂಬ ಸಂದೇಹ. ನಮ್ಮ ತಂದೆ ಇದನ್ನೇನೂ ಗಂಭೀರವಾಗಿ ಪರಿಗಣಿಸಿರಲಿಲ್ಲ. ನನ್ನ ಪತ್ನಿ ಇನ್ನೂ ಮೈನೆರೆದಿರಲಿಲ್ಲವಾದ ಕಾರಣ ತವರಿನಲ್ಲೇ ಹೋಗಿದ್ದಳು. ಅವಳ ಸಾನ್ನಿಧ್ಯ ಬಯಸಿ ನಾನು ಹೋಗಲು ಉತ್ಸುಕನಾಗಿದ್ದೇನೆಂದು ನಮ್ಮ ತಂದೆ ಗ್ರಹಿಸಿರಬೇಕು. "ವಿವಾಹೋ ವಿದ್ಯಾನಾಶಾಯ, ಸರ್ವನಾಶಾಯ ಶೋಭನಂ" ಎಂದು ಹೇಳುತ್ತ "ಅವನೇನು ಓದುತ್ತಾನೆ ? ಶೋಭನ ಪ್ರಸ್ತವಾದ ಮೇಲೆ ವಾಪಸು ಬರುತ್ತಾನೆ–ಯಾಕಿಷ್ಟು ಚಿಂತೆ ?" ಎಂದು ತಂದೆ ಅಜ್ಜಿಗೆ ಸಮಾಧಾನ ಹೇಳಿದ್ದರು. ಇದೇ ಸಮಯದಲ್ಲಿ ನನ್ನ ಸುದೈವಕ್ಕೆಂದೋ ಏನೋ ನಮ್ಮ ಊರಿನಲ್ಲಿ ಇಲಿಗಳು ಸತ್ತು ಪ್ಲೇಗು ಕಾಣಿಸಿಕೊಂಡಿತು. ಜನ ಊರು ಬಿಡಲಾರಂಭಿಸಿದರು. ನಮ್ಮವರೂ ಹಳ್ಳಿಗೆ ಹೋಗಲು ನಿರ್ಧರಿಸಿದರು. ಆಗ ಸಹಜವಾಗಿ ನಾನು ಅವರೊಂದಿಗೆ ಹಳ್ಳಿಗೆ ಹೋಗುವ ಬದಲು ಹೈದ್ರಾಬಾದಿಗೆ ಹೋಗಬಹುದೆಂದು ಎಲ್ಲರ ಅನುಮತಿ ಸಿಕ್ಕಿತು. ಹೊಸ ಊರನ್ನಾದರೂ ಹುಡುಗ ನೋಡಿ ಬರುತ್ತಾನೆ ಎಂದು ಸಮಾಧಾನ ತಾಳಿದರು. ಅದಕ್ಕಿಂತ ಹೆಚ್ಚಿನದೇನನ್ನಾದರೂ ಸಾಧಿಸುವುದು ನಮ್ಮ ಅಜ್ಜಿಯ ಕಲ್ಪನೆಗೆ ಮೀರಿದ್ದು. ಆಕೆಗೆ ಮೊಮ್ಮಗ ಕಣ್ಣಿನಿಂದ ದೂರ ಹೋಗುವದೇ ಬೇಕಿರಲಿಲ್ಲ. ನಮ್ಮ ತಂದೆಯಂತೂ ನನ್ನಿಂದ ಹೆಚ್ಚಿನ ಸಾಧನೆ ಇನ್ನು ಸಾಧ್ಯವಿಲ್ಲವೆಂದೇ ತಿಳಿದ ಹಾಗಿತ್ತು. ಅದಕ್ಕೆಂದೇ ನಿಶ್ಚಿಂತೆಯಿಂದ ಬೀಳ್ಕೊಟ್ಟರು. ನಾನು ಶ್ವಶುರಗೃಹ ಸೇರಿದೆ.

## ಹೊಸ ಹಾದಿಗಳು

ನಾನು ಹೈದ್ರಾಬಾದಿಗೆ ಬಂದರೂ ತಲೆಯ ಮೇಲೆ ನನ್ನ ಚಂಡಿಕೆ ಇನ್ನೂ ಇತ್ತು. ಅದು ಆಗಾಗ ಹಾರಾಡುತ್ತಲೂ ಇತ್ತು. ನನ್ನಲ್ಲಿ ಸುಧಾರಣೆ ಯಾದದ್ದೆಂದರೆ ಬೋಳಿಸಿಕೊಳ್ಳುವ ಬದಲು ತಲೆಗೆ ಮಿಷಿನ್ ಹಚ್ಚಿಸಿ 'ಸೈಡ್ ಕಟ್' ಮಾಡಿಸುತ್ತಿದ್ದೆ, ಅಷ್ಟೆ. ಚಂಡಿಕೆ ಮುಚ್ಚುವಂತೆ ದೊಡ್ಡ ಫರ್‌ಕ್ಯಾಪ್ (ಕೂದಲಿನ ಟೊಪ್ಪಿಗೆ) ಹಾಕುತ್ತಿದ್ದೆ. ಸಂಸ್ಕೃತ ಓದುತ್ತಿದ್ದಾಗ ಅಲ್ಲಿನ ವಿದ್ಯಾರ್ಥಿಗಳಲ್ಲಿ ನಾನೇ ಸುಧಾರಕನಾಗಿದ್ದೆ. ತೋಳಿದ್ದ ಬನಿಯನ್ ಅಥವಾ ಕಾಲರ್ ಇದ್ದ ಹಾಫ್ ಷರ್ಟು ಹಾಕಿ ಅದೆಲ್ಲ ಮುಚ್ಚುವ ಹಾಗೆ, ಆದರೂ ಅದೆಲ್ಲ ಕಾಣುವಷ್ಟು ತೆಳ್ಳನ್ನ ದೋತರವನ್ನು ಹೊದಿಯುತ್ತಿದ್ದೆ. ಅಷ್ಟಕ್ಕೇನೇ ನಮ್ಮ ಗುರುಗಳ ಮುದುಕ ತಂದೆ "ವಿದ್ಯಾರ್ಥಿರಾಜೋ

ವಿಟಸಾರ್ವಭೌಮ !" ಎಂದು ನನ್ನನ್ನು ಮೂದಲಿಸುತ್ತಿದ್ದರು. ಬತ್ತಲೆ ಇರುವವರ ನಡುವೆ ಲಂಗೋಟಿಯುವನೇ ಉತ್ತಮ ಎಂಬ ಹಾಗಿತ್ತು ಅಲ್ಲಿ. ಆದರೆ ನವನಾಗರಿಕತೆಯ ಮಾದರಿಯಾಗಿದ್ದ ಹೈದ್ರಾಬಾದಿನಲ್ಲಿ ನನ್ನ ವೇಷ ತ್ರೇತಾಯುಗದ್ದೆನಿಸುತ್ತಿತ್ತು. ನಾವಾಗ ಸಿಕಂದ್ರಾಬಾದಿನಲ್ಲಿ ಒಂದು ವಠಾರದಲ್ಲಿ ಇದ್ದೆವು. ಅಲ್ಲಿನ ಹುಡುಗಿಯರೆಲ್ಲ "ನೋಡ್ರೆ ! ಸೀತಾನ ಗಂಡನ ಚೆಂಡಿಕೆ ಹೇಗೆ ಹಾರಾಡುತ್ತೆ" ಎಂದು ಕಿಲಕಿಲ ನಗುತ್ತಿದ್ದರು. ಅದರಲ್ಲಿ ನನ್ನವಳೂ ಇರುತ್ತಿದ್ದಳು.

ನಮ್ಮ ಮನೆಯ ಹತ್ತಿರವೇ ಪ್ರೊ. ಡಿ. ಕೆ. ಭೀಮಸೇನರಾಯರ ಮನೆ. ನಮ್ಮ ಮಾವ ಅವರ ಸಹಾಯಕ ಉಪನ್ಯಾಸಕರೇ ಅಲ್ಲವೇ ? ಈ ರಾಯರ ಅಳಿಯ ನರಸಿಂಹಾಚಾರ್ಯ ನನ್ನ ಸಮವಯಸ್ಕ. ಆತ ಕ್ರಮೇಣ ನನ್ನ ಚಂಡಿಕೆ ಕತ್ತರಿಸಿ ಹಾಕಿ, ಹೋಟಲ್ ಪರಿಚಯ ಮಾಡಿಸಿ ಲೌಕಿಕ ವಿದ್ಯೆ ಇರದಿದ್ದರೂ ಲೌಕಿಕ ಸಂಸ್ಕಾರ ಪಡೆಯುವದಕ್ಕೆ ಕಾರಣನಾದ. ಇದಕ್ಕೆ ಮಾವನ ಸೂಚನೆಯಿತ್ತಂತೆ.

ಲೌಕಿಕ ವಿದ್ಯೆಯನ್ನು ಹಿಂದೆ ಬಿಟ್ಟಲ್ಲಿಂದಲೇ ಪ್ರಾರಂಭಿಸಬೇಕಲ್ಲ ? ಅನ್ವಾರುಲ್ ಉಲೂಮ್ ಎಂಬ ಸಾಬರ ಹೈಸ್ಕೂಲಿನಲ್ಲಿ ಏಳನೆ ಕ್ಲಾಸಿಗೆ ನನ್ನನ್ನು ಸೇರಿಸಿದರು. ಆದರೆ ಅಲ್ಲಿ ಎಲ್ಲ ಮಕ್ಕಳು ನನಗಿಂತ ಶೀರ ಚಿಕ್ಕವರು. ನನಗೆ ನಾಚಿಕೆಯಾಯಿತು. ಮಾವನಿಗೆ ಹೇಳಿದೆ. ಭೀಮಸೇನರಾಯರೂ ಅವರೂ ಮಾತನಾಡಿಕೊಂಡು ನನಗೆ ಖಾಸಗಿಯಾಗಿ ಅಭ್ಯಾಸ ಮಾಡಿಸಿ ಒಮ್ಮೆಲೇ ಮೆಟ್ರಿಕ್ ಪರೀಕ್ಷೆಗೆ ಕೂಡಿಸಬೇಕೆಂದು ನಿರ್ಧರಿಸಿದರು. ತತ್ಫಲವಾಗಿ ಶಾಲೆಗೆ ಹೋಗುವದು ತಪ್ಪಿತು. ಮನೆಯಲ್ಲೇ ನಮ್ಮ ಮಾವ 'ಸಂಗಪ್ಪ ಮಲ್ಲಪ್ಪ ಅಂಕಲೆ' ಯವರ ಭಾಷಾಂತರ ಪಾಠಮಾಲೆಗಳನ್ನೂ ಡಿಕನ್ಸ್‌ನ 'ಎ ಟೇಲ್ ಆಫ್ ಟೂ ಸಿಟೀಜ್'ನ್ನು ಹೇಳಲು ಪ್ರಾರಂಭಿಸಿದರು. ಆಗ ಅತಿ ಮಾಮೂಲಿ ಇಂಗ್ಲೀಷ್ ಶಬ್ದಗಳ ಅರ್ಥಗಳನ್ನು ಸಹ ನಾನು ಉರು ಹೊಡೆಯುತ್ತಿದ್ದನೆಂದು ನನ್ನ ಹೆಂಡತಿ ಈಗಲೂ ಗೇಲಿ ಮಾಡುತ್ತಾಳೆ. ಆಗ ಆಕೆ ಆ ವಿಷಯವನ್ನು ನನಗಿಂತ ಹೆಚ್ಚಾಗಿ ತಿಳಿದವಳಿದ್ದಿರಬೇಕು.

ಎರಡು ಮೂರು ತಿಂಗಳಲ್ಲಿ ಮರಳಿ ಬರಬಹುದೆಂದು ನಂಬಿದ್ದ ನಮ್ಮ ಅಜ್ಜಿಗೆ ನಾನು ಇಂಗ್ಲೀಷ್ ಅಭ್ಯಾಸ ಆರಂಭಿಸಿದುದರಿಂದ ನಿರಾಶೆ ಆಘಾತಗಳಾಗಿರಬೇಕು, ಅಥವಾ ಮೊಮ್ಮಗನ ಮದುವೆ ನೋಡಿದ ಮೇಲೆ ತನ್ನ ಬಾಳಿನ ಕೆಲಸವಾಯಿತೆಂದು ಅನಿಸಿರಬೇಕು. ಅವರಿನ್ನೂ ಹಳ್ಳಿಯಲ್ಲಿ ಇರುವಾಗಲೇ ಮುದುಕಿ ತೀರಿಕೊಂಡಳು. ಆಕೆಯ ಅಂತ್ಯ ಕಾಲದಲ್ಲಿ ನಾನು ಬಳಿಯಲ್ಲಿ ಇರಲಿಲ್ಲವಲ್ಲ ಎಂಬ ಕೊರಗು ಯಾವಾಗಾದರೊಮ್ಮೆ ಈಗಲೂ ಕಾಣಿಸಿಕೊಳ್ಳುತ್ತದೆ. ಬಹುಶಃ ತನ್ನ ಅರವತ್ತೈದನೆಯ ವಯಸ್ಸಿನಲ್ಲಿ ಸತ್ತ ಅಜ್ಜಿ ಸಂತೃಪ್ತ ಸ್ಥಿತಿಯಲ್ಲೇ ಹೋಗಿರಬೇಕು. ಆದರೂ ನಮ್ಮ ಮನಸ್ಸಿನ ಅಸಂತೃಪ್ತಿಯ ಗುರುತೋ ಏನೋ, ಈಗಲೂ ಆಗಾಗ ಕನಸಿನಲ್ಲಿ ಅದೇ ಬಚ್ಚ ಬಾಯಿಯ ಪ್ರೀತಿಯುಕ್ಕುವ ದುಂಡಗಿನ ಮುಖ ಕಾಣಿಸುವದುಂಟು. ನನ್ನ

ಮುಖ ಸ್ವಲ್ಪ ಆಕೆಯ ಮುಖದಂತೆಯೇ ಎಂದು ಜನರೂ ಹೇಳುತ್ತಾರೆ. ಈಗ ಇಲ್ಲವಾದ ನಮ್ಮ ತಂದೆ ಸಹ ಅದೇ ಪ್ರಸನ್ನತೆಯಿಂದ ಕಾಣಿಸಿಕೊಳ್ಳುತ್ತಾರೆ.

ಮಾವನ ಮನೆಯಲ್ಲಿ ನೆಲೆಸಿದ ಆರೇಳು ತಿಂಗಳಲ್ಲಿ ನನ್ನ ಪತ್ನಿ ಋತುಮತಿ ಯಾದಳು. ಮಾವ ಆಗಿನ ತನ್ನ ಚಿಕ್ಕ ಸಂಬಳದಲ್ಲಿಯೇ ಒಳ್ಳೇ ಉಡುಗೊರೆ ತಂದು ಶೋಭನ ಪ್ರಸ್ತವನ್ನೇರ್ಪಡಿಸಿದ್ದರು. ನಾವಿದ್ದ ವಠಾರದಲ್ಲಿ ಅಂದು ಇನ್ನೊಂದು ಜೋಡಿಯ ಪ್ರಸ್ತವೂ ಜರುಗುವದಿತ್ತು. ನಮ್ಮ ಪ್ರಸ್ತದ ಕೋಣೆಯ ಏರ್ಪಾಟ ನ್ನೆಲ್ಲ ಅಂದು ಸಂಜೆ ನನ್ನ ಮಿತ್ರ ನರಸಿಂಹಾಚಾರ್ಯನೇ ನೋಡಿಕೊಂಡು ನನಗೆ ಕೊಡ ಬೇಕಾದ ಸೂಚನೆಗಳನ್ನೆಲ್ಲ ಕೊಟ್ಟಂತೆ ಮಾಡಿ ಗಡಿಬಿಡಿಯಿಂದ ತನ್ನ ಗೂಡು ಸೇರಿದ. ಅವನೂ ಹೊಸದಾಗಿ ಮದುವೆಯಾದವ. ಅವನಿಗೂ ಅವಸರ. ಅಂತೂ ಅದು ಹೇಗೊ ವಠಾರದಲ್ಲಿ ಆ ರಾತ್ರಿ ನಾನೊಬ್ಬನೇ ಉಳಿದೆ. ನಮ್ಮ ಚಿಕ್ಕ ಮನೆಯ ಎರಡೂ ಕೋಣೆಗಳಲ್ಲಿ ಹೆಂಗಸರ ದರ್ಬಾರು. ಪ್ರಸ್ತಕ್ಕೆ ಸಿದ್ಧವಾದ ಕೋಣೆಗೆ ನಾನಾಗಿಯೇ ಮೊದಲೇ ಹೋಗುವಂತಿಲ್ಲ. ದಾರಿಯಲ್ಲೆಲ್ಲ ಹೆಂಗಸರು. ಹೊರಗೆ ವಠಾರದಲ್ಲಿ ಛಳಿ. ರಾತ್ರಿ ಹತ್ತು ಗಂಟೆಯಾದರೂ ಇನ್ನೂ ಒಳಗೆ ಕರೆಯುವ ಸೂಚನೆಯೇ ಇಲ್ಲ. ಆ ಇನ್ನೊಂದು ಜೋಡಿಯನ್ನು ಮಲಗಿಸಿ ಬಂದ ಹೆಂಗಸರೂ ನಮ್ಮ ಮನೆಯಲ್ಲೇ ಸೇರಿ ಇನ್ನಷ್ಟು ಗೊಂದಲ. ನನಗೋ ವಿಪರೀತ ಸಿಟ್ಟು. ಇವರಿಗೆಲ್ಲ ಗಂಡಂದಿರು ಕಾಯುತ್ತಿರಲಿಕ್ಕಿಲ್ಲವೆ ? ಎನಿಸುತ್ತಿತ್ತು. ಆದರೆ ಅವರೆಲ್ಲ ಹಳಬರು. ನಾವೀನ್ಯದ ಕುತೂಹಲವಂತೂ ಇರಲಿಲ್ಲವಲ್ಲ. ಥಂಡಿಯಲ್ಲಿ ನಡು ಗುತ್ತ ಇಷ್ಟೆಲ್ಲ ಯೋಚಿಸುತ್ತಿರುವಾಗ ಊಟ, ಉಡಸಾರಣೆಯೆಲ್ಲ ಮುಗಿಸಿ ಹೊರ ಬಂದ ಪಕ್ಕದ ಮನೆಯ ಪ್ರೌಢೆ ಕೃಷ್ಣಾಬಾಯಿ ನನ್ನನ್ನು ನೋಡಿ "ಯಾಕಪ್ಪಾ ಇಲ್ಲಿ ತಿರುಗಾಡ್ತಿ ?" ಎಂದಳು. "ಮತ್ತೇನ್ ಮಾಡ್ಲಿರಿ ?" ಎಂದೆ ಮೆತ್ತಗೆ. ಆ ಮುದುಕಿಗೆ ಅರ್ಥವಾಯಿತು. ನಮ್ಮ ಮನೆಯೊಳಗೆ ಬಂದು "ಏನ್ರೇ, ಹುಡುಗ ಅಲ್ಲಿ ಹೊರಗ ಥಂಡ್ಯಾಗ ನಡಗಲಿಕ್ಕೆ ಹತ್ತೇದ್ಯ. ನೀವಿಲ್ಲಿ ಚೆಕ್ಕಂದ ಆಡ್ತೀರಿ" ಎಂದು ಗದರಿಸಿ "ಬಾ ತಮ್ಮ–ಬಾ" ಎಂದು ನನ್ನನ್ನು ಕರೆದಳು. ಇದಕ್ಕೂ ಹೆಚ್ಚಿನ ಉಪಚಾರ ನನಗೆ ಬೇಕಿರಲಿಲ್ಲ. ನೇರವಾಗಿ ಪ್ರಸ್ತದ ಕೋಣೆಗೆ ಸೇರಿದೆ. ಒಂದೆರಡು ನಿಮಿಷಗಳಲ್ಲೇ ಔಪಚಾರಿಕ ಆರತಿ ಬೆಳಗಿ ನನ್ನ ಸೀತೆಯನ್ನು ನನ್ನ ಬಳಿ ಬಿಟ್ಟು ಹೊರಟು ಹೋದರು.

ಬಾಗಿಲು ಹಾಕಿಕೊಂಡೆವು. ಎಲ್ಲ ಹೊಸದು. ಅದುವರೆಗೆ ತಿಳಿಯದುದು. ತೀರ ಅಪರಿಚಿತ ಸ್ಥಿತಿ. ನಮಗೆ ಏನೂ ಬರುವದಿಲ್ಲವೇನೋ, ಮಾತೂ ಸಹ ಬರು ವದಿಲ್ಲವೇನೋ ಎಂಬಂಥ ಸ್ಥಿತಿ. ಅಷ್ಟು ಎಳೆತನ, ಹೊಸತನ, ಚೆನ್ನಲ್ಲವೆ ? ನಮ್ಮ ಮಾವ, ಕಿಡಕಿಯಲ್ಲಿ ಇಣುಕಲು ಯತ್ನಿಸಿದ ಹೆಂಗೆಳೆಯರನ್ನು ಗದರಿಸಿ

ಕೊಂಡುದು ಒಳಗಿನ ನವುಗೆ ಕೇಳಿಸಿತು. ನಸು ನಗು ನಮ್ಮನ್ನು ಮತ್ತಷ್ಟು ಹತ್ತಿರ ಸೇರಿಸಿತ್ತು.

## ಕನ್ನಡ ದೀಕ್ಷೆ

ಈ ಅವಧಿಯಲ್ಲಿಯೇ ಹೈದ್ರಾಬಾದಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನೆರೆಯಿತು. ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ಅಧ್ಯಕ್ಷರಾಗಿದ್ದರು. ಮಾಸ್ತಿ, ಶ್ರೀರಂಗ, ಬಿ.ಎಂ.ಶ್ರೀ., ಗೋಕಾಕ, ಬೆಟಗೇರಿ, ಸಾಲಿ,–ಎಷ್ಟೊಂದು ಉದ್ದಾಮ ಸಾಹಿತಿಗಳ ಸಂದರ್ಶನಗಳು, ಭಾಷಣಗಳು. ಪೂರ್ತಿ ಅರ್ಥವಾಗದಿದ್ದರೂ ಅಂತಃಕರಣದಲ್ಲಿ ಇಳಿದವು. ಕೃಷ್ಣಶಾಸ್ತ್ರಿಗಳು ನಮ್ಮ ಮನೆಗೆ ಬಂದಿದ್ದರು. ಮಾವ, ಅವರಿಗೆ ನನ್ನ ಪರಿಚಯ ಮಾಡಿಸಿದ್ದರು. "ಓ ! ಈತನೆಯೋ, ನಿಮ್ಮ ಅಳಿಯ" ಎಂದು ಅವರು ಅಂದಂತೆ ನೆನಪು. ನಮ್ಮ ಮಾವ ರಾಮಚಂದ್ರರಾಯರಿಗೆ ಶಾಸ್ತ್ರಿಗಳು 'ಪಟ್ವಾರಿ' ಎಂದು ಕರೆಯುವ ರೂಢಿಯಿತ್ತೆಂದು ಕಾಣುತ್ತದೆ. ಪ್ರೊ. ಟಿ. ಎಸ್. ವೆಂಕಣ್ಣಯ್ಯ ಮತ್ತು ಕೃಷ್ಣಶಾಸ್ತ್ರಿಗಳಿಗೆ ನಮ್ಮ ಮಾವ ತುಂಬ ಪ್ರೀತಿಯ ಶಿಷ್ಯರಾಗಿದ್ದರು; ಋಣಿಯೂ ಆಗಿದ್ದರು. ಪರೀಕ್ಷೆಗೆ ಫೀಜು ಕಟ್ಟಲು ಹಣವಿಲ್ಲದಾಗ ಅವರೀರ್ವರೂ ಸಹಾಯ ಮಾಡಿದ್ದರು. ಸ್ವಂತ ತಮ್ಮನಾದ ತ. ಸು. ಶಾಮರಾಯರಿಗೆ ಬಂದಿದ್ದ ಶಿಷ್ಯವೇತನವನ್ನು ನಿಯಮ ಬದಲಿಸಿ 'ಪಟ್ವಾರಿ'ಗೆ ಸಿಗುವಂತೆ ವೆಂಕಣ್ಣಯ್ಯನವರು ಅನುಗ್ರಹಿಸಿದ್ದರು. ನನ್ನ ಮದುವೆ ಮತ್ತು ವರದಕ್ಷಿಣೆ ಗೊತ್ತಾದ ಸಮಾಚಾರ ತಿಳಿದಕೂಡಲೇ ನಮ್ಮ ಮಾವನ ಆರ್ಥಿಕ ಸ್ಥಿತಿಯನ್ನು ಬಲ್ಲ ಕೃಷ್ಣಶಾಸ್ತ್ರಿಗಳು ನಾಲ್ಕುನೂರು ರೂಪಾಯಿ ಮನಿಯಾರ್ಡರ್ ಕಳಿಸಿ ಕೊಟ್ಟಿದ್ದರು. ಅಂದರೆ ನನಗೆ ವರದಕ್ಷಿಣೆ ಕೊಟ್ಟವರು ಶಾಸ್ತ್ರಿಗಳು. "ಹೀಗೆ ನಾನು ಮೈಸೂರು ವಿಶ್ವವಿದ್ಯಾಲಯದ ಅಳಿಯ"ನೆಂದು ಹಾಸ್ಯವಾಗಿ ನಾನೊಮ್ಮೆ ಮಾನಸ ಗಂಗೋತ್ರಿಯ ಭಾಷಣದಲ್ಲಿ ಮೊನ್ನೆ ಮೊನ್ನೆ ಹೇಳಿದ್ದೆ.

ಈ ಸಾಹಿತ್ಯ ಸಮ್ಮೇಳನದಲ್ಲಿ ಶ್ರೀಸಿದ್ಧಯ್ಯ ಪುರಾಣಿಕರೂ ಒಂದು ಪದ್ಯ ಓದುವದೆಂದು ಗೊತ್ತಾಗಿತ್ತು. ಆಗ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಪುರಾಣಿಕರು ಪ್ರತಿಭಾವಂತರೆಂದು ಪ್ರಸಿದ್ಧರಾಗಿದ್ದರು. ಆಗಲೇ ಕಿರಿಯ ಕವಿಗಳ ಸಾಲಿನಲ್ಲಿ ಸೇರಿದ್ದರು. ಭೀಮಸೇನರಾಯರಿಗೂ, ಪಟ್ವಾರಿಯವರಿಗೂ ಅವರೆಂದರೆ ತುಂಬ ಅಭಿಮಾನ. ಪುರಾಣಿಕರ ಕಾವ್ಯ ವಾಚನವಾಯಿತು.

ದಿ. ಮಾನ್ವೀ ನರಸಿಂಗರಾಯರು ಬಹುಶಃ ಬರೆದುಕೊಟ್ಟಿದ್ದ ಭಾಷಣವನ್ನು ನಮ್ಮ ಮುಖಂಡ ಜಿ. ರಾಮಾಚಾರ್ಯರು ಓದಿದ ರೀತಿ ನೋಡಿ ನಾವು ಕನ್ನಡ ಚೆನ್ನಾಗಿ ಕಲಿಯಬೇಕೆನಿಸಿತು.

ಇದೇ ಸಮಯದಲ್ಲಿ ನಾನೂ ಒಂದು ಒಳ್ಳೆಯ ಕವಿತೆ ಬರೆದು ಓದಿದರೆ ಚೆನ್ನಾ

ಗಿರುತ್ತದೆಂದು ಸೂಚಿಸಿದರು ಮಾವ. ಅಳಿಯನೂ ಕವಿಯಾಗಬೇಕೆಂಬ ಹೆಮ್ಮೆ ಯಾರಿಗಿರಲಿಕ್ಕಿಲ್ಲ ? ನಾನು ಪ್ರಯತ್ನ ಮಾಡಿದೆ. ಬರೆದೆ. ನನ್ನ ಮೊದಲ ಕವಿತೆಯ ಸಾಲುಗಳು ಹೀಗಿದ್ದವು —

ಕನ್ನಡ ಕನ್ನಡ ಕನ್ನಡವೆನ್ನುತ ಭರದಿಂ ಮುನ್ನುಗ್ಗುವೆ ನಾನು
ಕನ್ನಡ ಮಾತೆಯ ಸೇವೆಯ ಗೈದೂ ಅಮರನೆನಿಸಿಕೊಳ್ಳುವೆ ನಾನು

ಹೀಗೆಯೇ ಇನ್ನೂ ನಾಲ್ಕಾರು ಸಾಲು ಬರೆದೆ. ಅದು ಎಲ್ಲೋ ಅಚ್ಚೂ ಆಯಿತು. ನಮ್ಮ ಮಾವ ಈ ಕವಿತೆಯನ್ನು ಮೆಚ್ಚಲಿಲ್ಲವೆಂಬುದಕ್ಕೆ ಕಾರಣ ಬೇಕಿಲ್ಲ. ಅಭ್ಯಾಸ, ಕಲ್ಪಕತೆ ಬೆಳೆಯದಿದ್ದ ಆಗಿನ ಸ್ಥಿತಿಯಲ್ಲಿ ಬರೆದ ಕವಿತೆಯಲ್ಲಿ ಕಾವ್ಯಗುಣ ಹೇಗೆ ಬರಬೇಕು ? ಆ ಸಮಯದಲ್ಲಿ ತಲೆಯಲ್ಲಿ ಸುಳಿಯುತ್ತಿದ್ದ ವಿಚಾರಗಳನ್ನು ಶಬ್ದಗಳಲ್ಲಿ ಹೊಸೆಯುವ ಪ್ರಯತ್ನ ಮಾಡಿದ್ದೆ ಅಷ್ಟೆ. ಆದರೆ ಕವಿತೆ ಎಂದಾಗ-ನದಿ, ಆಕಾಶ, ಸುಂದರ ದೃಶ್ಯ, ಲಲನೆ, ತುಂಬಿ ಇವುಗಳು ಹೊಳೆಯದೆ ಕನ್ನಡದತ್ತ ದೃಷ್ಟಿ ಹರಿದುದು ಕುತೂಹಲವೆಂದೇ ಹೇಳಬೇಕು. ಯಾಕೆಂದರೆ ನಾನು ಹಿಂದೆ ಸಂಸ್ಕೃತದ ವಿದ್ಯಾರ್ಥಿಯಾಗಿದ್ದಾಗ ಬೇರೆ ಬೇರೆ ಸಾಂದರ್ಭಿಕ ಕವಿತೆಗಳನ್ನು ಸಂಸ್ಕೃತ ದಲ್ಲಿ ಹೊಸೆದಿದ್ದೆ. ಕಾವ್ಯಕ್ಕೆ ತಕ್ಕ ವಸ್ತುಗಳಾವುವೆಂಬುದನ್ನು ಸಂಸ್ಕೃತ ಕಾವ್ಯಗಳಲ್ಲಿ ಕಂಡಿದ್ದೆ. ಅಂತೂ ಯಾವ ಕಾರಣದಿಂದಲೇ ಆಗಲಿ ಮೊದಲ ಕವಿತೆ ಕನ್ನಡವನ್ನು ಕುರಿತದ್ದೆಂದು ಯೋಚಿಸುವಾಗ ಈಗ ಧನ್ಯತೆಯೆನಿಸುತ್ತದೆ.

ಅನಂತರದ ದಿನಗಳಲ್ಲಿ ಅನೇಕ ಸಲ ಕರ್ನಾಟಕ ಸಾಹಿತ್ಯ ಮಂದಿರ ಏರ್ಪಡಿಸಿದ್ದ ಸಭೆಗಳಲ್ಲಿ, ನಾಡಹಬ್ಬಗಳಲ್ಲಿ ಮಾಸ್ತಿ. ಬಿ.ಎಂ. ಶ್ರೀ., ರಾಜರತ್ನಂ ಅವರ ಭಾಷಣ ಗಳನ್ನು ತಪ್ಪದೇ ಕೇಳುತ್ತಿದ್ದೆ. ಕರ್ನಾಟಕ ಸಾಹಿತ್ಯ ಮಂದಿರಕ್ಕೆ ಸದಸ್ಯನಾಗಿ ಅಲ್ಲಿ ಇದ್ದ ಕನ್ನಡ ಕಥೆ ಕಾದಂಬರಿಗಳನ್ನು ಓದಲಾರಂಭಿಸಿದೆ. ವಿದ್ಯಾರ್ಥಿಗಳೇ ರಚಿಸಿ ಕೊಂಡಿದ್ದ 'ನಿಜಾಂ ಕರ್ನಾಟಕ ವಿದ್ಯಾರ್ಥಿ ಸೇವಾ ಸಂಘ'ದ ಸದಸ್ಯನೂ ಆದೆ. ಆ ದಿನಗಳಲ್ಲಿ ನನ್ನ ಮೇಲೆ ತುಂಬ ಪ್ರಭಾವ ಬೀರಿದ ಚಿಕ್ಕ ಪುಸ್ತಕ ಆಲೂರ ವೆಂಕಟ ರಾಯರ 'ಕರ್ನಾಟಕದ ಗತ ವೈಭವ' ಅದನ್ನು ಹತ್ತಾರುಸಲವಾದರೂ ಓದಿರ ಬಹುದು. ಅದರ ಒಂದು ಟಿಪ್ಪಣಿಯನ್ನೇ ತಯಾರಿಸಿ ಭಾಷಣಕ್ಕೆಂದು ಇಟ್ಟು ಕೊಂಡಿದ್ದೆ.

ಮನೆಯಲ್ಲಿ ನನಗೆ ಇಂಗ್ಲೀಷ್ ಕಲಿಸಲು ಮಾವ ಹೆಣಗುತ್ತಿದ್ದರು. ರಾತ್ರಿ ಬಹಳ ಕಾಲ ಏಳುತ್ತಿದ್ದೆವು. ಮತ್ತೆ ಬೆಳಗಿನ ಜಾವದಲ್ಲಿ ತಾವೇ ಎಬ್ಬಿಸುತ್ತಿದ್ದರು. ಹೊಸದಾಗಿ ದಂಪತಿಗಳಾದವರಿಗೆ ಇದೇನು ಕಿರಿಕಿರಿ ಎಂದು ನಮ್ಮ ಅತ್ತೆ ಅನೇಕ ಸಲ ಮಾವನ ಮೇಲೆ ಹರಿಹಾದುದುಂಟು. ಆದರೂ ಆತನ ತಾಳ್ಮೆ ಮೆಚ್ಚತಕ್ಕದ್ದು. ಅಳಿಯನನ್ನು ಮನೆಯಲ್ಲಿ ಇಟ್ಟುಕೊಂಡುದೇ ವಿಶೇಷ ಭಾರ. ಅವರಿಗೂ ಆಗ ಆರು ಮಕ್ಕಳಿದ್ದರು. ಈ ಅಳಿಯ ಎಷ್ಟು ಓದುವನೆಂಬ ಖಾತ್ರಿಯಿಲ್ಲ. "ಹ್ಯಾಗಿದ್ದಾನೆ—

ಅಳಿಯ" ಎಂದು ಅತ್ತೆ ಕೇಳಿದಾಗ "ಜೋಳವಂತೂ ಒಳ್ಳೆಯವು. ಬೀಸಿ, ನಾದಿ, ಹದಮಾಡಿ ರೊಟ್ಟಿ ಮಾಡಿಕೊಳ್ಳಬೇಕಾಗಿದೆ"ಎಂದು ಆಕೆಗೆ ತಿಳಿಯುವ ಭಾಷೆಯಲ್ಲಿ ಮಾವ ಹೇಳುತ್ತಿದ್ದರು. ಈ ಸ್ಥಿತಿಯಲ್ಲಿ ಆರೆಂಟು ತಿಂಗಳು ಇಂಗ್ಲೀಷ್ ಅಭ್ಯಾಸ ಮುಗಿಸಿ ಬೇಸಗೆ ರಜೆಗೆಂದು ಕನಕಗಿರಿಗೆ ನಾವಿಬ್ಬರೂ ಹೋದೆವು. ವಾಪಸು ಬಂದು ಜೂನ್ ಪ್ರಾರಂಭಕ್ಕೆ ಮೆಟ್ರಿಕ್ ಪರೀಕ್ಷೆಗಾಗಿ ಖಾಸಗಿ ಕ್ಲಾಸ್ ಸೇರಬೇಕೆಂದು ನಿರ್ಧಾರವಾಗಿತ್ತು.

## ಪರೀಕ್ಷಾ ಸಮಯಗಳು

ಲಗ್ನವಾದ ಮೇಲೆ ನಾವಿಬ್ಬರೂ ಕನಕಗಿರಿಗೆ ಹೋದುದು ಅದು ಮೊದಲ ಸಲ ವಾಗಿತ್ತು. ಅಪ್ಪನ ಹೆದರಿಕೆಗೋ, ಸಮಾಧಾನಕ್ಕೊ ಮತ್ತೆ ಸ್ವಲ್ಪ ಚೆಂಡಿಕೆ ಬೆಳೆಸಿದ್ದೆ. ಪಟ್ಟಣದ ಹುಡುಗಿಯಾದ ನನ್ನ ಪತ್ನಿಗೂ ತನ್ನ ಪರಿಕರಗಳನ್ನು ಪ್ರದ ರ್ಶಿಸದಂತೆ ಎಚ್ಚರಿಸಿದ್ದೆ. ಆದರೂ ನಮ್ಮ ಪ್ರತಿ ನಡತೆಯಲ್ಲೂ ವಿಶೇಷವನ್ನೇ ಕಾಣುವ ಕಣ್ಣುಗಳು ನಮ್ಮೂರಲ್ಲಿ ಬಹಳವಾಗಿದ್ದವು. ಸರಸ ದಂಪತಿಗಳಾದ ನಮ್ಮ ಮಾವ, ಅತ್ತೆಯರ ನಡತೆಯ ಪ್ರಭಾವ ನಮ್ಮ ಮೇಲಾಗಿ ಮಾತುಕತೆಗಳಲ್ಲಿ ಚೇಷ್ಟೆ, ವಿನಿಮಯಗಳಲ್ಲಿ ಹಳ್ಳಿಯ ಕಟ್ಟುಪಾಡುಗಳನ್ನು ನಾವು ಹೆಚ್ಚು ಗಮನಿಸುತ್ತಿದ್ದಿಲ್ಲ. ಅದೆಲ್ಲ ಆಕ್ಷೇಪಣೆ, ಟೀಕೆಗಳಿಗೆ ಕಾರಣವಾಗಿತ್ತು. ಒಂದು ರಾತ್ರಿ ತಡವಾಗಿ ನಾವಿಬ್ಬರೇ ಊಟಕ್ಕೆ ಕುಳಿತಾಗ ಒಬ್ಬರ ಕೈಯ ತುತ್ತು ಇನ್ನೊಬ್ಬರು ಇಸಕೊಂಡಿರ ಬಹುದು. ಅದನ್ನು ಹೊರಗಿನ ಕಿಟಕಿಯಿಂದ ಕಂಡವರು ಆಕ್ಷೇಪಿಸಿದಾಗ 'ಅದನ್ನೇಕೆ ನೋಡಲು ಹಣಿಕಿ ಹಾಕಿದಿರಿ' ಎನ್ನಬೇಕಾಯಿತು. ಮತ್ತೊಮ್ಮೆ ಸ್ವತಃ ಸಂದಿಗ್ಧ ಚಾರಿತ್ರ್ಯದ ಕೆಲ ಹಿರಿಯರು ಸೇರಿ ಹರಟೆ ಹೊಡೆಯುತ್ತಿದ್ದರು. ಅವರಲ್ಲೊಬ್ಬ ಗಣ್ಯ 'ನಿನ್ನ ಹೆಂಡತಿಯ ಬಿಟ್ಟ ಹೆರಳು ಚೆಂದ ಕಾಣುವುದಿಲ್ಲ. ಲಗ್ನವಾದವರು ತುರುಬು ಕಟ್ಟಬೇಕು' ಎಂದು ನನಗೆ ಉಪದೇಶ ಆರಂಭಿಸಿದ. ಇತರರೂ ದನಿ ಗೂಡಿಸಿದರು. "ಆಕೆ ನನ್ನ ಹೆಂಡತಿ. ನನ್ನ ಮನಸ್ಸಿಗೆ ಬರುವಂತೆ ಇರುತ್ತಾಳೆ. ಈ ಊರಿಗಾಗಿ ಆಕೆಗೆ ತಾಳಿ ಕಟ್ಟಿಲ್ಲ" ಎಂದು ಒರಟಾಗಿ ಎದುರಿಸಿದಾಗ ಹಿರಿಯರೆಲ್ಲ ಪೆಚ್ಚಾ ದರು."ಏನು ಉದ್ಧಟ" ಎಂದು ಮನಸ್ಸಿನಲ್ಲಿ ಅಂದುಕೊಂಡಿರಬೇಕು. ನನ್ನ ಹೆಂಡತಿಗೆ ಕಾಫಿಯ ಚಟ. ಅದು ನಮ್ಮ ಮನೆಯಲ್ಲಿ ಆಗ ನಿಷಿದ್ಧವಾಗಿತ್ತು. ಅದಕ್ಕಾಗಿ ರಂಪ. ಅಪ್ಪ ಒಪ್ಪಿದರೂ ಅವ್ವನ ಹಟ. ಕಾಫಿ ಕಾಸುತ್ತಿರುವಾಗ ಒಲೆಗೆ ತಣ್ಣೀರ ಸ್ನಾನ. ಅತ್ತೆಯ ಸಾಂಪ್ರದಾಯಿಕ ಆಕ್ರೋಶ. ಇಷ್ಟೆಲ್ಲ ಗಲಿಬಿಲಿಯಲ್ಲಿ ನಾವು ವಾಪಸು ಹೊರಡುವ ದಿನಗಳು ಬಂದವು. ನನ್ನ ಪತ್ನಿಯನ್ನು ಬಿಟ್ಟು ಹೋಗಲು ತಂದೆ ಸೂಚಿಸಿದರು. ಮಾವನ ಮನೆಯಲ್ಲಿ ಅವರ ಮಗಳಿಲ್ಲದೆ ನಾನಿರುವ ನಾಜೂಕನ್ನು

ಅವರು ತಿಳಿಯದಾದರು. ಹಾಗಿದ್ದರೆ ಮುಂದಿನ ಓದೇ ಬೇಡವೆಂಬ ವಾದ. ನನಗೋ ಈಗ ಕಲಿಯುವ ಹಸಿವು ಹೆಚ್ಚಿತ್ತು.

ಅಂತೂ ಪತ್ನಿಯನ್ನು ಬಿಟ್ಟೇ ಹೈದರಾಬಾದಿಗೆ ಹೋದೆ. ಆದರೆ ಎರಡೇ ತಿಂಗಳಲ್ಲಿ ಬೇಸತ್ತು ಕರೆದೊಯ್ಯಲು ಬಂದೆ. ನಮ್ಮ ತಂದೆಗೆ ಸಿಟ್ಟೋಸಿಟ್ಟು. ನನ್ನಾಕೆಯ ಎದುರಿನಲ್ಲೇ ನನ್ನ ಬೆನ್ನಿಗೆ ಎರಡು ಬಾರಿಸಿಬಿಟ್ಟರು. ನಕ್ಕು ಬಿಟ್ಟೆ. ನಮ್ಮ ತಾಯಿಯ ಬಾಣಂತನಕ್ಕಾಗಿ ಈಕೆ ನಿಲ್ಲಬೇಕಿತ್ತಂತೆ. ಹತ್ತಿರವೇ ಇದ್ದ ಸೋದರತ್ತೆ ಆ ಕೆಲಸ ನಡೆಸಿದ್ದಳು. ನಮ್ಮೂರ ರಸಿಕ ಮುದುಕಿಯೊಬ್ಬಳು "ಹರೆ ಅಂಬೋದು ಹಬ್ಬ ಹುಡುಗಿ, ಗಂಡನ ಹತ್ರ ಹೋಗು" ಎಂದು ನನ್ನಾಕೆಗೆ ಅಂದಿದ್ದಳಂತೆ. ನಮ್ಮ ಮಾವನಿಗೂ ಸಂಕೋಚ. ನಮ್ಮ ತಂದೆ ಅಪಾರ್ಥ ಮಾಡಿಕೊಂಡಾರೆಂಬ ಭಯ. ಹಣವೂ ಇಲ್ಲ, ಕೀರ್ತಿಯೂ ಇಲ್ಲವಾದರೆ ಹೇಗೆ ಎಂಬ ಸಂದೇಹ. ಆತನೇ ಹಣ ಕೊಟ್ಟಿದ್ದರೂ ನನ್ನ ಪತ್ನಿಯನ್ನು ನಾನು ಕರೆದೊಯ್ಯುವುದು ಅಷ್ಟು ಸುಲಭವಾಗಿರಲಿಲ್ಲ. ನಮ್ಮ ತಂದೆ ದೂರಾಲೋಚನೆ ಮಾಡುತ್ತಿರಲಿಲ್ಲ. ಸಿಟ್ಟಿನ ಭರದಲ್ಲಿ ಪಂಚಾಯತಿಯ ಹಿರಿಯರನ್ನು ಕರೆಯುವುದಾಗಿ ಹೇಳಿದಾಗ ನನಗೆ ರೇಗಿ ಹೋಯಿತು. "ಹೆಂಡತಿಯನ್ನು ಗಂಡ ಕರೆದೊಯ್ಯುವಾಗ ತಡೆಯುವ ಬೋಳೀ... ಮಗ ಅದಾವ ಪಂಚ ಕರೆ"ಎಂದು ನಾನು ಗುಡುಗಿದೆ. ಒಂದು ಕಾಸೂ ಗಳಿಸಲಾಗದ ನನ್ನ ಕಾಡು ಧೈರ್ಯ, ತಂದೆಯಲ್ಲಿ ಆಚ್ಚರಿಯನ್ನುಂಟುಮಾಡಿದ್ದೀತು. ನನಗೇನೂ ವಿದ್ಯೆ ದಕ್ಕಲಾರದೆಂದು ಶಪಿಸಿ ಸುಮ್ಮನಾದರು. ತಂದೆಯ ಶಾಪ ಮಗನಿಗೆ ಆಶೀರ್ವಾದವೆಂದುಕೊಂಡು ನಾವೂ ಹೈದ್ರಾಬಾದಿಗೆ ಮರಳಿದೆವು. ನಿಜವಾಗಿಯೂ ನಾನಾಗ ಹೆಂಡತಿಗೆ ಒಂದು ಕಾಸಿನ ಹೂವು ಕೊಡಿಸುವಂತಿರಲಿಲ್ಲ. ಊರಲ್ಲಿ ತಂದೆ, ಹೈದ್ರಾಬಾದಿನಲ್ಲಿ ಮಾವ ಇಂಥದನ್ನೆಲ್ಲ ನೋಡಿಕೊಳ್ಳಬೇಕಿತ್ತು. ಆದರೂ ನನಗೆ ಅಭಿಮಾನ ಗುಡ್ಡದಷ್ಟು.

ಆದೇಕೋ ಪ್ರತಿಸಲ ಕನಕಗಿರಿಗೆ ಬಂದು ಮರಳುವಾಗ ಇಂಥ ಝಟಾಪಟಿಗಳಾಗುತ್ತಿದ್ದವು. ಆದರೂ ನಾನು ಪರೀಕ್ಷೆಗಳಲ್ಲಿ ಒಳ್ಳೆಯ ರೀತಿಯಲ್ಲೇ ಪಾಸಾಗುತ್ತಿದ್ದೆ. ಅದು ತಿಳಿದಾಗ ತಂದೆ ಕಾವ್ಯಮಯವಾಗಿ ಅಭಿನಂದಿಸುತ್ತಲೂ ಇದ್ದರು. ಮುಕ್ತ ವಾತಾವರಣದಿಂದ ನನ್ನಲ್ಲಿ ಚೇತರಿಸಿಕೊಂಡ ಸ್ವತಂತ್ರ ವಿಚಾರ, ಧೈರ್ಯಗಳು ನಮ್ಮ ತಂದೆಯ ಸಾಂಪ್ರದಾಯಿಕ ಮನಸ್ಸಿಗೆ ಹಿಡಿಸುತ್ತಿರಲಿಲ್ಲವೆಂದು ತೋರುತ್ತದೆ. ಕರ್ಮಠ ವಿದ್ವಾಂಸನಾಗಬೇಕಾದ ವಿಧೇಯ ಮಗ ನೂತನ ಶಿಕ್ಷಣ ಮತ್ತು ಅದರ ಉಪಫಲಗಳಾದ ವೈಚಾರಿಕತೆ, ಅಸಾಂಪ್ರದಾಯಿಕ ವಿಚಾರ ಸರಣಿಯತ್ತ ತಿರುಗಿದುದು ಅವರ ಅಂತರಂಗದ ಅಸಮಾಧಾನಕ್ಕೆ ಕಾರಣವಿರಬೇಕು. ನಾನಂಥ ಕ್ರಾಂತಿಕಾರಿ ಈಗಲೂ ಆಗಿಲ್ಲ. ಆಸ್ತಿಕನೂ ಹೌದು. ನಾಸ್ತಿಕನಂತೂ ಅಲ್ಲ. ಆದರೆ ನಮ್ಮ ತಂದೆಯಂಥವರಿಗೆ ಕೇವಲ ಆಸ್ತಿಕತೆ ಇದ್ದರೆ ಸಾಲದು. ಅವರ ನಂಬಿಕೆ ಮತ್ತು ಆಚಾರ

ಗಳಿಗೆ ಹೊಂದುವಂಥ ಆಸ್ತಿಕತೆ ಬೇಕು. ಅಂಥದರಲ್ಲಿ ನಾನು ನಂಬಿಕೆ ಕಳೆದುಕೊಂಡು ಬಹಳ ದಿನಗಳಾದವು. ಈ ಮಾನಸಿಕ ನಿಲುವಿನಿಂದ ಆತ ಕೊನೆಯವರೆಗೂ ಹೊರ ಬರಲಾಗಲಿಲ್ಲವೆಂಬುದು ನನ್ನ ಅನಿಸಿಕೆ. ಆತನ ವಿಚಾರಕ್ಕೆ ನಾನೂ ಹೊಂದಿಕೊಳ್ಳ ಲಿಲ್ಲ. ಪ್ರಬುದ್ಧ ಮಕ್ಕಳ ವೈಚಾರಿಕ ಸ್ವಾತಂತ್ರ್ಯವನ್ನು ಮನ್ನಿಸುವ ಹಿರಿಯರೇ ನಮ್ಮಲ್ಲಿ ವಿರಳವೇನೋ.

ಮಗ ತನ್ನ ತಂದೆಯನ್ನು ಕುರಿತು ಹೀಗೆಲ್ಲ ಬರೆಯುವದೇ ಒಂದು ಅಸಾಂಪ್ರ ದಾಯಿಕತೆ. ಆದರೆ ನಮ್ಮಪ್ಪ ಬದುಕಿರುವಾಗಲೂ ಇಂಥ ಅನೇಕ ಸನ್ನಿವೇಶಗಳ ಬಗ್ಗೆ, ವಿಚಾರ ಭೇದಗಳ ಬಗ್ಗೆ ಸಂಭಾಷಣೆ ಪತ್ರ ವ್ಯವಹಾರ ಮಾಡುತ್ತಿದ್ದೆವು. ಅನೇಕ ಸಲ ಆತ ಮೆಚ್ಚಿಕೆ ವ್ಯಕ್ತಪಡಿಸುವ ಔದಾರ್ಯ ತೋರುತ್ತಿದ್ದರು. ಒಂದು ದಿಕ್ಕಿನಲ್ಲಿ ನಡೆದು ರೂಢಿಯಾಗಿದ್ದ ಮನಸ್ಸು, ಬುದ್ಧಿಗಳಿಗೆ ಇನ್ನೊಂದು ಬದಿಯಿಂದ ನೋಡು ವುದೂ ಕಷ್ಟ. ಇದು ಆತನಿಗೂ ತಿಳಿದಿತ್ತು. ಅಂತೆಯೇ ವಾದಗಳಲ್ಲಿ ಉಂಟಾಗಿರ ಬಹುದಾದ ವಿರಸ ಕೂಡಲೇ ಕಡಿಮೆಯಾಗಿ ಮತ್ತೆ ಪಿತೃಪ್ರೇಮ ಜಾಗೃತವಾಗಿ ಸಂತೋಷ ಸಮಾಗಮಗಳಲ್ಲಿ ಪರ್ಯವಸಾನವಾಗುತ್ತಿತ್ತು. ಇದೆಲ್ಲ ಹೊರಗಿನವರಿ ಗೇನು ಗೊತ್ತು ? ಗುಣಗ್ರಾಹಿತ್ವ, ವಿದ್ಯಾಪ್ರೇಮ ಆತನ ಪ್ರಧಾನ ಗುಣವೆನ್ನ ಬಹುದು. ಆತನ ಚಿಂತೆ ಮತ್ತು ಚಿಂತನೆಗಳೆರಡರಲ್ಲೂ ನಾನು ತೀರ ಹತ್ತಿರದವ ನಾಗಿದ್ದೇನೇನೋ ! ಅಂತೆಯೇ ಇತ್ತೀಚೆಗೆ ತನ್ನ ಕೊನೆಯ ದಿನಗಳನ್ನು ನನ್ನ ಸಾಮೀಪ್ಯ ಬಯಸಿ ಬಂದು ಕಳೆದರು.

ಹೈದ್ರಾಬಾದಿನಲ್ಲಿ 'ಕಾಳೆ' ಎಂಬುವರು ನಡೆಸುತ್ತಿದ್ದ ಖಾಸಗಿ ಸಂಸ್ಥೆಯಲ್ಲಿ ಸೇರಿ ಬನಾರಸ್ ಮೆಟ್ರಿಕ್ ಪರೀಕ್ಷೆಗಾಗಿ ಓದಲಾರಂಭಿಸಿದೆ. ಕನ್ನಡ, ಸಂಸ್ಕೃತಗಳೂ ನನ್ನ ಅಭ್ಯಾಸದ ವಿಷಯಗಳಲ್ಲಿ ಸೇರಿದ್ದಕ್ಕಾಗಿ ನನಗೆ ಪಾಸಾಗುವದು ಸುಲಭ ವಾಯಿತು. 1943ರಲ್ಲಿ ಬನಾರಸ್ಸಿಗೆ ಹೋಗಿ ಪರೀಕ್ಷೆ ಬರೆದೆ. ಸಂಸ್ಕೃತ ಮತ್ತು ಕನ್ನಡದಲ್ಲಿ ವಿಶಿಷ್ಟ ಶ್ರೇಣಿಯೊಂದಿಗೆ ಮೆಟ್ರಿಕ್ ಎರಡನೆಯ ದರ್ಜೆಯಲ್ಲಿ ಪಾಸಾದೆ. ಇದೀಗ ನನ್ನ ತಲೆಗೂ ಇಂಗ್ಲೀಷ್ ಹತ್ತುವದೆಂದು ಖಾತರಿಯಾಯಿತು. ಆದರೆ ಗಣಿತದಲ್ಲಿ ಮಾತ್ರ ಇಪ್ಪತ್ತಾರು ಅಂಕಗಳೇ. ಜಾಮಿತಿಯ ಬಲದಿಂದ ಪಾರಾಗಿದ್ದೆ.

ಪರೀಕ್ಷೆಗೆಂದು ಹೋಗಿ ಬನಾರಸ್ಸಿನ ಒಂದು ಹಾಸ್ಟಲ್‌ನಲ್ಲಿ ಇಳಿದಿರುವಾಗ ಒಂದು ಚಿಕ್ಕ ಘಟನೆ ಜರುಗಿತು. ನಮ್ಮ ಸಂಸ್ಥೆಯಲ್ಲೇ ಸಹಾಧ್ಯಾಯಿನಿಯಾದ ಒಬ್ಬ ವಿದ್ಯಾರ್ಥಿನಿ ನನ್ನೊಂದಿಗೆ ಅಭ್ಯಾಸ ಮಾಡುತ್ತಿದ್ದಳು. ಅವಳ ಬಂಧುಗಳೂ ಜೊತೆಗಿದ್ದರು. ಆದರೂ ಒಂದು ರಾತ್ರಿ, ನನ್ನನ್ನು ಜಾರಿಸುವ ಪ್ರಯತ್ನ ಮಾಡಿ ದ್ದಳು. ಭಯವೋ, ಹಣದ ಅಭಾವವೋ ಅಥವಾ ನಾನಾಗಲೇ ಒಂದು ಕೂಸಿನ ತಂದೆಯೆಂಬ ಒಳದನಿಯ ಬಲವೋ, ಅಥವಾ ಆ ಕ್ಷೇತ್ರದ ಅನನುಭವಿಕತನವೋ

ಅಂತೂ ನಾನಂದು ಉಳಿದುಕೊಂಡಿದ್ದೆ. ವಾಸ್ತವತೆಯೂ ಒಮ್ಮೊಮ್ಮೆ ಕಲ್ಪನೆಗಿಂತ ರಮ್ಯವಾಗಿ ಕಾಣುವದಂತೆ.

## ರಾಜಕೀಯ ಪ್ರವೇಶ

ಮೆಟ್ರಿಕ್ ಪಾಸಾಗಿ ನಾನೂ ನನ್ನ ಪತ್ನಿ ಮತ್ತೆ ಕನಕಗಿರಿಗೆ ಬಂದೆವು. ವಿದ್ಯೆ ಸಾಕೆಂದು ತಾತ್ಕಾಲಿಕವಾಗಿ ನನಗೂ ಅನಿಸಿತ್ತು. ಊರಲ್ಲಿಯೂ ಈಗ ನಾನೊಬ್ಬ ಸುಶಿಕ್ಷಿತ ತರುಣನಾಗಿದ್ದೆ. ಮಿಡ್ಲಸ್ಕೂಲ್ ಫೇಲಾಗಿದ್ದವನಾದ ನಾನು ದಿಢೀರ್ ಮೆಟ್ರಿಕ್ ಆದುದು ಅನೇಕರ ಹುಬ್ಬುಗಳನ್ನೇರಿಸಿತ್ತು. ನಾಲ್ಕೈದು ವರ್ಷಗಳಿಂದಲೂ ಲಾಗಾ ಹೊಡೆಯುತ್ತಿದ್ದರೂ ಪಾಸಾಗಿರುವನೆಂಬ ಸುದ್ದಿ ಹರಡಿಸಿಕೊಂಡಿದ್ದ ಮಾಸ್ತರ ಮಗನೊಬ್ಬ ನನ್ನನ್ನು ಮಾತನಾಡಿಸಲು ಸಹ ಈಗ ಬೆದರಿದಂತಿತ್ತು. ಅವನ ದೃಷ್ಟಿಯಲ್ಲಿ ನಾನೊಬ್ಬ ವೈದಿಕ ಬ್ರಾಹ್ಮಣ ಹುಡುಗನಾಗಿಯೇ ಬಹುದಿನ ಕಂಡಿದ್ದೆ.

ನಮ್ಮ ಹೊಲಗಳಲ್ಲಿ ಬೇಸಾಯ ಮಾಡಿಸಬೇಕೆಂದು ಎತ್ತಿನ ಖರೀದಿಯ ಯೋಚನೆ ಮಾಡಿದೆವು. ಬ್ರಾಹ್ಮಣರ ಬೇಸಾಯ ಎಂದು ಮುಂದಾಗಿತ್ತು? ಹಿಂದೊಮ್ಮೆ ನಮ್ಮ ತಂದೆ ಎತ್ತು ಬಂಡಿ ಇಟ್ಟು, ಕೈಸುಟ್ಟುಕೊಂಡಿದ್ದರು. ಮನೆಯಲ್ಲಿನ ಹತ್ತಿಪ್ಪತ್ತು ತೊಲೆ ಬಂಗಾರ ಮಾರಿಕೊಂಡಿದ್ದರು. ಬೇಸಾಯಕ್ಕೆ ಈಗ ಮಗನಾದ ನಾನು ಮುಂದಾಗಿದ್ದೆ. ತಂದೆಯೂ ಕುಮ್ಮಕ್ಕು ಕೊಟ್ಟಿದ್ದರು. ಯಾಕೆಂದರೆ ಇನ್ನಷ್ಟು ಚಿನ್ನ ಮನೆಯಲ್ಲಿತ್ತು. ಆದರೆ ಈ ಪ್ರಯತ್ನಗಳು ನಡೆದಾಗಲೇ ಬೇರೊಂದು ತಿರುವು ಬಂತು. ಸದಾಶಿವರಾವ್ ಎಂಬ ಹಿರಿಯ ಮಿತ್ರರು ತಮ್ಮ ಅನುಭವ ಹೇಳಿ ನಮ್ಮನ್ನು ಉಳಿಸಿದರು.

ನಾನು ಹೈದ್ರಾಬಾದಿನಲ್ಲಿ ಇದ್ದಾಗ ಆರ್ಯಸಮಾಜದವರ ಸತ್ಯಾಗ್ರಹಗಳು ನಿಜಾಮರ ಆಳಿಕೆಯ ವಿರುದ್ಧ ನಡೆಯುತ್ತಿದ್ದವು. ಅಖಿಲ ಭಾರತ ಮಟ್ಟದ ಉಗ್ರ ಭಾಷಣಕಾರರ ಭಾಷಣಗಳಾಗುತ್ತಿದ್ದವು. ಸತ್ಯದೇವಜಿ, ಪಂಡಿತ ನರೇಂದ್ರಜಿ ಮೊದಲಾದವರ ಭಾಷಣಗಳು ಪರಿಣಾಮಕಾರಿಯಾಗಿರುತ್ತಿದ್ದವು. ಸ್ಟೇಟ್ ಕಾಂಗ್ರೆಸ್ ಮೇಲೆ ಆಗಲೇ ನಿರ್ಬಂಧ ಹಾಕಲಾಗಿತ್ತು. ಮುಖಂಡರು ಪ್ರಾದೇಶಿಕ ಪರಿಷತ್ತುಗಳನ್ನು ರಚಿಸಿಕೊಂಡು ಕೆಲಸ ಮಾಡುತ್ತಿದ್ದರು. ಇದೆಲ್ಲದರ ಪರಿಣಾಮ ಅದೇ ಆಗ ಹೊಸ ಸಂಪರ್ಕಗಳಿಗೆ ತೆರೆಯುತ್ತಿದ್ದ ನನ್ನ ಮನಸ್ಸಿನ ಮೇಲೂ ಆಗಿತ್ತು. ಕನಕಗಿರಿಯಲ್ಲಿ ನಮ್ಮ ತಂದೆಯ ಸ್ನೇಹಿತರಿಂದ ಹಣ ಶೇಖರಿಸಿ ಪತ್ರಿಕೆಗಳನ್ನು ತರಿಸಿ ಒಂದು ವಾಚನಾಲಯವನ್ನು ಬಾಜಾರದ ಮಳಿಗೆಯಲ್ಲಿ ತೆರೆದೆವು. ನಮ್ಮ ತಂದೆಗೆ ಇಂಥದರಲ್ಲಿ ಹುರುಪು. ಆತನಲ್ಲೂ ದೇಶಪ್ರೇಮ, ಹೋರಾಟದ ಕಿಡಿ ಇತ್ತೇನೊ. 1921 ರಲ್ಲಿ ಆತ ವಿಜಾಪುರದಲ್ಲಿ ಓದುತ್ತಿದ್ದಾಗ ಕಾಂಗ್ರೆಸ್‌ನ ನಾಲ್ಕಾಣೆ ಸದಸ್ಯನಾಗಿದ್ದ ರಶೀದಿಯೊಂದು ಈಚೆಗೆ ಆತನ ಪುಸ್ತಕಗಳಲ್ಲಿ ಸಿಕ್ಕಿದೆ.

ಈ ಲೈಬ್ರರಿಯ ಉದ್ಘಾಟನೆಯಲ್ಲಿ ನನ್ನ ಮತ್ತು ಸ್ಥಳೀಯ ಪೋಲಿಸರ ನಡುವೆ ಉಂಟಾದ ತಿಕ್ಕಾಟದ ಫಲವಾಗಿ ನಮ್ಮೂರಿನಲ್ಲಿ ನಿಜಾಂ ಕರ್ನಾಟಕ ಪರಿಷತ್ತಿನ ಶಾಖೆಯನ್ನೇ ಸ್ಥಾಪಿಸಿ (ರಾಜಕೀಯ) ನಾನು ಅದರ ಕಾರ್ಯದರ್ಶಿಯಾದೆ. (ವಿವರ ಬೇರೊಂದು ಲೇಖನದಲ್ಲಿದೆ) ಥೋಟಾ ಮುಖಂಡತ್ವವನ್ನೂ ವಹಿಸತೊಡಗಿದೆ. ಇದು ಅನೇಕರಿಗೆ ತಲೆಸೂಲೆಯಾಯಿತು. ಅಂತೂ ನನ್ನ ರಾಜಕೀಯ ಪ್ರವೇಶ ಈ ರೀತಿಯಾಯಿತು. ನಿರುದ್ಯೋಗಿಗಳು ರಾಜಕಾರಣಿಗಳಾಗುವ ದಾರಿ ಇದೇ ಅಲ್ಲವೆ?

ಇಷ್ಟರಲ್ಲಿ ನಮ್ಮ ಮನೆಯಲ್ಲಿ ಒಂದು ದುರಂತ ಜರುಗಿ ನನ್ನ ಬಾಳಿಗೆ ಮತ್ತೊಂದು ತಿರುವು ಬಂತು. ನನ್ನ ಚೊಚ್ಚಲ ಮಗು'ನಲಿನಿ'ಬಹುಮುದ್ದಾದ ಕೂಸು. ಒಂದೆರಡು ದಿನಗಳಿಂದ ಜ್ವರ ಕಾಣಿಸಿಕೊಂಡಿತ್ತು. ಅಂದು ಎಂಥದೋ ದ್ವಾದಶಿ. ಮನೆಯಲ್ಲಿ ಕರಿಗಡಬು, ಬುರಬುರಿ ಇತ್ಯಾದಿ ನೈವೇದ್ಯ ಮಾಡುವದು ರೂಢಿ. ಕೂಸಿಗೆ ಜ್ವರವಿದ್ದ ಕಾರಣ ಕಮರು ವಾಸನೆ ಬೇಡ, ಕರಿಯುವದು ಬೇಡವೆಂದು ಸೂಚಿಸಿದೆವು. ಆದರೆ ತಂದೆ ಇಂಥ ವಿಚಾರ ಆಚಾರಗಳಲ್ಲಿ ಕಟ್ಟುನಿಟ್ಟು ಜಾಸ್ತಿ. ಪುಣ್ಯಕಾರ್ಯದ ಫಲ ಕೆಟ್ಟುದಾಗಲಾರದೆಂಬ ಶ್ರದ್ಧಾವಾದ ಬೇರೆ."ಕಡುಬು ಕರಿಯುವದಕ್ಕೂ ಪುಣ್ಯಕ್ಕೂ ಹೇಗೆ ಸಂಬಂಧ-"ವೆಂದು ನಾನು ಕೇಳಿದ್ದರೆ ಜಗಳವಾಗುತ್ತಿತ್ತು. ನಮ್ಮ ತಾಯಿ ಕೂಡ ಒಳಗಿರಲಿಲ್ಲ. ಒಂದು ವರ್ಷದ ಜ್ವರದ ಮಗುವನ್ನು ತೊಟ್ಟಿಲಲ್ಲಿ ಹಾಲುಣಿಸಿ ಮಲಗಿಸಿ ಸ್ನಾನ ಮಾಡಿ, ಮಡಿಯಲ್ಲಿ ಅಡಿಗೆಗೆ ನನ್ನ ಪತ್ನಿ ತೊಡಗಿದಳು. ನಾನೂ ಮಡಿಯಾಗಿ ಅವಳ ಸಹಾಯಕ್ಕೆ ಹೋದೆ. ಈ ಮಡಿಯ ಸುಳಿಯಲ್ಲಿ ಸಿಕ್ಕಿದ್ದ ನಮ್ಮ ತಾಯಿ"ನೀರು ನೀರು"ಎಂದು ಅರಚುವ ರೋಗಿಷ್ಠ ತಂದೆಯನ್ನು ಮುಟ್ಟಿದರೆ ಮೈಲಿಗೆಯಾಗುವದೆಂದು ಒಮ್ಮೆ ನೆರಮನೆಯವರನ್ನು ಕರೆಯಹೋಗಿದ್ದಳು. ಅದನ್ನು ತಂದೆಯೇ ದೂರಿದ್ದರು. ಆದರೆ ಆತನೂ ಸುಳಿಯಲ್ಲಿ ಸಿಕ್ಕಾತನೇ. ಎಲ್ಲ ಕರಿದದ್ದಾಯಿತು. ಅಡಿಗೆ ನೈವೇದ್ಯಗಳಾದವು. ತಂದೆಗೂ ಬ್ರಾಹ್ಮಣರಿಗೂ ಊಟಕ್ಕೆ ಒಡಿಸಿ ಬಂದು ತೊಟ್ಟಿಲಲ್ಲಿ ಇಣುಕಿದಾಗ 'ನಲಿನಿ' ಕಣ್ಣು ನಿಲ್ಲಿಸಿತ್ತು. ಪಕ್ಕೆಗಳು ಹೊಡೆದುಕೊಳ್ಳುತ್ತಿದ್ದವು. ಮೂಗು ಅರಳುತ್ತಿತ್ತು. ಸೀತಾ ಅಳತೊಡಗಿದಳು. ಯಾರೋ ಪಕ್ಕದವರು ಬಂದು 'ಚಿಟಿಕೆ' ಹಾಕಿದರು. ಸಮೀಪದ ಬಂಧುಗಳು ಬಂದು ಕೂಸನ್ನು ಸರಿಯಾಗಿ ನೋಡಿಕೊಂಡಿಲ್ಲವೆಂದು ತಾಯಿಗೆ ಬಯ್ದರು. ಕೆಲವರು ದ್ವಾದಶಿಯನ್ನು ಬಯ್ದರು. ಆದರೆ ಕರಿಗಡಬು ತಿಂದವರನ್ನೂ ತಿನಿಸಿದವರನ್ನೂ ಯಾರೂ ಬಯ್ಯಲಿಲ್ಲ. ಯಾರು ಯಾರಿಗೆ ಅಂದರೇನು ? ನಲಿನಿಯ ಜೀವ ಹಾರಿ ಹೋಯಿತು. ನಮ್ಮ ತಾಯಿಯ ಸತ್ತ ಮಕ್ಕಳಲ್ಲಿ ಕೆಲವಾದರೂ ಇದೇ ರೀತಿ ಸತ್ತಿರಬೇಕೆನಿಸಿತು.

ಆ ಕೂಸು ಸತ್ತು ನಮಗೆ ಉಪಕಾರ ಮಾಡಿತ್ತೇನೋ ! ನಾವು ಮತ್ತೆ ಹೈದ್ರಾಬಾದಿಗೆ ಹೊರಟೆವು.

## ಶಿಕ್ಷಕ-ಲೇಖಕ ಇತ್ಯಾದಿ

ಸತ್ತ ಮಗುವಿನ ತಾಯಿಯಾದ ತಮ್ಮ ಮಗಳನ್ನು ಕರೆಸಿಕೊಂಡ ನಮ್ಮ ಅತ್ತೆ ಮಾವ, ಮಗಳ ಸಾಂತ್ವನದ ಜೊತೆಗೆ ನನ್ನದೂ ಚಿಂತೆ ಮಾಡಿದರು.ದೊಡ್ಡ ಸಂಸಾರ. ಇನ್ನೂ ಹಡೆಯುತ್ತಿದ್ದ ನಮ್ಮ ಅತ್ತೆ. ಅದರಲ್ಲಿ ಮತ್ತೆ ಹೆರುವ ಭವಿಷ್ಯದ ನನ್ನ ಪತ್ನಿ. ಆಗ ರೇಷನ್ ಕಾಲ. ಅಕ್ಕಿಯೇ ಸಿಗಲಾರದ ಸ್ಥಿತಿ. ನಾನೋ ನಿರುದ್ಯೋಗಿ. ತಂದೆಯ ಮನಸ್ಸಿಗೆ ವಿರುದ್ಧವಾಗಿಯೇ ಹೈದ್ರಾಬಾದಿಗೆ ಬರುವ ನನಗೆ ಊರಿನಿಂದಲೂ ಸಹಾಯ ಬರುವಂತಿದ್ದಿಲ್ಲ. ನನ್ನ ಮೈಮೇಲೆ ಎರಡೇ ಅರಿವೆ. ನನ್ನ ಹೆಂಡತಿಯದು ಅದಕ್ಕಿಂತ ನಾಜೂಕು ಸ್ಥಿತಿ. ತಾಯಿಗೆ ತಂದ ಸೀರೆಗಳನ್ನೇನೋ ಮುದುಡಿದ ಮನಸಿನಿಂದ ಮಗಳು ಉಡುತ್ತಿದ್ದಳು. ಆದರೆ ನನ್ನ ಸ್ಥಿತಿ ಹಾಗಿರಲಿಲ್ಲ. ಮನೆಯವರೆಲ್ಲ ಕೆಂಪು ಜೋಳದ ರೊಟ್ಟಿ ತಿಂದು ನನಗಾಗಿ ಒಂದಿಷ್ಟು ಕೆಂಪು ಅಕ್ಕಿಯ ಅನ್ನ ಮಾಡಿಡುತ್ತಿದ್ದರು. ನನಗೆ ನಾಚಿಕೆಯೆನಿಸುತ್ತಿತ್ತು. ಹೆಣ್ಣು ಕೊಟ್ಟ ಮಾವ ನನ್ನನ್ನು ಓದಿಸುವ ಕರಾರನ್ನೇನೂ ಮಾಡಿರಲಿಲ್ಲ. ಆತನಿಗೇಕೆ ಈ ಕಷ್ಟ ? ಇದೆಲ್ಲ ನಮ್ಮ ತಂದೆ ಯಾಕೆ ಆಲೋಚಿಸುತ್ತಿಲ್ಲ ? ಎಂದು ಅನೇಕ ಸಲ ಸಂತಾಪವಾಗುತ್ತಿತ್ತು. ನನ್ನ ಅಸಹಾಯಕ ಸ್ಥಿತಿಗೆ ರೇಗುತ್ತಿತ್ತು. ಎಲ್ಲಿಯದೋ ಸಂಕಟ ಕೆಲವೊಮ್ಮೆ ನನ್ನ ಪತ್ನಿಯ ಮೇಲೆ ಎರಗುತ್ತಿತ್ತು. ಆಗ ನನ್ನ ಕೋಪ ತಾಪಗಳಿಗೆ ಅವಳ ಹೊರತು ಬೇರೆ ದಾರಿಯೆಲ್ಲಿ ? ನನ್ನನ್ನೇ ನಾನು ಬಯ್ದುಕೊಂಡದ್ದೆಷ್ಟು ಸಲವೋ. ಅವಳನ್ನೂ ಮಾವನನ್ನೂ ಬಯ್ದದ್ದು ಎಷ್ಟು ಸಲವೋ ? ಉದ್ಯೋಗವಿಲ್ಲದ ಬುದ್ಧಿಗೆ ಸ್ಥಿಮಿತವೆಲ್ಲಿ ? ಆದರೆ ಮಾವ ? ಶಾಂತಮೂರ್ತಿ. ಪತ್ನಿ ಸಹನೆ ತುಂಬಿದ ಕೊಡ.

ಈ ಮನಃಸ್ಥಿತಿಯಲ್ಲಿ ಅಲ್ಲಲ್ಲಿ ಕೆಲಸ ಹುಡುಕುತ್ತಿದ್ದೆ. 'ಪ್ರಜಾ' ಎಂಬ ಕನ್ನಡ ಪತ್ರಿಕೆಯ ಕಾರ್ಯಾಲಯದಲ್ಲಿ ಸಹಸಂಪಾದಕನೆಂದು ಕೆಲಸ ಸಿಕ್ಕಿತು. ತಿಂಗಳಿಗೆ ಮೂವತ್ತು ರೂಪಾಯಿ ಗೊತ್ತಾಗಿತ್ತು. ಆ ಪತ್ರಿಕೆಗೆ ಕೆಲವು ಲೇಖನಗಳನ್ನು ಬರೆದೆ ಮತ್ತು ಅನುವಾದಿಸಿದೆ. ಅದೆಲ್ಲ ಸರಿ. ಆದರೆ ಸಂಬಳವೇ ಇಲ್ಲ. ಸಂಪಾದಕರನ್ನು ಕಾಡಿ ಬೇಡಿ ಮೂರು ತಿಂಗಳು ದುಡಿದು ಇಪ್ಪತ್ತು ರೂಪಾಯಿ ವಸೂಲಿ ಮಾಡಿಕೊಂಡೆ. ಪಾಪ ! ಅವರಿಗೂ ತಾಪತ್ರಯವಿತ್ತೇನೊ !

ಆಮೇಲೆ ಈಗ ಪ್ರಸಿದ್ಧ ಕಾಲೇಜು ಆಗಿದ್ದು, ಆಗ ಇನ್ನೂ ಮಿಡ್ಲಸ್ಕೂಲ್ ಆಗಿದ್ದ ನೃಪತುಂಗ ಶಾಲೆಯಲ್ಲಿ ವೇತನವಿಲ್ಲದ ಶಿಕ್ಷಕನೆಂದು ಸೇರಿದೆ. ಹೈದ್ರಾಬಾದಿನಲ್ಲಿ ಕನ್ನಡ ಜನರಿಗೆ ಆಶ್ರಯಸ್ಥಾನದಂತಿತ್ತು ನೃಪತುಂಗ ಶಾಲೆ. ಬಿಜಾಪುರ ಜಿಲ್ಲೆಯ ಚಿಮ್ಮಲಗಿ ಭೀಮಾಚಾರ್ಯರೆಂಬ ಫೋಟೋಗ್ರಾಫರರು ಕನ್ನಡದ ಮೇಲಿನ ಪ್ರೀತಿಯಿಂದ ತಮ್ಮ ಮಗನ ಓದಿಗಾಗಿ ತಮ್ಮ ಖರ್ಚಿನಿಂದ ತಮ್ಮ ಮನೆಯಲ್ಲೇ ಆರಂಭಿಸಿದ್ದ ಶಾಲೆ ನಂತರ ಬೆಳೆಯುತ್ತ ಬಂದಿತ್ತು. ಚಿಮ್ಮಲಗಿಯವರೇ ಸ್ವಂತ ಖರ್ಚಿನಿಂದ ಹಲವು ವರ್ಷ ನಡೆಸಿದರು. ಪ್ರಾಥಮಿಕ ಹಂತ ತಲುಪಿದ ಮೇಲೆ

ಸರಕಾರದ ಅನುದಾನವೂ ಸಿಕ್ಕಿತ್ತು. ಆಗ ಅದೊಂದೇ ಕನ್ನಡ ಶಾಲೆ, ಚಿಮ್ಮಲಗಿಯವರೇ ಈ ಶಾಲೆಗೆ ಅನೇಕ ವರ್ಷ ಅಧ್ಯಕ್ಷರಾಗಿದ್ದರು. ಆಮೇಲೆ ಇತರ ಕನ್ನಡ ಮುಖಂಡರು ಒಳಗೆ ಸೇರಿದರು. ಕನ್ನಡಿಗರ ಬಲದಿಂದ ಶಾಲೆಯೇನೋ ಬೆಳೆಯುತ್ತಿತ್ತು. ಆದರೆ ಹೈದ್ರಾಬಾದಿನಲ್ಲಿ ಕನ್ನಡದ ಬೀಜ ನೆಟ್ಟು ಸಸಿಗೆ ನೀರೆರೆದ ಚಿಮ್ಮಲಗಿಯವರನ್ನು ನಮ್ಮ ರಾಜಕೀಯ ಮುಖಂಡರು ಸರಿಯಾಗಿ ನೋಡಿಕೊಳ್ಳಲಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಕಾರಣ ಮಹತ್ವದ್ದಲ್ಲ. ಚಿಮ್ಮಲಗಿಯವರು ವ್ಯಾಪಾರಿಗಳು. ಯಶಸ್ವೀ ವ್ಯಾಪಾರಿಗಳು. ಬಹಳ ಓದಿದವರಲ್ಲ. ಅವರು ಪುಢಾರಿಗಳ ಸರಿಜೋಡಿಯವರಲ್ಲವೆಂಬುದು ಪುಢಾರಿಗಳ ದೃಷ್ಟಿಯಾಗಿತ್ತು. ಆದರೆ ಚಿಮ್ಮಲಗಿ ದೊಡ್ಡ ಮನುಷ್ಯ. ಸಂಸ್ಥೆ ಬೆಳೆಯುವದು ಮುಖ್ಯವೆಂದು ತಾವೇ ಹಿಂಜರಿದರು.

ಹಲವು ವರ್ಷಗಳವರೆಗೆ ನಾಡಹಬ್ಬ, ಗಣೇಶೋತ್ಸವಗಳು ಸಹ ಚಿಮ್ಮಲಗಿಯವರ ಮನೆಯಲ್ಲೇ ನೆರವೇರುತ್ತಿದ್ದವು. ಅನಂತರ ನಾವೆಲ್ಲ ಯುವಕರು ಸಂಘ ಕಟ್ಟಿಕೊಂಡ ನಂತರ ಆ ಹಿರಿಯರ ಸಹಾಯದಿಂದಲೇ ಬೇರೆ ಕಡೆಗೆ ವ್ಯವಸ್ಥೆಗೊಳಿಸುತ್ತಿದ್ದೆವು. ಚಿಮ್ಮಲಗಿಯವರ ಮನೆಯಲ್ಲಿಯೂ ಇತರೆ ಕಡೆಗಳಲ್ಲಿಯೂ ಏರ್ಪಟ್ಟ ಅನೇಕ ಆಶುಭಾಷಣ ಸ್ಪರ್ಧೆ, ಪ್ರಬಂಧ ಸ್ಪರ್ಧೆಗಳಲ್ಲಿ ಅನೇಕ ವರ್ಷ ನನಗೆ ಪ್ರಥಮ ಬಹುಮಾನ ಬಂದವು. ನನ್ನ ಓದುವ ಚಟ ಹೆಚ್ಚಾಗಿ ಅಧ್ಯಯನದ ವಿಸ್ತಾರ ವೈವಿಧ್ಯವೂ ಹೆಚ್ಚತೊಡಗಿತ್ತು. ಈ ನಡುವೆ ರೇಡಿಯೋ ಪ್ರಸಾರಕ್ಕಾಗಿ ಚಿಕ್ಕ ಪ್ರಹಸನಗಳನ್ನು ಬರೆದು ತುಸು ಹಣ ಸಂಪಾದಿಸುತ್ತಿದ್ದೆ. ಕನ್ನಡ ನಾಟಕಗಳಲ್ಲಿಯೂ ಪಾತ್ರ ವಹಿಸುತ್ತಿದ್ದೆ.

ಒಂದೆರಡು ತಿಂಗಳು ದುಡಿದ ನಂತರ ನೃಪತುಂಗ ಶಾಲೆಯಲ್ಲಿ ಮೂವತ್ತು ರೂಪಾಯಿ ವೇತನದ ಕೆಲಸ ದೊರೆಯಿತು. ಮತ್ತೆ ಓದನ್ನು ಮುಂದುವರಿಸಬೇಕೆಂದು ಅಜಮೀರ್ ಬೋರ್ಡಿನ ಇಂಟರ್ ಪರೀಕ್ಷೆಗಾಗಿ ಅಭ್ಯಾಸ ಮಾಡಲು 'ರಸಾಲ್' ಎಂಬವರ ಕ್ಲಾಸ್‌ಗೆ ಸೇರಿದೆ. ಶಿಕ್ಷಕ ಕೆಲಸ ಮಾಡುತ್ತಲೇ ಇಲ್ಲಿ ಅಭ್ಯಾಸ ಮಾಡಬಹುದಾಗಿತ್ತು. ಆದರೆ ಇಲ್ಲಿ ಸಂಸ್ಕೃತ ಮತ್ತು ಲಾಜಿಕ್ (ತರ್ಕ) ಹೇಳುವವರಿರಲಿಲ್ಲ. ಹಿಂದೆ ನಾನು ಓದಿದ್ದ ಸಂಸ್ಕೃತ ಮತ್ತು ತರ್ಕಶಾಸ್ತ್ರ ನೆರವಿಗೆ ಬಂತು. ಅವನ್ನು ನಾನೇ ಮನೆಯಲ್ಲೇ ನೋಡಿಕೊಂಡೆ ಇತರ ವಿಷಯಗಳನ್ನು ಅಲ್ಲಿ ಹೇಳಿಕೊಟ್ಟರು. ಅದೇ ವರ್ಷ ಇಂದೂರಿಗೆ ಹೋಗಿ ಪರೀಕ್ಷೆ ಕೊಟ್ಟೆ. ನನ್ನ ಇನ್ನೊಬ್ಬ ಸ್ನೇಹಿತ ಜಿ. ರಾಮರಾಯನೂ ನನ್ನ ಜೊತೆಗೆ ಬಂದಿದ್ದ. ಆತ ಆಮೇಲೆ ನನ್ನ ಜೊತೆಗೆಯೇ ತಹಸಿಲ್ದಾರನೂ ಆದ. ಆದರೆ ಅಕಾಲಿಕವಾಗಿ ತೀರಿಕೊಂಡ. ಇಂಟರ್ ಪರೀಕ್ಷೆಯಲ್ಲಿಯೂ ಸಹ ಎರಡನೇ ದರ್ಜೆಯಲ್ಲಿ ಸಂಸ್ಕೃತದಲ್ಲಿ ವಿಶಿಷ್ಟ ಅಂಕಗಳೊಂದಿಗೆ ತೇರ್ಗಡೆಯಾದೆ. ನೃಪತುಂಗ ಶಾಲೆಯಲ್ಲಿ ನನಗೆ ಹದಿನೈದು

ರೂಪಾಯಿ ಸಂಬಳ ಹೆಚ್ಚಾಯಿತು. ಮಾವನ ಮೇಲೆ ಭಾರವೇಕೆಂದು ಬೇರೆ ಮನೆ ಮಾಡಿದೆ. ಈಗ ನಮ್ಮ ತಂದೆಯ ಧೋರಣೆ ಸ್ವಲ್ಪ ಬದಲಾದಂತೆ ಅನಿಸಿತು. ಪರೀಕ್ಷೆಯಲ್ಲಿಯ ಯಶಸ್ಸಿಗಾಗಿ ಮನಃಪೂರ್ವಕ ಅಭಿನಂದನೆ ಸಿಕ್ಕಿತು. ಅದರೊಂದಿಗೆ ನಮ್ಮ ತಾಯಿ, ತಮ್ಮ, ತಂದೆಯವರೂ ನನ್ನೊಂದಿಗೆ ಇರಲು ಹೈದ್ರಾಬಾದಿಗೆ ಬಂದಿಳಿದರು. ಈ ಪರೀಕ್ಷೆಯ ಫಲಿತಾಂಶ ಹೊರ ಬಂದಾಗ ನನಗೊಬ್ಬ ಮಗಳೂ ಜನಿಸಿದ್ದಳು, ಅವಳು ಗೀತಾ. ಅದು 1945ನೇ ವರ್ಷ.

ಹೈದ್ರಾಬಾದಿಗೆ ಬಂದ ನಮ್ಮ ತಂದೆ ಸ್ವಲ್ಪ ಸೌಮ್ಯರಾದಂತೆ ಕಂಡಿತು. ಮೆಟ್ರಿಕ್ ಪಾಸಾಗಿ ಊರಿಗೆ ಹೋದಾಗ ಇದ್ದ ಒಂದು ಪ್ಯಾಂಟನ್ನು ಹಾಕಿಕೊಳ್ಳಲು ಸಹ ನನ್ನನ್ನು ನಿರ್ಬಂಧಿಸಿದ್ದರು. ಸಿಟ್ಟಿಗೆದ್ದ ನಾನು ಅದನ್ನು ಹರಿದು ಹಾಕಲು ನಿಂತಿದ್ದೆ. ನನ್ನ ಪತ್ನಿಯೇ ಬಂದು ಕಸಿದಿದ್ದಳು. ಗಂಡನಿಗೆ ಪ್ಯಾಂಟೇ ಇಲ್ಲವಾದರೆ ಹೇಗೆ ಅನಿಸಿರಬೇಕು. ಅಂಥ ತಂದೆ ಈಗ ನಾನು ಪ್ಯಾಂಟು ಹಾಕುವುದನ್ನು ಸಹಿಸಿದ್ದರು, ಬಹುಶಃ ನನ್ನ ಗಳಿಕೆಯ ಪರಿಣಾಮವೋ ಏನೋ. ಹಾಗೂ ಅನ್ನುವಂತಿಲ್ಲ. ಈ ಬಗೆಯ ವಿತಂಡವಾದ ಆಗಾಗ ಮರುಕಳಿಸುತ್ತಿತ್ತು. ನಾನು ತಹಸೀಲ್ದಾರನಾದ ಮೇಲೆ ಸಹ ದೋತರ ಉಟ್ಟು ಗಂಧ ಅಕ್ಷತೆ ಅಂಗಾರ ಹಚ್ಚಿಕೊಂಡು ಕಛೇರಿಗೆ ಯಾಕೆ ಹೋಗಬಾರದೆಂದು ಒಂದು ದಿನ ತಕರಾರು ಬಂದಿತ್ತು. ಆ ಹೊತ್ತಿಗಾಗಲೇ ನಾನು ಬಂದೂಕು ಹಿಡಿದು ಜಿಂಕೆ, ಕಾಡುಹಂದಿ ಬೇಟೆಯಾಡುತ್ತಿದ್ದೆ. "ನನಗೆ ಅಂಥದರಲ್ಲಿ ಆಸಕ್ತಿಯಿಲ್ಲ–ನಿಮ್ಮ ಮಟ್ಟಿಗೆ ಎಲ್ಲ ಅನುಕೂಲವಿದೆ. ಬೇಕಾದ ಹಾಗೆ ಇರಿ" ಎಂದು ಹೇಳಬೇಕಾಯಿತು. ವಿಪರ್ಯಾಸವೆಂದರೆ ನಾ ಕೊಂದ ಜಿಂಕೆಗಳ ಚರ್ಮಗಳನ್ನೆಲ್ಲ ತಂದೆ ಬ್ರಾಹ್ಮಣರಿಗೆ ದಾನ ಮಾಡಿ ಧನ್ಯರಾಗುತ್ತಿದ್ದರು. ಹಾಗೆಯೇ ನಾನು ಮಾಂಸಾಹಾರಿಯೆಂಬ ಪ್ರಚಾರವೂ ಆಗಿತ್ತು. ಆದರೆ ನಾನು ಮಾಂಸಾಹಾರಿಯಲ್ಲ. ಷೋಕಿಗಾಗಿ ಬೇಟೆಯಾಡುತ್ತಿದ್ದೆ ಕೆಲಕಾಲ.

## ಗ್ರಾಜುಯೇಟ್–ಸತ್ಯಾಗ್ರಹಿ

ಬಿ.ಎ. ಎಲ್ಲಿ ಹೇಗೆ ಅಭ್ಯಾಸ ಮಾಡಬೇಕೆಂಬ ಆಲೋಚನೆಯಲ್ಲಿಯೇ ಒಂದು ವರ್ಷ ಕಳೆದುಹೋಯಿತು. ಖಾಸಗಿಯಾಗಿ ಬಿ.ಎ. ಓದಲು ಸೌಲಭ್ಯವಿರಲಿಲ್ಲ. ಶಿಕ್ಷಕ ಕೆಲಸ ಬಿಟ್ಟರೆ ಮತ್ತೆ ಮಾವನನ್ನೇ ಆಶ್ರಯಿಸಬೇಕಾಗಿತ್ತು. ಹಾಗೆ ನೋಡಿದರೆ ನೆಪಕ್ಕೆ ನನ್ನದು ಬೇರೆ ಮನೆ. ಹಬ್ಬ ಹರಿದಿನ, ಬೆಳಿಗ್ಗೆ ತಪ್ಪಿದರೆ ಸಾಯಂಕಾಲ ಅವರ ಮನೆಯಲ್ಲಿಯೇ ಊಟ ತಿಂಡಿಗಳಾಗುತ್ತಿದ್ದವು. ಆದರೂ ಸಂಪೂರ್ಣ ಅವರ ಮೇಲೆ ಭಾರ ಹಾಕಲು ಸಂಕೋಚವೆನಿಸುತ್ತಿತ್ತು. ಬರುತ್ತಿದ್ದ ನಲವತ್ತೈದು ರೂಪಾಯಿ ಸಂಬಳದಲ್ಲಿ ಉಳಿತಾಯವೆಂಥದು ? ಅದೂ ತಂದೆ, ತಾಯಿ, ತಮ್ಮ ನನ್ನ ಹತ್ತಿರವೇ ಇದ್ದಾಗ. ಅವರು ಹೋದರೆಂದರೆ ಬಾಣಂತಿತನ ಮುಗಿಸಿದ ಪತ್ನಿ

ಬಂದಿದ್ದಳು. ಸಹಜ ವಿದ್ಯಾರ್ಥಿಯಂತೆ ಕಾಲೇಜು ಸೇರದೆ ನಾನು ಬಿ.ಎ. ಆಗು ವಂತಿರಲಿಲ್ಲ.

ಏನೋ ತಂದೆಯನ್ನೊಮ್ಮೆ ಸಹಾಯಕ್ಕಾಗಿ ಕೇಳಿ ನೋಡೋಣವೆನ್ನಿಸಿತು, ಕೇಳಿದೆ. ಹಾಸ್ಟಲ್ ಖರ್ಚು ಆಗ ತಿಂಗಳಿಗೆ ನಲವತ್ತು ರೂಪಾಯಿ. ಹತ್ತು ತಿಂಗ ಳಿಗೆ ನಾಲ್ಕು ನೂರು. ಇತರ ಖರ್ಚು ನಾನೇ ನೋಡಿಕೊಳ್ಳುತ್ತೇನೆ ಎಂದು ತಿಳಿಸಿದೆ. ತಂದೆ ಸುದೈವಕ್ಕೆ ಒಪ್ಪಿದರು. ಆದರೆ ಬೀಗರ ಮೇಲೆ ಭಾರ ಬೇಡವೆಂದು ಹೇಳಿ, ಸೀತೆಯನ್ನೂ ಮಗುವನ್ನೂ ಕನಕಗಿರಿಯಲ್ಲಿ ಬಿಡಲು ಸೂಚಿಸಿದರು. ಒಂದು ರೀತಿ ಯಲ್ಲಿ ಅದು ಸೂಕ್ತವೇ ಆಗಿತ್ತು. ಅಂತೂ ಹೆಂಡತಿ ಮಗಳನ್ನು ಕನಕಗಿರಿಯಲ್ಲಿ ಬಿಟ್ಟು ಬಂದು, ಶಿಕ್ಷಕ ವೃತ್ತಿ ತೊರೆದು, ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಬಿ.ಎ. ವರ್ಗಕ್ಕೆ ಸೇರಿದೆ. ಹಾಸ್ಟಲ್‌ನಲ್ಲಿಯೂ ವ್ಯವಸ್ಥೆ ಮಾಡಿಕೊಂಡೆ. ಇಂಗ್ಲೀಷ್ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಗಳು ನನ್ನ ಪಠ್ಯ ವಿಷಯಗಳಾದವು. ನೀತಿ ಪಾಠ ಗಳ ಪತ್ರಿಕೆಯನ್ನು ಉರ್ದುವಿನಲ್ಲಿ ಬರೆಯಬೇಕಾಗುತ್ತಿತ್ತು. ಪ್ರೊ. ಡಿ. ಕೆ. ಭೀಮ ಸೇನರಾಯರೂ ಹಾಗೂ ನಮ್ಮ ಮಾವ ಪಟ್ವಾರಿಯವರೂ ಕನ್ನಡ ಗುರುಗಳಾದರು. ಆಗ ರಾಘವೇಂದ್ರ ಇಟಗಿ ನನ್ನ ಸಹಪಾಠಿ. ಬಷೀರ್ ಅಹಮ್ಮದನೂ ಕನ್ನಡ-ಸಂಸ್ಕೃ ತದ ವಿದ್ಯಾರ್ಥಿ. ಭೀಮಸೇನರಾಯರ ಪಾಠಗಳಲ್ಲಿ ಗಾಂಭೀರ್ಯ ಬಹಳ. ಸೀರೆಯ ಸೆರಗು ಬರುವ ಪುಟಗಳನ್ನೇ ಹಾರಿಸಿ ಬಿಡುತ್ತಿದ್ದರು, ಪಟ್ವಾರಿಯವರಿಗೆ ಅಂಥ ಸಂಕೋಚವಿರಲಿಲ್ಲ. ಕವಿಯ 'ಸಂಚಾರಿಭಾವ'ಗಳ ಸವಿಯುಣಿಸುತ್ತಿದ್ದರು.

ಇಂಗ್ಲೀಷ್ ಪಾಠಗಳಿಗೆ ಸುಪ್ರಸಿದ್ಧ ಷೇಕ್ಸಪಿಯರ್ ವಿದ್ವಾಂಸರಾಗಿದ್ದ ಪ್ರೊ. ವೀರಭದ್ರುಡು ಹಾಗೂ ಪ್ರೊ. ದೊರೆಸ್ವಾಮಿಯವರೇ ಪ್ರಮುಖರಾಗಿದ್ದರು. ಪ್ರೊ. ಕೆ.ಎನ್. ಆಚಾರ್ ಒಳ್ಳೆಯ ನಟ. ನಾನೂ ಅವರೂ ಸೇರಿ 'ಅಶ್ವತ್ಥಾಮನ್' ನಾಟಕ ಭಾಗದ ಬಾನುಲಿ ರೂಪಕವನ್ನು ಬಿತ್ತರಿಸಿದ್ದೆವು.

ಇದೇ ದಿನಗಳಲ್ಲಿ ಡಾ. ವಿನಾಯಕ ಕೃಷ್ಣ ಗೋಕಾಕರು ಉಸ್ಮಾನಿಯಾ ವಿಶ್ವ ವಿದ್ಯಾಲಯಕ್ಕೆ ಇಂಗ್ಲೀಷ್ ಪ್ರಾಧ್ಯಾಪಕರಾಗಿ ಬಂದಿದ್ದರು. ಅವರು ಬರುವ ಮುಂಚೆಯೇ ನಾನೂ, ಇಟಗಿ, ಕಠಾವಿ, ಕಾಗಲ್ ಅಲ್ಪಸ್ವಲ್ಪ ಬರೆಯುತ್ತಿದ್ದೆವು. ಆಗಲೇ ನನ್ನ ಪ್ರಥಮ ಕಥೆ 'ಕತೆಗಾರ್ತಿ' ಅದೇ ಹೆಸರಿನ ಪುಸ್ತಕದಲ್ಲಿ ಗದ್ವಾಲಿನ ಭಾಗ್ಯೋದಯ ಗ್ರಂಥಮಾಲೆಯಲ್ಲಿ ಪ್ರಕಟವಾಗಿತ್ತು. 'ಕುಮಾರ ವ್ಯಾಸ' ಎಂಬ ಗದ್ಯಪದ್ಯಾತ್ಮಕ ರೂಪಕವನ್ನೂ ಬರೆದಿದ್ದೆ. ಆದರೂ ಸೃಜನಶೀಲತೆಗೆ ನಮ್ಮ ಅಧ್ಯಾಪಕರಿಂದ ಉತ್ತೇಜನವಿಲ್ಲವೆಂಬ ಕೊರಗು ಯಾಕೊ ನಮ್ಮಲ್ಲಿ ಇತ್ತು. ನಮ್ಮ ಇಬ್ಬರೂ ಅಧ್ಯಾಪಕರಲ್ಲಿ ಭೀಮಸೇನರಾಯರು ವಿದ್ವಾಂಸ ವೈಯಾಕರಣಿಗಳು. ಕುವೆಂಪು ಅವರ ಸಹಪಾಠಿಗಳು, ಹೊರಗೆಲ್ಲ ಅವರಿಗೆ ತುಂಬ ಗೌರವವಿತ್ತು. ಆದರೆ ಅವರು ಸೃಜನಶೀಲ ಸಾಹಿತಿಗಳಾಗಿರಲಿಲ್ಲ. ಪಟ್ವಾರಿಯವರದು ಸರಳ ಪಾಠ ಮಾಡಿ

ಯಶಸ್ವೀ ಪ್ರಾಧ್ಯಾಪಕರೆನ್ನಿಸಿಕೊಳ್ಳುವಷ್ಟು ಶಕ್ತಿ. ಮಾನ್ವಿ ನರಸಿಂಗರಾಯರು ಪ್ರತಿಭಾಶಾಲಿ. ಬಿ. ಎಂ. ಶ್ರೀಯುವರ ಮೆಚ್ಚುಗೆ ಪಡೆದು, ಚಿನ್ನದ ಪದಕ ಗೆದ್ದ ಮೈಸೂರು ಎಂ. ಎ. ಕ್ರಿಯಾಶೀಲ ಮನುಷ್ಯ. ಸೃಜನಶೀಲ ಸಾಹಿತ್ಯ ರಚನೆ, ಪ್ರಚೋದನೆ ಎಲ್ಲ ಸಾಧ್ಯವಿತ್ತು. ಆದರೆ ಆರಂಭದಿಂದಲೇ ಅವರ ಕ್ಷೇತ್ರ ಬೇರೆಯಾಗಿ ಸಾಹಿತ್ಯೇತರ ಮತ್ತು ಶಿಕ್ಷಣೇತರ ವಿಷಯಗಳಲ್ಲಿ ಅವರ ಶಕ್ತಿ ಕಳೆದುಹೋಯಿತು. ಹೀಗಾಗಿ ಪ್ರೊ. ಗೋಕಾಕರು ಹೈದ್ರಾಬಾದಿಗೆ ಬಂದಾಗ ಲೇಖಕರಾಗ ಬಯಸುವ ಕಿರಿಯರಿಗೆ ಒಂದು ಆಶಾಕಿರಣ ಮೂಡಿತು. ಅವರ ಸುತ್ತ ನಾವು ಕೆಲವು ಮಿತ್ರರು ಸೇರಿದೆವು. 'ಜಿಜ್ಞಾಸುಕೂಟ'ವೆಂದು ಅವರೇ ಕರೆದ ಕೂಟವಾಯಿತು. ಪದೇ ಪದೇ ಅವರಲ್ಲಿ ಊಟವಾಯಿತು, ಚರ್ಚೆಗಳಾದವು, ಅವರ ಅಧ್ಯಯನದ ಎತ್ತರ ಬಿತ್ತರಗಳ ಪರಿಚಯ, ಲಾಭವಾಗತೊಡಗಿತು. ಕೃತಿರಚನೆಗೆ ಚಾಲನೆ ಸಿಕ್ಕಿತು. ಅವರೂ ಬರೆದರು, 'ಹೊಸಗನ್ನಡಕಾವ್ಯದ ಗೊತ್ತುಗುರಿಗಳು' ಗೋಕಾಕರ ಈ ಗ್ರಂಥ ಆಗ ನಡೆದ ಚರ್ಚೆ, ವಿವೇಚನೆಗಳ ಫಲ. ನಾವೇ ಅದನ್ನು ಪ್ರಕಟಿಸಿದೆವು. ಅವರ 'ಯುಗಾಂತರ' ನಾಟಕ ರಂಗದ ಮೇಲೆ ತರಬೇಕೆಂದಾಯಿತು. ಅದರಲ್ಲಿ ನಾನು 'ಮೃಣಾಲಿನಿ' ಅವರು 'ನಾಯಕ' ಪಾತ್ರದಲ್ಲಿ. ಈ ಸುಮಾರಿಗೆ ಕೊಪ್ಪಳ ಗೆಳೆಯರ ಗುಂಪು ಸಹ ಹೈದ್ರಾಬಾದಿನ ಕನ್ನಡ ಚಟುವಟಿಕೆಗಳಲ್ಲಿ ಚುರುಕಾಗಿತ್ತು.

ಇದೇ ಸಮಯದಲ್ಲಿ ಗಡಕರಿಯ 'ಭಾವಬಂಧನ' ಎಂಬ ಮರಾಠಿ ನಾಟಕದ ಪ್ರದರ್ಶನ ವೈ.ಎಂ.ಸಿ.ಎ ದಲ್ಲಿ ಏರ್ಪಟ್ಟಿತು. ಅದರಲ್ಲಿ ಕನ್ನಡ ಭಾಷೆಯ ಅಣಕು. ದಂಪತಿಗಳ ಸಂಭಾಷಣೆಯಲ್ಲಿ ಬರುವದನ್ನು ತಿಳಿದು ನಾವು ಮೂರು ನಾಲ್ಕು ಜನ ವಿದ್ಯಾರ್ಥಿಗಳು ರಾತ್ರಿಯೆಲ್ಲ ಕೈಬರಹದ ಪ್ರತಿಭಟನಾ ಪತ್ರಿಕೆಗಳನ್ನು ಕನ್ನಡಿಗರ ಮನೆಗಳಿಗೆ ಹಂಚಿದೆವು. ಮರುದಿನ ದೊಡ್ಡ ಸಂಖ್ಯೆಯಲ್ಲಿ ಸೇರಿದ ಕನ್ನಡ ಜನಸ್ತೋಮಕ್ಕೆ ಹೆದರಿ, ವಿಡಂಬನದ ಭಾಗವನ್ನು ತೆಗೆದುಹಾಕಲು ನಾಟಕದ ವ್ಯವಸ್ಥಾಪಕರು ಒಪ್ಪಿ ನಮ್ಮಲ್ಲಿ ಕೆಲವರನ್ನು ವೀಕ್ಷಣೆಗೆಂದು ಒಳಗೆ ಬಿಟ್ಟರು.

ಇಷ್ಟೆಲ್ಲ ಕೋಲಾಹಲ ಒಂದೇ ವರ್ಷ. ಬಿ.ಎ. ಮೊದಲ ವರ್ಷ ಮುಗಿಯಿತು. ಕಾರಣಾಂತರದಿಂದ ಪ್ರೊ. ಗೋಕಾಕರೂ ವೀಸ್ ನಗರ ಕಾಲೇಜಿಗೆ ತೆರಳಿದರು. ಅವರ ಬೀಳ್ಕೊಡುಗೆಯಲ್ಲಿ ನಾವೆಲ್ಲ ಹುಡುಗರು ನಮ್ಮ ದುಗುಡವನ್ನು ತೋಡಿಕೊಂಡೆವು. ಏನೇ ಇದ್ದರೂ ಗೋಕಾಕರಿಂದ ಕೆಲವರಿಗಾದರೂ ಸ್ಫೂರ್ತಿ ದೊರೆತದ್ದು ನಿಜ.

ಬಿ.ಎ. ಕೊನೆಯ ವರ್ಷದ ಒಂದೆರಡು ತಿಂಗಳೊಳಗಾಗಿ ಭಾರತದಲ್ಲಿ ಆಗಲೇ ಎದ್ದಿದ್ದ ರಾಜಕೀಯ ಬಿರುಗಾಳಿ ಹೈದ್ರಾಬಾದಿಗೂ ವ್ಯಾಪಿಸಿತು. ಭಾರತಕ್ಕೆ ದೊರೆತ ಸ್ವಾತಂತ್ರ್ಯ ಹೈದ್ರಾಬಾದಿನವರಿಗಿಲ್ಲವೆಂದು ಖಚಿತವಾಗುವ ಚಿಹ್ನೆಗಳು ತಲೆದೋರಿದವು. ಶಾಲೆಕಾಲೇಜುಗಳು ನಡೆಯದಾದವು. ವಿದ್ಯಾರ್ಥಿಗಳು ಬೀದಿಗಿಳಿಯತೊಡಗಿದರು.

ರಾಜಕೀಯ ನೇತಾರರ ದಸ್ತಗಿರಿ ಬಿಡುಗಡೆ, ಮತ್ತೆ ದಸ್ತಗಿರಿ ನಡೆದವು. ಹಿಂದೊಮ್ಮೆ ನಡೆದ 'ವಂದೇಮಾತರಂ' ಚಳುವಳಿಯಲ್ಲಿ ನಾವು ಭಾಗವಹಿಸಿರಲಿಲ್ಲವಾದರೂ ಅದರ ಸ್ಫೂರ್ತಿಯಿಂದ ಈಗ ನಾವೆಲ್ಲ ಕಾರ್ಯಪ್ರವೃತ್ತರಾಗಿದ್ದೆವು. ಹಾಸ್ಟಲ್‌ಗಳಲ್ಲಿ ಗುಂಪು ಸಭೆಗಳನ್ನು ನಡೆಸುವದು, ಸತ್ಯಾಗ್ರಹ ಸಂಘಟನೆ, ಜನಾಭಿಪ್ರಾಯ ನಿರ್ಮಾಣ ಇಂಥ ಕಾರ್ಯಗಳಲ್ಲಿ ನಾವೀಗ ಧುಮುಕಬೇಕಾಯಿತು. ನಮ್ಮ ನಾಯಕರನ್ನು ದಸ್ತಗಿರಿ ಮಾಡಿದಾಗಲೆಲ್ಲ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಬೃಹತ್ ಮೆರವಣಿಗೆಗಳನ್ನು ಹೊರಡಿಸಿ, ಲಾಠಿ ಪೆಟ್ಟು ತಿಂದು, ಕಾರಾಗೃಹದಲ್ಲಿ ಕೂಡುಹಾಕಿದಾಗ ನರಳಿ, ಹೊರಬಿಟ್ಟ ಕೂಡಲೇ ಮತ್ತೆ ಅದೇ ಕೆಲಸ ಮಾಡುತ್ತಿದ್ದೆವು. ವಿದ್ಯಾರ್ಥಿ ಕ್ರಿಯಾಸಮಿತಿಯಲ್ಲಿ ನಾನೂ ಇದ್ದೆ. ಆ ಮುಂದೆ ನಾನು ಭಾಗವಹಿಸಿದ ಭೂಗತ ಚಟುವಟಿಕೆ, ಪ್ರಚಾರ, ಧನಸಂಗ್ರಹ, ರಜಾಕಾರರೊಂದಿಗೆ ನಡೆಸಿದ ಸಶಸ್ತ್ರ ಹೋರಾಟ, ವಿಧ್ವಂಸಕ ಕಾರ್ಯಗಳು, ಆ ಸಮಯದಲ್ಲಿ ಮನೆಯವರಿಗೆ ಆದ ಕಿರುಕುಳ, ಅಜ್ಞಾತ ಜನರಿಂದ ದೊರೆತ ನೆರವು. ಅಂತಿಮವಾಗಿ ನಡೆದ ಪೋಲೀಸ್ ಕಾರ್ಯಾಚರಣೆ, ಪ್ರಜಾಶಕ್ತಿಯ ಜಯ–ಇವನ್ನೆಲ್ಲ ಇನ್ನೊಂದೆಡೆಗೆ ('ಹೋರಾಟಗಾರ' ಎಂಬ ಲೇಖನದಲ್ಲಿ) ವಿವರಿಸಲಾಗಿದೆ. ಇದೆಲ್ಲ ನನಗೆ ಹೋರಾಟದ ಕಾಲ. ವಿಶೇಷವಾಗಿ ನನ್ನ ಪತ್ನಿಗೆ ಒಂದು ಬಗೆಯ ತಪಸ್ಸಿನ ಕಾಲ. ನನ್ನ ಹಿನ್ನೆಲೆಗೆ ಅದು ದೈತ್ಯ ಸಾಹಸವೇ ಆಗಿತ್ತು.

ಪೋಲೀಸ್ ಕಾರ್ಯಾಚರಣೆಗಾಗಿ ಬಂದ ಭಾರತ ಸರ್ಕಾರದ ಸೇನೆಯೊಂದಿಗೆ ಗಂಗಾವತಿಗೆ ಹೋದ ನಾನು ಆ ಸಾಯಂಕಾಲ ಮಾತ್ರ ಅಲ್ಲೊಂದು ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡಿ ಎಲ್ಲರನ್ನೂ ಅಭಿವಂದಿಸಿದೆ. ಬುರ್ಲಿಬಿಂದು ಮಾಧವಾಚಾರ್ಯರು ಅಂದು ನಮ್ಮೊಂದಿಗಿದ್ದರು. ಮರುದಿನವೇ ಕನಕಗಿರಿಗೆ ಹೋಗಿ ಜನರ ವಿಜಯೋತ್ಸಾಹದಲ್ಲಿ ಭಾಗಿಯಾದೆ. ಅವರು ಅಭಿಮಾನದಿಂದ ನೀಡಿದ ಸ್ವಾಗತವನ್ನು ಸ್ವೀಕರಿಸಿದೆ. ಸುತ್ತಲಿನ ಹಳ್ಳಿಗಳಿಗೆ ಹೋಗಲು ಸಮಯವಿರಲಿಲ್ಲ. ಕಾಲೇಜು ತೊರೆದಿದ್ದ ಸಾವಿರಾರು ವಿದ್ಯಾರ್ಥಿಗಳಿಗಾಗಿ ವಿಶೇಷ ಪರೀಕ್ಷೆಯ ದಿನಾಂಕ ಪ್ರಕಟವಾಗಿತ್ತು ಒಂದೇ ತಿಂಗಳ ಅವಧಿಯಲ್ಲಿ ನಾನು ಬಿ.ಎ. ಅಂತಿಮ ಪರೀಕ್ಷೆ ಕೊಡಬೇಕಾಗಿತ್ತು. ಹೈದ್ರಾಬಾದಿಗೆ ಧಾವಿಸಿದೆ. ಹಗಲೂ ರಾತ್ರಿ ಓದಿದೆ. ಪರೀಕ್ಷೆಯಾಯಿತು. ವಿಶ್ವವಿದ್ಯಾಲಯದಲ್ಲಿಯೇ ಪ್ರಥಮ ರ್‍ಯಾಂಕ್ ಪಡೆದು ಬಿ.ಎ.ದಲ್ಲಿ ಉತ್ತೀರ್ಣನಾಗಿದ್ದೆ. ಆಗ 1948. ಏಳು ವರ್ಷಗಳ ಹಿಂದೆ ಕೇವಲ ಒಂದಿಷ್ಟು ಸಂಸ್ಕೃತ ಓದಿಕೊಂಡಿದ್ದ ಈ ವೈದಿಕ ಪುರೋಹಿತ ಈಗ ಗ್ರಾಜುಯೇಟ್ ಆಗಿದ್ದ. ನಮ್ಮ ತಂದೆಗೆ ಎಲ್ಲಿಲ್ಲದ ಆನಂದವಾಗಿತ್ತು. ಶ್ಲೋಕದಲ್ಲಿಯೇ ಪತ್ರ ಬರೆದು ಆಶೀರ್ವದಿಸಿದ್ದರು. ಎಷ್ಟೆಂದರೂ ಆತ ವಿದ್ಯಾಪಕ್ಷಪಾತಿಯಲ್ಲವೆ? ಊರಿನಲ್ಲೆಲ್ಲ ಮಗನ ಹೆಗ್ಗಳಿಕೆ ಹೇಳಿದ್ದೂ ಹೇಳಿದ್ದೇ. ಯಾವುದೋ ಸಿಟ್ಟಿನಲ್ಲಿ ನನ್ನನ್ನು ಬಯ್ದಾಡಿದ್ದನ್ನು ಕೇಳಿದ್ದ ಜನರು ಈಗ

ನನ್ನನ್ನು ಈ ಪರಿ ಹೊಗಳುವ ತಂದೆಯನ್ನು ನೋಡಿ ತಾವೇ ಪೆಚ್ಚಾಗಿರಬೇಕು. ಆದರೆ ಇದಕ್ಕಿಂತ ಎಷ್ಟೋ ಹೆಚ್ಚಿನ ಆನಂದ ನಮ್ಮ ಮಾವ ರಾಮಚಂದ್ರರಾವ್ ಮತ್ತು ಅತ್ತೆ ಲಕ್ಷ್ಮಿಬಾಯಿಗೆ ಆಗಿತ್ತು, ಮಗಳ ಬಾಳುವೆಗೆ ನೆಲೆ ಸಿಕ್ಕಿತೆಂದು, ಅವರು ಇಷ್ಟು ವರ್ಷ ನನಗಾಗಿ ಪಟ್ಟಶ್ರಮ ಫಲಿಸಿತೆಂದು. ನನ್ನ ಪತ್ನಿಗೋ ? ತಾನೇ ಬಿ.ಎ. ಪಾಸಾದಷ್ಟು ಸಂತೋಷವಾಗಿತ್ತು.

## ಕಾನ್ವೊಕೇಷನ್ – ಕವಲುದಾರಿ

ನಮ್ಮ ಪದವೀದಾನ ಸಮಾರಂಭಕ್ಕೆ ಮುಂಚೆ ಒಂದು ಚಿಕ್ಕ ಚಳುವಳಿ ಮಾಡಬೇಕಾಯಿತು. ವಿಶ್ವವಿದ್ಯಾಲಯದಲ್ಲಿ ಓದುವಾಗ ಕರಿಯ ಷೇರವಾನಿ ಸಮವಸ್ತ್ರವಾಗಿತ್ತು. 'ದಸ್ತಾರ್' ಅಂದರೆ ನಿಜಾಮ ಹಾಕುತ್ತಿದ್ದ ದರ್ಬಾರೀ ಟೊಪ್ಪಿಗೆಯಂಥದು. ಅದನ್ನೂ ಮತ್ತು ಕರಿಯ ಷೇರವಾನಿಯನ್ನೂ ಸ್ನಾತಕರು ಪದವೀದಾನ ಸಮಾರಂಭದಲ್ಲಿ ಧರಿಸುವದು ಕಡ್ಡಾಯವಾಗಿತ್ತು. ಆದರೆ ಬದಲಾದ ರಾಜಕೀಯ ವಾತಾವರಣದಲ್ಲಿ ನಾವೆಲ್ಲ ತಲೆಗೆ ಖಾದೀ ಟೋಪಿ ಹಾಕಿಕೊಂಡು ಬರುವೆವೆಂದೂ, ನಿಜಾಮ್‌ಶಾಹಿಯ ಚಿಹ್ನೆಯಾದ 'ದಸ್ತಾರ್' ಧರಿಸುವದಿಲ್ಲವೆಂದೂ ಅಧಿಕಾರಿಗಳಿಗೆ ತಿಳಿಸಿದೆವು. ಆಗಿದ್ದ ನಿಯಮದಂತೆ ಪೋಷಾಕು ಧರಿಸದವರಿಗೆ ಸಮಾರಂಭದಲ್ಲಿ ಪ್ರವೇಶವಿಲ್ಲವೆಂದು ಅಧಿಕಾರಿಗಳು ಘೋಷಿಸಿದರು. ನಾವೆಲ್ಲ ಸಮಾರಂಭವನ್ನೇ ಬಹಿಷ್ಕರಿಸಿ — ಮುಖ್ಯ ಅತಿಥಿಗಳಾಗಿ ಬರಲಿದ್ದ ಸರ್ದಾರ್ ಪಟೇಲರ ಎದುರಿಗೆ ಧರಣಿ ಹೂಡುವದಾಗಿ ಹೇಳಿದೆವು. ಸರ್ದಾರ್ ಪಟೇಲರೆಂದರೆ ನಿಜಾಮನೂ, ಆತನ ಹಸ್ತಕರೂ ತುಂಬ ಹೆದರುತ್ತಿದ್ದ ಕಾಲವದು. ಪೋಲೀಸ್ ಕಾರ್ಯಾಚರಣೆಯ ಕರ್ತಾರ ಅವರೇ ಆಗಿದ್ದರಲ್ಲವೆ ? ಪರಿಸ್ಥಿತಿ ವಿಕೋಪಕ್ಕೆ ಹೋಗಬಹುದೆಂದು ಗಮನಿಸಿದ ಆಗಿನ ಉಪಕುಲಪತಿ ನವಾಬ ಅಲಿಯಾವರಜಂಗ್ ಅವರು ಚಾಣಾಕ್ಷತನ ತೋರಿಸಿದರು. ಗಲಾಟೆ ಮಾಡುತ್ತಿದ್ದವರಲ್ಲಿ ನನ್ನನ್ನೂ ಸೇರಿದಂತೆ ನಾಲ್ಕಾರು ಜನರನ್ನು ಕರೆಸಿಕೊಂಡು ವಿಚಾರಿಸಿದರು. ಅವರೆದುರಿಗೂ ಸ್ವಲ್ಪ ಚರ್ಚೆಯಾದ ನಂತರ ಖಾದೀ (ಗಾಂಧೀ) ಟೊಪ್ಪಿಗೆಗೆ ಅನುಮತಿ ಸಿಕ್ಕಿತು. ವಿಶ್ವವಿದ್ಯಾಲಯದ ಚರಿತ್ರೆಯಲ್ಲಿ ಮೊದಲ ಸಲ ಖಾದೀ ಟೋಪಿ ಹಾಕಿದ್ದ ನಾವೆಲ್ಲ ಸರ್ದಾರ್ ಪಟೇಲರ ಕೈಯಿಂದ ಡಿಗ್ರಿ ಪಡೆದೆವು.

ಬಿ.ಎ.ದಲ್ಲಿ ಕನ್ನಡ, ಸಂಸ್ಕೃತಗಳಲ್ಲಿ ಅತಿ ಹೆಚ್ಚಿನ ಅಂಕಗಳನ್ನು ನಾನು ಪಡೆದಿದ್ದೆ. ಶಿಷ್ಯವೇತನ ಸಿಗುತ್ತಿತ್ತು. ಇಂಗ್ಲೀಷ್‌ನಲ್ಲೂ ಒಳ್ಳೆಯ ಅಂಕಗಳಿದ್ದ ಕಾರಣ ಇಂಗ್ಲೀಷ್ ಎಂ. ಎ. ಓದಿದರೆ ಶಿಷ್ಯವೇತನ ಕೊಡಿಸುವದಾಗಿ ಪ್ರೊ. ದೊರೆಸ್ವಾಮಿಯವರೂ ಸೂಚಿಸಿದ್ದರು.

ಈ ನಡುವೆ ಸ್ಟೇಟ್ ಕಾಂಗ್ರೆಸ್ ಇಬ್ಭಾಗವಾಗಿತ್ತು. ದೇಸಾಯಿ ಕಾಂಗ್ರೆಸ್, ಗೋಸಾಯಿ (ಸ್ವಾಮಿ ರಾಮಾನಂದ ತೀರ್ಥ) ಕಾಂಗ್ರೆಸ್ ಎಂದು. ದೇಸಾಯಿ ಕಾಂಗ್ರೆಸ್ಸಿನ ಜನಾರ್ದನ ರಾವ್ ದೇಸಾಯಿಯವರು ನನ್ನನ್ನು ಕರೆಯಿಸಿ ಪಾರ್ಟಿಯ ಪೂರ್ಣಾವಧಿ ಕಾರ್ಯಕರ್ತನಾಗಬೇಕೆಂದು ಸೂಚಿಸಿದರು. ಆದರೆ ಸಂಸಾರ ನಿರ್ವಹಣೆಗೆ ಒಂದು ನೂರು ರೂಪಾಯಿ ಸಹ ಮಾಸಾಶನ ಕೊಡಿಸಲು ಅವರು ಒಪ್ಪಲಿಲ್ಲ. ನಮ್ಮ ಆರ್ಥಿಕ ಸ್ಥಿತಿ ಅವರಿಗೆ ತಿಳಿದಿತ್ತು. ರಾಜಕೀಯ ಭವಿಷ್ಯದ ಭರವಸೆಯನ್ನೂ ಅವರು ನೀಡಲಿಲ್ಲ. ಆಗ ಶ್ರೀ ಬಿ. ರಾಮಕೃಷ್ಣರಾವ್, ಡಾ. ಚೆನ್ನಾರೆಡ್ಡಿ, ಅವರೆಲ್ಲ ಅಲ್ಲಿದ್ದರು. "ಶಾಸನ ಸಭೆಗೆ ಚುನಾವಣೆ ನಡೆದರೆ ನನ್ನಂಥ ರ್‍ಯಾಂಕ್ ಪಡೆದ ಗ್ರ್ಯಾಜುಯೇಟ್ ನೀವು ಆರಿಸಿದ ಅನಕ್ಷರಸ್ಥ ಗಾಂಪನಿಗಾಗಿ ಪ್ರಚಾರ ಮಾಡಬೇಕಾಗುತ್ತದೆ" ಎಂದು ಖಾರವಾಗಿ ಹೇಳಿ ಹೊರಟು ಬಂದೆ. ಅಲ್ಲಿದ್ದ ಹಿರಿಯರು ನನ್ನ ದಿಟ್ಟ ನಿಲುವನ್ನು ಮೆಚ್ಚಿದರೆಂದು ನೆನಪು. ಆದರೆ ನಾನು ದೇಸಾಯರ ಸಹಾನುಭೂತಿಯನ್ನು ಮಾತ್ರ ಕಳೆದುಕೊಂಡೆ.

ನಾನೀಗ ಕೆಲಸದ ಬೇಟೆಗಾರಂಭಿಸಿದೆ. ನೆಚ್ಚಿದ್ದ ನಾಯಕರಿಂದ ನೆರವು ಸಿಗಲಿಲ್ಲ. ಅನಿರೀಕ್ಷಿತ ಸಹೃದಯರ ಬೆಂಬಲ ಸಿಕ್ಕಿತು. ಅಬಕಾರಿ ಇಲಾಖೆಯಲ್ಲಿ ಇನ್ಸ್‌ಪೆಕ್ಟರ್ ಹುದ್ದೆಗೆ ಆಯ್ಕೆಯಾಯಿತು. ತರಬೇತಿಯನ್ನೂ ಪಡೆದೆ. ಆದರೆ ಅಷ್ಟರಲ್ಲಿ ಹೊಸದಾಗಿ ನೇಮಕವಾಗಿದ್ದ ಲೋಕಸೇವಾ ಆಯೋಗದವರು ರೆವಿನ್ಯೂ ಪ್ರೊಬೇಷನರ್ (ತಹಸೀಲ್ದಾರ್) ಹುದ್ದೆಗಳ ಭರ್ತಿಗಾಗಿ ಅರ್ಜಿ ಕರೆದರು. ಸಾವಿರಾರು ವಿದ್ಯಾರ್ಥಿಗಳು ಪರೀಕ್ಷೆಗೆ ಸೇರಿದರು. ನಾನೂ ಸೇರಿದೆ.

ಲಿಖಿತ ಪರೀಕ್ಷೆಗಳ ವಿಷಯಗಳಲ್ಲಿ ಪ್ರಾದೇಶಿಕ ಭಾಷೆಯ ಒಂದು (ಭಾಷಾಂತರವೂ ಸೇರಿ) ಪತ್ರಿಕೆಯೂ ಕಡ್ಡಾಯವಾಗಿತ್ತು. ಹೈದರಾಬಾದ್ ರಾಜ್ಯದಲ್ಲಿ ಕನ್ನಡ, ತೆಲುಗು ಮತ್ತು ಮರಾಠಿ, ಈ ಮೂರೂ ಪ್ರಾದೇಶಿಕ ಭಾಷೆಗಳಾಗಿದ್ದವು. ರಾಜ ಭಾಷೆ, ಬೋಧ ಭಾಷೆಯಾಗಿದ್ದ ಉರ್ದು ಈಗ ಸ್ಥಾನ ಕಳೆದುಕೊಳ್ಳುವುದರಲ್ಲಿತ್ತು. ಭಾಷಾ ಪತ್ರಿಕೆಯನ್ನು ಕಡ್ಡಾಯ ಮಾಡಿದ ವಿಚಾರ ಆಗ ನಿಜಕ್ಕೂ ಕ್ರಾಂತಿಕಾರಿ ವಿಚಾರ. ಈಗಲೂ ಇನ್ನೂ ಅನುಮಾನಿಸುತ್ತಿರುವ ಲೋಕ ಸೇವಾ ಆಯೋಗದವರು ಅನುಸರಿಸಬೇಕಾದ ನಿದರ್ಶನ. ಮೂವತ್ತು ವರ್ಷಗಳ ಹಿಂದೆ ಇಂಥದೊಂದು ಕ್ರಮ ಅಲ್ಲಿ ಆರಂಭವಾಯಿತ್ತು. ಇದರ ಪರಿಣಾಮವೇನಾಯಿತೆಂದರೆ ಈ ಭಾಷೆಗಳನ್ನು ಕಡೆಗಣಿಸಿದ್ದ ಯಾರೂ ಆ ಪರೀಕ್ಷೆಯಲ್ಲಿ ಪಾಸಾಗಲಿಲ್ಲ. ಲಿಖಿತ ಪರೀಕ್ಷೆಯಲ್ಲಿ ಪಾಸಾಗಿದ್ದವರಲ್ಲಿ ಕೊನೆಗೆ ನಲವತ್ತು ಹುಡುಗರನ್ನು ಸಂದರ್ಶನಾ ನಂತರ ಅಧಿಕಾರ ಸ್ಥಾನಗಳಿಗಾಗಿ ಆರಿಸಲಾಯಿತು. ಅದರಲ್ಲಿ ನಾನೂ ಇದ್ದೆ. ಹೈದರಾಬಾದು ಕರ್ನಾಟಕದಿಂದ ನಾವು ಹತ್ತು ಜನ ಆಯ್ಕೆಯಾಗಿ ತಹಸೀಲ್ದಾರ

ರೆಂದು ನೇಮಕಗೊಂಡೆವು. ಅದು 1949ರ ಕೊನೆಯ ಭಾಗ. ತಹಸೀಲ್ದಾರ್ ಆಯ್ಕೆಯೊಂದಿಗೆ ಮತ್ತೊಂದು ಮಗುವಾಯಿತು—ಸುಧಾ.

ಆರು ತಿಂಗಳ ತರಬೇತಿ ಪಡೆದೆವು, ನನ್ನೊಂದಿಗೆ ಎನ್. ಕಠಾವಿ, ಲಕ್ಷ್ಮಣ ರಾವ್, ರಾಮರಾವ್ (ಈಗ ಇಲ್ಲ), ಬಾದಾಮಿ, ರಾಘವೇಂದ್ರ ರಾವ್, ಮ. ನರಸಿಂಗ ರಾವ್ ಅವರೂ ಆಯ್ಕೆಯಾಗಿದ್ದರು. ಈ ಗೆಳೆಯರ ಗುಂಪು ಇಂದಿಗೂ ಅನ್ಯೋನ್ಯವಾಗಿ ಉಳಿದಿದೆ. ಬಹು ಕಾಲ ದೂರ ಉಳಿದಿದ್ದ ನನ್ನ ತಾಯಿಯ ತಮ್ಮ ಪಾಂಡಪ್ಪ ಮಾವ ಈಗ ನನಗೊಂದು ಸೂಟು ಹೊಲಿಸಿದ. ಆತ ಬಲು ಚಾಲಾಕು. ತಹಸೀಲ್ದಾರನಾದ ಸಂತೋಷದ ಭರದಲ್ಲಿ ಆಗ ನಡೆದ ಅಸಿಸ್ಟೆಂಟ್ ಕಮೀಷನರ್ ಪರೀಕ್ಷೆಗೆ ನಾನು ಕೂಡಲಿಲ್ಲ. ಅದಕ್ಕಾಗಿ ನಮ್ಮ ಮಾವ ಬಹುವಾಗಿ ಪೇಚಾಡಿದರು.

ತಹಸೀಲ್ದಾರನಾಗಿ ನಾನು ಜಹೀರಾಬಾದಿನಲ್ಲಿ ಕೆಲಸ ಆರಂಭಿಸಿದೆ. ತಿಂಗಳೊಳಗಾಗಿಯೇ ಬೀದರ್‌ಗೆ ವರ್ಗ ಪಡೆದೆ. ಚಾರ್ಜು ತೆಗೆದುಕೊಳ್ಳುವಾಗಲೇ ಕಂಡು ಹಿಡಿದ ಹಣದ ಅವ್ಯವಹಾರಗಳ ವರದಿಯನ್ನು ಕಳಿಸಿ ಕ್ರಮ ತೆಗೆದುಕೊಂಡಿದ್ದೆ. ಹೊಸಬರನ್ನು ಜಾಗಿರ್ ವಿಲೀನಗೊಂಡ ತಾಲ್ಲೂಕುಗಳಿಗೆ ಕಳಿಸಬಾರದೆಂಬ ಆದೇಶವಿತ್ತು. ಜಹೀರಾಬಾದು ಅಂಥ ಜಾಗೀರ್ ತಾಲ್ಲೂಕಾಗಿತ್ತು. ಇದನ್ನರಿತ ಜಿಲ್ಲಾಧಿಕಾರಿಗಳು—ವ್ಯವಸ್ಥಿತ ತಾಲ್ಲೂಕಾದ ಬೀದರಕ್ಕೆ ವರ್ಗ ಮಾಡಿದರು. ಹೀಗೆ ನನ್ನ ಅಧಿಕಾರಿ ಜೀವನ ಆರಂಭವಾಯಿತು. ಎಂಟು ವರ್ಷ ಅತ್ತೆಯ ಕೈಯ ಮಸಾಲೆ ಹುಳಿಯನ್ನು ಸವಿ ಸವಿದು ಉಂಡ ದಿನಗಳು ಮುಗಿದವು.

## ಅನುಭವ, ಮುನ್ನಡೆ, ಕನ್ನಡ

ತಹಸೀಲ್ದಾರನಾಗಿ ನಾನು ಅಧಿಕಾರ ಸ್ವೀಕರಿಸಿದಾಗ ಮನೆಯಲ್ಲಿ ಊಟದ ತಟ್ಟೆ ಸಹ ಇರಲಿಲ್ಲ. ಪಾತ್ರೆಗಳೆಲ್ಲ ಖರೀದಿಯಾದ ಮೇಲೆ ನನ್ನನ್ನು ಸೇರುವುದಾಗಿ ಹೆಂಡತಿ ಹೇಳಿ ಕಳಿಸಿದ್ದಳು ; ತವರಿನಿಂದ. ಮತ್ತೆ ಅವಳಿಗೆ ಯಾರೋ ಅನುಭವಸ್ಥರು ಹೇಳಿದರಂತೆ—"ಹಾಗೆಂದು ತಹಸೀಲ್ದಾರನಾದ ತರುಣನನ್ನು ಏಕಾಕಿಯಾಗಿ ಬಿಟ್ಟರೆ ಮತ್ತಾರೋ ಮನೆ ಹೊಕ್ಕಾರು" ಎಂದು. ಕೂಡಲೇ ಓಡಿ ಬಂದಳು. ಆಮೇಲೆ ತಂದೆ ತಾಯಿಗಳು ಬಂದರು. ಎಂಟು ವರ್ಷಗಳ ಕಷ್ಟಕಾರ್ಪಣ್ಯಗಳನ್ನು ಅನುಭವಿಸಿದ ಪತ್ನಿ ಈಗ ನೆಮ್ಮದಿಯ ಬಾಳಿನ ನಿರೀಕ್ಷೆಯ ಸಂತಸದಲ್ಲಿದ್ದಳು.

ಬೀದರ್‌ನಲ್ಲಿ ಆಗ ಮರಾಠಿ ಪ್ರಭಾವ ಬಹಳವಾಗಿತ್ತು. ಬ್ರಾಹ್ಮಣರೆಲ್ಲ ಮರಾಠಿ ಮಾತನಾಡುವವರು. ವೀರಶೈವರಿಗೆ ಬರುತ್ತಿದ್ದ ಕನ್ನಡವೂ ಅಷ್ಟಕ್ಕಷ್ಟೆ. ಆದರೆ ಬಸವಣ್ಣನ ಸಲುವಾಗಿ ಅವರಿಗೆ ಕನ್ನಡದಲ್ಲಿ ಪ್ರೀತಿ. ನಾವು ಕನ್ನಡ ಮಾತನಾಡಿದರೆ ನಮ್ಮನ್ನು 'ವಾಣೀ' (ಬಣಜಿಗ) ಜನರೆಂದು ತಿಳಿಯುತ್ತಿದ್ದರು. ಕಾಂಗ್ರೆಸ್

ನಲ್ಲಿದ್ದ ಬ್ರಾಹ್ಮಣ ಮುಖಂಡರಿಗೆ ಕರ್ನಾಟಕದ ಹೆಸರಿನಲ್ಲಿ ಲಾಭ, ಪ್ರತಿಷ್ಠೆ ಸಿಕ್ಕಿದ್ದವು. ಆದರೆ ಅವರಿಗೆ ಕನ್ನಡವೆಂದರೆ ಅಷ್ಟಕ್ಕಷ್ಟೆ. ಇಂಥ ಸ್ಥಿತಿಯಲ್ಲಿ ನಾನೇ ಒತ್ತಾಯದಿಂದೆಂಬಂತೆ ಮುಖಂಡರ ಹೆಸರು ಬಳಸಿಕೊಂಡು ಬೀದರ್‌ನಲ್ಲಿ ನಾಡಹಬ್ಬವನ್ನು ಏರ್ಪಡಿಸಿದ್ದೆ. ನನಗೆ ಆಗ ಅಲ್ಲಿ ಸೆಷನ್ ಜಡ್ಜ್ ಆಗಿದ್ದ ಅಶ್ವತ್ಥರಾಯರದೂ ಕುಮ್ಮಕ್ಕು ಇತ್ತು. ದಿಗ್ಗಾವಿ ಮಾಸ್ತರರದೂ ಇತ್ತು. ಡಾ. ಮೇಲ್ಕೋಟೆ, ಸಿದ್ದವನಹಳ್ಳಿ ಕೃಷ್ಣ ಶರ್ಮ ಅವರನ್ನು ಕರೆಸಿಕೊಂಡಿದ್ದೆವು.

ಒಂದು ವರ್ಷದ ನಂತರ ನನಗೆ ಭಾಲ್ಕಿಗೆ ವರ್ಗವಾಯಿತು. ಅಲ್ಲಿಯೂ ಅಷ್ಟೂರೆ, ಕಾಕನಾಳೆ, ವಂಕೆ ಮೊದಲಾದವರ ಸಹಾಯದಿಂದ ಅದ್ದೂರಿಯ ಮೊದಲ ನಾಡ ಹಬ್ಬ ಆಚರಿಸಿದೆವು. ಜೆ. ಕೆ. ಪ್ರಾಣೇಶಾಚಾರ್ಯ, ಕೀರ್ತನ ಕೇಸರಿ ಜಯರಾಮಾಚಾರ್, ಎಸ್. ಎಂ. ನಾಯಕ ಮೊದಲಾದವರನ್ನು ಕರೆಸಿದ್ದೆವು. ಕನ್ನಡ ನಾಡ ಹಬ್ಬವಾದ ಸ್ವಲ್ಪ ದಿನಗಳಲ್ಲಿಯೇ ಮರಾಠಿ ಸಮ್ಮೇಳನ ಅಲ್ಲಿ ಏರ್ಪಟ್ಟಿತ್ತು. ಬೃಹನ್ಮಹಾರಾಷ್ಟ್ರ ಪರಿಷತ್ತಿನ ಮುಖಂಡರೊಬ್ಬರು ಭಾಷಣಕ್ಕಾಗಿ ಬಂದರು. ಅಲ್ಲಿಯೂ ನನ್ನನ್ನೇ ಅಧ್ಯಕ್ಷನನ್ನಾಗಿ ಮಾಡಿದ್ದರು. ಅಂತೂ ನಾನು ಸೇವೆ ಸಲ್ಲಿಸಿದ ಹುಮನಾಬಾದು, ಯಾದಗಿರಿ, ಚಿಂಚೋಳಿ, ಗುಲ್ಬರ್ಗಾ, ಬಳ್ಳಾರಿ, ಲಿಂಗಸುಗೂರು ಮುಂತಾದ ಕಡೆಗಳಲ್ಲೆಲ್ಲ ಕನ್ನಡ ಚಟುವಟಿಕೆಗಳನ್ನು ಏರ್ಪಡಿಸುವುದು ಒಂದು ಸಾಮಾನ್ಯ ರೂಢಿಯಾದಂತಿತ್ತು. ಅಧಿಕಾರಿಯ 'ಮರ್ಜಿ' ಬಯಸುತ್ತಿದ್ದ ಆ ಕಾಲದಲ್ಲಿ ಜನರೂ ಸಹಕರಿಸುತ್ತಿದ್ದರು.

ನಾನು ನೇರವಾಗಿ ತಹಸೀಲ್ದಾರನಾದುದು ನಮ್ಮ ತಂದೆಗೆ ಅಸಾಧಾರಣ ಆನಂದವನ್ನು ತಂದಿತ್ತು. ತನ್ನ ಮತ್ತು ತಮ್ಮ ಪೂರ್ವಿಕರ ಪುಣ್ಯದ ಫಲವೆಂದೇ ಆತ ಸಹಜವಾಗಿ ಭಾವಿಸಿದರು. ಆತನ ಮಿತ್ರರೂ ಅದೇ ಮಾತನ್ನು ಆತನೆದುರಿಗೂ ನನ್ನೆದುರಿಗೂ ಪದೇ ಪದೇ ಹೇಳುತ್ತಿದ್ದರು. ಒಂದು ರೀತಿಯಲ್ಲಿ ನನಗೆ ಪಿತೃಋಣದ ನೆನಪು ಕೊಡುತ್ತಿದ್ದರೆನ್ನಬಹುದು. ಆದರೆ ಆರೇಳು ವರ್ಷ ನನ್ನನ್ನು ಸಂಸಾರ ಸಮೇತ ಸಾಕಿ, ಕಠಿಣ ದಿನಗಳಲ್ಲಿ ಎಲ್ಲಿಲ್ಲದ ಭಾರ ಹೊತ್ತು ಶ್ರಮಿಸಿದ ನಮ್ಮ ಮಾವ ಮತ್ತು ಅತ್ತೆಯವರ ಅಸಾಧಾರಣ ತ್ಯಾಗ ಪರಿಶ್ರಮಗಳನ್ನು ಈ ಜನ ಪ್ರಸ್ತಾಪಿಸದೆ ಇರುತ್ತಿದ್ದುದು ನನಗೆ ಸೋಜಿಗವೆನಿಸುತ್ತಿತ್ತು.

ತಹಸೀಲ್ದಾರನಾದ ವರ್ಷದಿಂದಲೇ ಆರಂಭಿಸಿ ಮುಂದೆ ಹಲವಾರು ವರ್ಷಗಳವರೆಗೆ ನಮ್ಮ ತಂದೆ, ತಾಯಿ, ತಮ್ಮ, ಆಮೇಲೆ ಅವನ ಕುಟುಂಬವೆಲ್ಲ ನನ್ನನ್ನಾಶ್ರಯಿಸಿಯೇ ಇದ್ದರು. ಅವರಿಗೆ ಮಡಿ, ವ್ರತನೇಮ, ತೀರ್ಥಯಾತ್ರೆ, ಆಚಾರಗಳ ಎಲ್ಲ ವ್ಯವಸ್ಥೆ ನನ್ನಲ್ಲಿ ಮಾಡಿರುತ್ತಿತ್ತು. ಅದೆಲ್ಲ ಅವರ ಹಕ್ಕು ಹಾಗು ನನ್ನ ಕರ್ತವ್ಯವೆಂಬಂತೆ ನಡೆದಿತ್ತು. ಆದರೂ ನನ್ನನ್ನು 'ಆಸ್ತಿಕ' ನನ್ನಾಗಿ ಮಾಡುವ ಪ್ರಯತ್ನ ನಮ್ಮ ತಂದೆ ಬಿಟ್ಟಿರಲಿಲ್ಲ. ಅವರ ಕೆಲ ಸ್ನೇಹಿತರು "ನೀನು ಶ್ರಾದ್ಧವನ್ನಾದರೂ

ಮಾಡುವ ಭರವಸೆ ನಿಮ್ಮಪ್ಪನಿಗಿಲ್ಲ" ವೆಂದು ನನಗೇ ಹೇಳುವಷ್ಟು ದೂರಹೋಗಿದ್ದರು. "ನಮ್ಮಪ್ಪ ಸ್ವತಃ ಪುಣ್ಯಜೀವಿ. ನಾನು ಹಾಕುವ ಪಿಂಡದ ಬಲದಿಂದಲೇ ಆತ ಸ್ವರ್ಗಕಾಣಬೇಕಾಗಿಲ್ಲ" ಎಂದು ನಾನು ನಿಷ್ಠುರವಾಗಿ ಹೇಳಬೇಕಾಯಿತು. ನಮ್ಮ ತಂದೆಯ ಇನ್ನೊಬ್ಬ ಹಿರಿಯ ಮಿತ್ರರು, ಮಾಸ್ತರರು. ನನಗೆ ಬಹಳ ಬೇಕಾದವರು "ನೀನು ದೇವರ ಪೂಜೆಮಾಡುವದನ್ನೇ ನಾನು ನೋಡಿಲ್ಲವಲ್ಲ" ಎಂದೊಮ್ಮೆ ಕೇಳಿದರು. ನಾನು "ನೀವು ನೋಡುವಂತೆ ಪೂಜೆಮಾಡುವದು ಅಗತ್ಯವಾದರೆ—ಅದು ಲೌಕಿಕವಾದೀತು. ದರ್ಶನ ಮುಖ್ಯವೋ ಪ್ರದರ್ಶನವೊ?" ಎಂದಾಗ "ಇದೆಲ್ಲ ಯಾವುದನ್ನೂ ಮಾಡಲೊಲ್ಲದವರ ವಾದ" ಎಂದರು. ಅದು ಅವರ ಅಭಿಪ್ರಾಯ. ಸುದೈವದಿಂದ ನಮಗೆ ದೊರೆಯಬಹುದಾದ ? ಸದ್ಗತಿ ದುರ್ಗತಿಗಳು ? ಜನಾಭಿಪ್ರಾಯದ ಮೂಲಕವಲ್ಲವೆಂಬುದೇ ಸಮಾಧಾನ. ಹೀಗೆ ಜನಾಭಿಪ್ರಾಯದ ಒತ್ತಡವನ್ನು ತರುವ ಪ್ರಯತ್ನವೂ ನಡೆದಿತ್ತು. ಮಿಡ್ಲಸ್ಕೂಲ್ ಬಿಡಿಸಿ ವೈದಿಕವಿದ್ಯೆಗಾಗಿಯೇ ನಿಲ್ಲಿಸಿಕೊಂಡಿದ್ದ ನನ್ನ ತಮ್ಮನೂ ವಿದ್ವಾಂಸನಾಗಲಿಲ್ಲ. ತಂದೆಗೆ ಸಮಾಧಾನ ತರಲಿಲ್ಲ. ನಾನಾದರೋ? ಹೀಗಾದೆ. ಇದವರ ಚಿಂತೆಯಾಗಿತ್ತು.

ನನಗೆ 1965ರಲ್ಲಿ ಕ್ಷಯರೋಗ ಕಾಣಿಸಿಕೊಂಡಾಗ ಘಟಪ್ರಭಾ ಆರೋಗ್ಯ ಧಾಮವನ್ನು ಸೇರಿದೆ. ಆಗ ಇನ್ನೂ ಚಿಕ್ಕವರಾಗಿದ್ದ ನನ್ನ ಮಕ್ಕಳು, ಪತ್ನಿ ಬಹಳ ಕಷ್ಟಕ್ಕೀಡಾದರು. ಕುಟುಂಬವೇ ಬೀದಿಗಿಳಿಯುವ ಇಂಥಾ ಆಪತ್ತಿನ ಪರಿಸ್ಥಿತಿಯಲ್ಲಿ ನನ್ನ ಸಮೀಪ ಬಂಧುಗಳು ದೂರವೇ ಉಳಿದು ತೀರ ಅನಾಸಕ್ತಿಯನ್ನು ನನ್ನ ಬಗ್ಗೆ, ನನ್ನ ಮಕ್ಕಳ ಬಗ್ಗೆ ತೋರಿಸಿದಾಗ ಒಂದು ಬಗೆಯ ಜುಗುಪ್ಸೆಯುಂಟಾಗುತ್ತಿತ್ತು. ಆದರೆ ಶ್ರೀ ಕಠಾವಿ ಮುಂತಾದ ನನ್ನ ಸ್ನೇಹಿತರು ಬಂಧುಗಳಿಗಿಂತ ಮೀರಿದ ಆತ್ಮೀಯತೆ, ಪ್ರೀತಿಗಳನ್ನು ನೀಡಿ ನನಗೆ, ನನ್ನ ಕುಟುಂಬಕ್ಕೆ ನೆರವಾದುದನ್ನು ಗಮನಿಸಿದಾಗ ಈ ಪ್ರಪಂಚ ಇನ್ನೂ ವಾಸಯೋಗ್ಯವಾಗಿದೆಯೆಂಬ ಆಶಾಕಿರಣ ಮೂಡಿತ್ತು. ಜೀವನಾನುಭವಕ್ಕೆ ಮತ್ತೊಂದು ಆಯಾಮ ದೊರೆತಿತ್ತು. ಬಂಧುಪ್ರೇಮ ಪರೀಕ್ಷೆಗೆ ಸಿಲುಕಿ ಸೋತಿತ್ತು. ನಮ್ಮ ಮೇಲೆ ಹಕ್ಕು ಚಲಾಯಿಸಿ ಸೌಕರ್ಯ ಗಿಟ್ಟಿಸುವ ಕಸುವು ಕುಗ್ಗಿತ್ತು.

ಆರೋಗ್ಯ ಹೊಂದಿ ವರ್ಗವಾಗಿ ಗುಲ್ಬರ್ಗಾ, ರಾಯಚೂರು, ಬಳ್ಳಾರಿ, ಮೈಸೂರುಗಳಲ್ಲಿ ಸೇವೆ ಸಲ್ಲಿಸಿದ ದಿನಗಳಲ್ಲಿ ನನ್ನ ಸಾಹಿತ್ಯಾಸಕ್ತಿ ಹೆಚ್ಚಿತು. ಅನೇಕ ಕಥೆ, ಕಾದಂಬರಿಗಳನ್ನು ಇದೇ ಅವಧಿಯಲ್ಲಿ ಬರೆದೆ. ಆಗಿನ ವಿಭಾಗಾಧಿಕಾರಿಗಳಾಗಿದ್ದ ಜಿ. ವಿ. ಕೆ. ರಾವ್ ಮತ್ತು ಎಂ. ಎಸ್. ಶಂಕರರಾಯರಿಂದ ಕನ್ನಡದ ವಿಚಾರದಲ್ಲಿ ಪ್ರೋತ್ಸಾಹ ಸಿಕ್ಕಿತು. ಮೈಸೂರಿಗೆ ಹೋಗುವಷ್ಟರಲ್ಲಿ (1972-73) ಆಡಳಿತ ಭಾಷೆಯನ್ನು ಜಾರಿಗೆ ತರುವ ಬಗ್ಗೆ ನಾನು ಆಲೋಚಿಸತೊಡಗಿದ್ದೆ. ನನಗೆ ಸಂಬಂಧವಿರದಿದ್ದರೂ ಅಲ್ಲಿನ ಆಡಳಿತ ಭಾಷಾ ತರಬೇತಿ ಸಂಸ್ಥೆಯಲ್ಲಿ ಅಧಿಕಾರಿಗಳಿಗೆ ಕನ್ನಡ

ತರಬೇತಿಯ ಬಗ್ಗೆ ಚರ್ಚಿಸಿದೆ. ಕಛೇರಿ ಕೈಪಿಡಿ ರಚನೆಯಲ್ಲಿ ಪಾಲ್ಗೊಂಡೆ. ಮಂಡ್ಯಾ ಸಾಹಿತ್ಯ ಸಮ್ಮೇಳನ ಮೊದಲ ಬಾರಿ ಆಡಳಿತ ಭಾಷೆಯ ಬಗ್ಗೆ ನನ್ನ ವಿಚಾರಗಳು ಬಹಿರಂಗವಾಗಲು ಸಹಾಯವಾಯಿತು. ಅದಕ್ಕಾಗಿ ಜಿ.ನಾರಾಯಣರನ್ನು ನೆನೆಯಬೇಕು.

ಸರ್ಕಾರೀ ಕೆಲಸದಲ್ಲಿ ಕಳೆದ ಮೂವತ್ತು ವರ್ಷಗಳಲ್ಲಿ ನಾನು ಪಡೆದ ಅನುಭವ ವೈವಿಧ್ಯಗಳ ರುಚಿಯೇ ಬೇರೆ. ಕೆಲವನ್ನು ನನ್ನ ಕಥೆ, ಕಾದಂಬರಿಗಳಲ್ಲಿ ಹೇಳಿದ್ದೇನೆ. ಉಳಿದವುಗಳನ್ನು ಈಗಲೇ, ಅಂದರೆ ಸೇವೆಯಲ್ಲಿ ಇರುವಾಗಲೇ ಹೇಳುವುದು ಸೂಕ್ತ ವಲ್ಲ. ತಹಸೀಲ್ದಾರನಾಗಿ, ಅಸಿಸ್ಟೆಂಟ್ ಕಮೀಷನರ್ ಆಗಿ, ಮುನಿಸಿಪಲ್ ಕಮೀ ಷನರ್ ಆಗಿ, ವಿಶ್ವವಿದ್ಯಾಲಯದ ಪರೀಕ್ಷಾ ನಿಯಂತ್ರಣಾಧಿಕಾರಿಯಾಗಿ, ನೀರಾವರಿ ಯೋಜನೆಗಳ ಆಡಳಿತಾಧಿಕಾರಿಯಾಗಿ, ವಿಶೇಷ ಜಿಲ್ಲಾಧಿಕಾರಿಯಾಗಿ, ಕನ್ನಡ ಅಭಿ ವೃದ್ಧಿ ನಿರ್ದೇಶನಾಲಯದ ಪ್ರಥಮ ನಿರ್ದೇಶಕನಾಗಿ, ವಿದ್ಯಾ ಇಲಾಖೆಯ ಉಪ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸಿರುವ ನನ್ನ ದೃಷ್ಟಿ, ಧೋರಣೆ ಹತ್ತಾರು ಆಯಾಮಗಳನ್ನು ಪಡೆದಿದೆ. ಹಲವರಿಗೆ ನನ್ನಿಂದ ಸಹಾಯ ತೃಪ್ತಿ ಸಿಕ್ಕಿದ್ದೀತು. ತ್ರಿವೆಂಡ್ರಂನಲ್ಲಿ ನಡೆದ ಅಖಿಲ ಭಾರತ ಸ್ಥಳೀಯ ಸಂಸ್ಥೆಗಳ ಅಧಿಕಾರಿಗಳ ಸಮ್ಮೇಳನ ದಲ್ಲಿ ಅಧ್ಯಕ್ಷನಾಗಿ ಭಾಗವಹಿಸಿದೆ. ಅನೇಕ ವಿಧದ ತರಬೇತಿಗಳಲ್ಲಿ, ಚರ್ಚಾಗೋಷ್ಠಿ ಗಳಲ್ಲಿ, ನೂರಾರು ಸಾರ್ವಜನಿಕ ಸಭೆಗಳಲ್ಲಿ ಭಾಗವಹಿಸಿದ್ದೇನೆ. ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರು (ತೋರಣಗಲ್‌ನಲ್ಲಿ) ಹಿಂದಿ ಭಾಷಣ ಮಾಡು ತ್ತಿದ್ದಂತೆಯೇ ಕನ್ನಡೀಕರಿಸಿದಾಗ ಜನಸ್ತೋಮಕ್ಕಾದ ಸಂತೋಷ ಕಂಡಿದ್ದೇನೆ. ಹಲವು ಹಿರಿಯ ಕಿರಿಯ ಅಧಿಕಾರಿಗಳಿಂದ ಸ್ಫೂರ್ತಿ, ಪ್ರೇಮ ದೊರೆತಂತೆ ಮತ್ತೆ ಕೆಲವರ ಕೀಳರಿಮೆ, ದುರಹಂಕಾರ, ಜುಗುಪ್ಸೆಯನ್ನೂ ತಂದಿದೆ. ನನ್ನನ್ನು ಮೆಚ್ಚಿ ಕೊಂಡವರು ಇರುವಂತೆ, ನನ್ನನ್ನು ಕಡೆಗಣಿಸುವವರೂ ಇದ್ದಾರೆಂಬುದನ್ನು ಗಮನಿಸಿ ದ್ದೇನೆ. ಇಷ್ಟು ದೂರ ಸಾಗಿ ಈ ಮಟ್ಟ ತಲುಪುವಾಗ ಕೆಲವೊಮ್ಮೆ ಜಾರಿದ್ದೇನೆ, ಎಡವಿದ್ದೇನೆ, ಮತ್ತೆ ಮುಂದೆ ಸಾಗಿದ್ದೇನೆ. ನನ್ನಿಂದ ನನ್ನ ಹತ್ತಿರವಿದ್ದವರಿಗೆ ಕಷ್ಟ, ನೋವು ಆಗಿರಬೇಕು. ಅದಕ್ಕೆಲ್ಲ ಕ್ಷಮೆಯ ಹೊರತು ಬೇರಾವ ದಾರಿ ಇದೆ ? ಕಹಿ ಸಿಹಿ ಎಲ್ಲ ಸೇರಿಯೇ ಜೀವನವಲ್ಲವೆ ? ಇಷ್ಟೊಂದು ಪ್ರಗತಿಯ ಜೊತೆಗೆ ಮತ್ತೆ ಮೂರು ಮಕ್ಕಳೂ ಸೇರಿಕೊಂಡರು—ಪ್ರಕಾಶ, ರವಿ, ಪೂರ್ಣಿಮಾ. ಅವರೂ ಈಗ ಬೆಳೆದಿದ್ದಾರೆ. ಕಲೆ ಮತ್ತು ಚರಿತ್ರೆಯ ದೃಷ್ಟಿಯಿಂದ ಭಾರತದಲ್ಲಿ ಪ್ರಸಿದ್ಧ ವಾಗಿರುವ ಅನೇಕ ಸ್ಥಳಗಳನ್ನು ಎರಡು ಮೂರು ಸಲ ದೇಶ ಸುತ್ತಾಡಿ ನೋಡಿ ಬಂದೆ. ಪ್ರಭಾವಿತನಾದೆ.

ಕಾಲೇಜು ಮುಗಿಸಿದ ಸುಮಾರು ಹದಿನೇಳು ವರ್ಷಗಳ ನಂತರ ಬರವಣಿಗೆ ಆರಂಭಿಸಿದ್ದೆ. ಕ್ಷಯ ರೋಗದಿಂದ ಘಟಪ್ರಭಾ ಆರೋಗ್ಯಧಾಮದಲ್ಲಿ ನರಳುತ್ತಿ

ದ್ದಾಗ ನನ್ನನ್ನು ನೋಡಲು ಬರುತ್ತಿದ್ದ ಕಾದಂಬರಿಕಾರ ಕೃಷ್ಣಮೂರ್ತಿ ಪುರಾಣಿಕರು ನನ್ನು ಕಥಾ ಲೇಖನಕ್ಕೆ ಪ್ರಚೋದಿಸಿದರೆನ್ನಬಹುದು. ಆ ಮುಂಚೆಯೇ 1962ರಲ್ಲಿ ನನ್ನ 'ಪಾರವ್ವನ ಪಂಚಾಯಿತಿ' ಕಥೆಗೆ ಬಹುಮಾನ ಬಂದಿತ್ತಾದರೂ, ಸತತ ನಿರ್ಮಾಣ 1965 ರಿಂದಲೇ ಆರಂಭವಾಯಿತೆನ್ನಬೇಕು. ಗುಲ್ಬರ್ಗಾದಲ್ಲಿ ಸನದಿ, ಗ್ರಾಮಪುರೋಹಿತ. ಪುರಂದರೆ ಗೆಳೆಯರು 'ಪಾರವ್ವನ ಪಂಚಾಯಿತಿ'ಯನ್ನು ಹೊರ ತಂದರು. ಕನ್ನಡ ಸಾಹಿತ್ಯ ಸಂಘ 'ಹಾಲು ಜೇನು' ಕಾದಂಬರಿಯನ್ನು ಪ್ರಕಟಿಸಿತು. 'ಸುಧಾ' ವಾರ ಪತ್ರಿಕೆ 'ಸುಳಿಗಾಳಿ' ಕಾದಂಬರಿಗೆ ಬಹುಮಾನವನ್ನೂ, ನನಗೆ ಪ್ರಸಿದ್ಧಿಯನ್ನೂ ನೀಡಿತು. ವಿಭಾಗಾಧಿಕಾರಿ ಜಿ. ವಿ. ಕೆ. ರಾಯರು 'ತುಂಗಾ ತರಂಗ' ಪ್ರಕಟಿಸಲು ಪ್ರೋತ್ಸಾಹಿಸಿದರು. ಡಾ. ಪಿ. ಬಿ. ದೇಸಾಯಿಯವರು ಐತಿಹಾಸಿಕ ವಿಷಯಗಳಲ್ಲಿ ನನ್ನ ಆಸಕ್ತಿಯನ್ನು ಹೆಚ್ಚಿಸಿದರು. ಈಚೆಗೆ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆ ನನ್ನ 'ಕನ್ನಡ ಶೀರ್ಷುಗಳು' ಗ್ರಂಥವನ್ನು ಪ್ರಕಟಿಸಿ ಆಡಳಿತ ಸಾಹಿತ್ಯ ರಚನೆಯಲ್ಲಿ ಅದರ ಅಪೂರ್ವತೆಯನ್ನು ಬೆಳಕಿಗೆ ತಂದಿತು. ಈ ಗ್ರಂಥಕ್ಕೆ ವಿಶೇಷ ರಾಜ್ಯ ಪ್ರಶಸ್ತಿ ದೊರೆಯಿತು. (ಆದರೆ ಪ್ರಶಸ್ತಿಯ ರೂ. 1,500 ಹಣ ವನ್ನು ಸ್ವೀಕರಿಸಲಿಲ್ಲ). ಆಮೇಲಿನ ಬೆಳವಣಿಗೆ ಅನೇಕರಿಗೆ ತಿಳಿದ ವಿಚಾರವೇ ಆಗಿದೆ. ರಾಯಚೂರಿನಲ್ಲಿದ್ದಾಗ ಶಾಂತರಸ, ಚಂದ್ರಕಾಂತ ಕುಸನೂರರ ಜೊತೆಗೆ 'ಪ್ರತೀಕ' ನಿಯತಕಾಲಿಕ ಪತ್ರಿಕೆಯನ್ನು ಕೆಲ ದಿನ ನಡೆಸಿದ್ದಾಯಿತು. ಕುಮಾರ ವ್ಯಾಸ, ಹರಿಹರ, ಎಂ. ಆರ್. ಶ್ರೀ, ಬಿ. ಎಂ. ಶ್ರೀ, ಕುವೆಂಪು, ಬೇಂದ್ರೆ, ಮಾಸ್ತಿ, ಕಾರಂತ, ಶ್ರೀರಂಗರ ಕೃತಿಗಳ ಅಧ್ಯಯನ; ಟಾಲ್‌ಸ್ಟಾಯ್, ನೆಹರೂ, ರಾಧಾಕೃಷ್ಣನ್, ಗಾಂಧೀಜಿ, ಮಾಮ್, ಪರ್ಲ್‌ಬಕ್ ಮೊದಲಾದವರ ಕೃತಿ ಪರಿ ಚಯ ನನ್ನ ಬರವಣಿಗೆಗೆ ಪ್ರಚೋದಕವಾಗಿವೆ. ಶ್ರೀರಂಗರ ಕೆಲವು ನಾಟಕಗಳಲ್ಲಿ ನಾನು ಅಭಿನಯಿಸಿದುದೂ ಉಂಟು.

ಮೈಸೂರು ವಿಶ್ವವಿದ್ಯಾನಿಲಯದ ಕೆಲಸ ನನಗೆ ತೃಪ್ತಿ ನೀಡಲಿಲ್ಲವಾದರೂ ಡಾ. ಹಾ. ಮಾ. ನಾಯಕ್, ಡಾ. ಪಟ್ನಾಯಕ್, ಶ್ರೀ ಪಾಟೀಲ ಮತ್ತು ಡಾ. ಪ್ರಭುಶಂಕರರಂಥ ಅನೇಕ ಸಹೃದಯ ವಿದ್ವಾಂಸರ ಸ್ನೇಹವನ್ನು ಸಂಪಾದಿಸಿತು. ಕನ್ನಡದ ಕಳಕಳಿಯನ್ನು ಹೆಚ್ಚಿಸಿತು. ಚಿತ್ರದುರ್ಗದ ವಿಶೇಷ ಜಿಲ್ಲಾಧಿಕಾರಿಯಾದದ್ದು, 'ಪ್ರಥಮ ಕನ್ನಡ ಶೀರ್ಷು' ನೀಡಲು ದಾರಿಮಾಡಿ ಕೊಟ್ಟಿತು. ನನ್ನ ಹಿನ್ನೆಲೆ ತಿಳಿದು ಬೆಂಗಳೂರಿಗೆ ಕರೆಯಿಸಿಕೊಂಡ ಆಗಿನ ಮುಖ್ಯ ಕಾರ್ಯದರ್ಶಿಗಳಾದ ಜಿ. ವಿ. ಕೆ. ರಾಯರು ಕನ್ನಡ ಅಭಿವೃದ್ಧಿ ಇಲಾಖೆಯನ್ನು ನನಗೆ ವಹಿಸಿಕೊಟ್ಟು ಆಡಳಿತ ಭಾಷಾ ನೀತಿಯ ನಿರ್ವಹಣೆಯಲ್ಲಿ ಮೌಲೀಕ ಪಾತ್ರ ವಹಿಸುವಂತೆ ನನಗೆ ಪ್ರೋತ್ಸಾಹಿಸಿದರು. ಕನ್ನಡ ಅಭಿವೃದ್ಧಿಯ ಕಾರ್ಯಕ್ಷೇತ್ರ ನನಗೆ ರಾಜ್ಯಾದ್ಯಂತ ಮತ್ತು ದಕ್ಷಿಣದ ರಾಜ್ಯ ಗಳಲ್ಲಿ ಸ್ನೇಹಿತರನ್ನು ಗಳಿಸಿಕೊಟ್ಟಿತು. ಕರ್ನಾಟಕದಲ್ಲೇ ಅನಾಸಕ್ತ ಅಧಿಕಾರಿ ಮಿತ್ರರ

ಆಕ್ರೋಶ, ಅಸಮಾಧಾನಗಳೂ ಕೆಲವೊಮ್ಮೆ ಎದುರಾದವು. ಒಟ್ಟಿನಲ್ಲಿ ಈ ಕೆಲಸ ನನ್ನ ಅಭಿರುಚಿಗೆ ತಕ್ಕುದೆನಿಸಿ ಸಮಾಧಾನ ತಂದಿದೆ. ಈ ನಡುವೆ ಸೃಷ್ಟಿಸಿದ ಸಾಹಿತ್ಯ ಹಾಗೂ ಗೈದ ಸೇವೆಗಳು ಸರ್ಕಾರದಿಂದ ವಿಶೇಷ ರಾಜ್ಯ ಪ್ರಶಸ್ತಿಯನ್ನೂ, ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನೂ ಗಳಿಸಿಕೊಟ್ಟವು. ಕನ್ನಡ ಅಭಿವೃದ್ಧಿಯ ಕೆಲಸ, ದಕ್ಷಿಣ ರಾಜ್ಯಗಳ ಆಡಳಿತ ಭಾಷಾಗೋಷ್ಠಿಯಲ್ಲೂ (ನಾವೇ ಏರ್ಪಡಿಸಿದ್ದ) ದಿಲ್ಲಿಯಲ್ಲಿ ಜರುಗಿದ ರಾಷ್ಟ್ರ ಮಟ್ಟದ ಆಡಳಿತ ಭಾಷಾ ಸಮ್ಮೇಳನದಲ್ಲೂ, ಸಾಹಿತ್ಯ ಸಮ್ಮೇಳನಗಳಲ್ಲೂ, ನಾನು ಭಾಗವಹಿಸಿ ಅಧಿಕಾರವಾಣಿಯಿಂದ ಕನ್ನಡದ ಬಗ್ಗೆ ಪ್ರತಿಪಾದಿಸಲು ಅವಕಾಶ ಕಲ್ಪಿಸಿತು. ಅನೇಕ ಸಾಹಿತಿ, ಕಲಾವಿದರನ್ನು ನನ್ನ ಹತ್ತಿರ ತಂದಿತು. ಇದು ನನ್ನ ಗಳಿಕೆ. ಸಾಹಿತ್ಯಕ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಒಂದು ಹಂತ ತಲುಪಿದ್ದೇನೆ. ಸಾಂಸಾರಿಕವಾಗಿಯೂ ನನ್ನ ಎಲ್ಲ ಮಕ್ಕಳೂ ತಮ್ಮ ತಮ್ಮ ನೆಲೆ ಕಂಡುಕೊಂಡಿದ್ದಾರೆ. ಮೊಮ್ಮಕ್ಕಳೂ ಹುಟ್ಟಿದ್ದಾರೆ. ಇದು ಒಂದು ಬಗೆಯ ಸಂತೃಪ್ತಿ ನೀಡಿದೆ. ಆರೋಗ್ಯ ಅಷ್ಟೊಂದು ಸದೃಢವಾಗಿಲ್ಲ. ಆದರೂ ಜ್ಞಾನ ಪಿಪಾಸೆಗೆ ಚಿಕಿತ್ಸಕ ಚೇತನಕ್ಕೆ ಸಂತೃಪ್ತಿಯೆಲ್ಲಿ ? ಈ ಸನ್ಮಾನ, ಪ್ರಶಸ್ತಿಗಳು, ಸೃಷ್ಟಿ ಶೀಲ ಚೇತನವನ್ನು ಮಂದಗೊಳಿಸುವವೆಂದು ಅನಿಸಿದೆ. ಈಚೆಗೆ ನಾನು ಬರೆದುದು ಕಮ್ಮಿ. ಕೀರ್ತಿ ಶನಿಯೆಂಬುದು ನಿಜವೆ ?

ಮತ್ತೊಂದು ಚಿಕ್ಕ ರೋಚಕ ಸಂಗತಿ. ಬೇರೆಯಾಗಿದ್ದ ಸಾಹಿತ್ಯ ಸಂಸ್ಕೃತಿ ವಿಭಾಗಗಳನ್ನು ಅನಿರೀಕ್ಷಿತವಾಗಿ ಕನ್ನಡ ಅಭಿವೃದ್ಧಿ ಇಲಾಖೆಗೇ ಸರ್ಕಾರ ವಹಿಸಿ ಕೊಟ್ಟಿತು. ಆ ವಿಭಾಗಗಳೇ ಬೇರೊಂದು ಇಲಾಖೆಯಾಗಿ ಅದರ ಮುಖ್ಯ ಸ್ಥಾನ ಪಡೆಯಲು ಹಲವಾರು ಪ್ರಮುಖರು ಪ್ರಬಲ ಪ್ರಯತ್ನ ನಡೆಸಿದ್ದರಂತೆ. ಆದರೆ ಹಾಗಾಗಲಿಲ್ಲ. ಈ ಜಂಟಿ ಜವಾಬ್ದಾರಿಯನ್ನು ನಾನು ವಹಿಸಿಕೊಂಡ ನಂತರ ಭೇಟಿಯಾದ ಮಿತ್ರರೊಬ್ಬರು—"ಈ ಇಲಾಖೆಯನ್ನು ಯಾರಾದರೊಬ್ಬ (ಎಮಿನೆಂಟ್) ಪ್ರಖ್ಯಾತ ಮನುಷ್ಯನಿಗೆ ಒಪ್ಪಿಸಬೇಕಾಗಿತ್ತು" ಎಂದು ನನಗೆ ಕಳವಳದಿಂದ ಹೇಳಿದರು. ನನಗೆ ಅವರ ಧ್ವನಿ ಅರ್ಥವಾಗಿ ನಕ್ಕೆ. "ಸದ್ಯ ಸರ್ಕಾರಕ್ಕೆ ನಾನೇ ಎಮಿನೇಟ್ ಆಗಿ ಕಂಡಿರಬಹುದು" ಎಂದೆ ಲಘುವಾಗಿ. ಯಾರು ಯಾರ ದೃಷ್ಟಿಯಲ್ಲಿ ಯಾತಕ್ಕಾಗಿ ಎಮಿನೇಂಟೊ ? ಯಾರು ಹೇಳಬೇಕು ? ಪ್ರತಿ ಕುರ್ಚಿಗೂ ನಾನೇ ಯೋಗ್ಯನೆಂದು ತಿಳಿಯುವಷ್ಟು ಗಾಂಪನಂತೂ ನಾನಲ್ಲ. ದೊರೆತ ಸ್ಥಾನಕ್ಕೆ ನ್ಯಾಯ ಸಲ್ಲುವಂತೆ ಕೆಲಸ ಮಾಡಲೆತ್ನಿಸುವುದು ನನ್ನ ರೀತಿ. ಹೀಗೆ ಕನ್ನಡ ಅಭಿವೃದ್ಧಿ ಬೆಳೆದು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಾಯಿತು. ಹೀಗೆ ನಾನು ಕಲೆ ಮತ್ತು ಕಲಾವಿದರ ಹಾಗೂ ಸಂಸ್ಕೃತಿಯ ಬಗ್ಗೆ ಯೋಚನೆ ಮತ್ತು ಯೋಜನೆಗಳನ್ನು ರೂಪಿಸಬೇಕಾಯಿತು.

ಸರ್ಕಾರಿ ಸೇವೆಯಲ್ಲಿ ಇರುವವರು ಸಾಮಾನ್ಯವಾಗಿ ಆಶಿಸುವ ದರ್ಜೆ

ಐ. ಎ. ಎಸ್. ಈಚೆಗೆ ಸರ್ಕಾರ ನನಗೆ ಅದನ್ನು ನೀಡಿದೆ. ಇಂಥ ಉಪಾಧಿಗಳ ಅಪಮೌಲ್ಯದ ಉದಾಹರಣೆಗಳು ಹಲವಾರು ನಮ್ಮೆದುರಿಗಿರುವಾಗ ಈ ಉಪಾಧಿಯೇ ಮಹಾ ವೈಶಿಷ್ಟ್ಯವೆಂದು ಭ್ರಮಿಸಿ ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ನಮ್ಮ ನಮ್ಮ ಮೌಲ್ಯಮಾಪನದ ಮಾನದಂಡ ಬೇರೇನೋ ಇದೆಯೇ ಹೊರತು ಇಂಥ ಉಪಾಧಿಗಳಲ್ಲವೆಂಬ ಅರಿವೂ ನನಗಿದೆ. ಕನ್ನಡದ ಜೊತೆಗೆ ನನ್ನ ಹೆಸರನ್ನು ಕೆಲವರು ಗುರುತಿಸುತ್ತಾರೆ. ಅದೇ ನನ್ನನ್ನಳೆಯುವ ಮಾನದಂಡವೇನೊ, ಹಾಗಿದ್ದರೆ ನಾನು ಧನ್ಯ. ನನ್ನಂಥ ಅಧಿಕಾರಿ ಸಾಹಿತಿಗಳಿಗೆ ಪದ ನಿಮಿತ್ತ ದೊರೆಯಬಹುದಾದ ಮಹತ್ವದಲ್ಲಿಯ ಉತ್ಪ್ರೇಕ್ಷಾಂಶವನ್ನೂ ಮರೆಯಬಾರದು.

ಎಲ್ಲಕ್ಕಿಂತ ಹೆಚ್ಚಾಗಿ ಕನ್ನಡದ ಹಿರಿಯರು, ಸ್ನೇಹಿತರು, ಸಾರ್ವಜನಿಕರು ನನ್ನ ಅರ್ಹತೆಗಿಂತ ಹೆಚ್ಚಿನ ಪ್ರೀತಿ, ಗೌರವಗಳನ್ನು ನೀಡಿದ್ದಾರೆ. ನನ್ನ ಇತಿಮಿತಿಗಳ ಪ್ರಜ್ಞೆ ಉಳಿಸಿಕೊಂಡಿರುವ ನಾನು ವಿನಮ್ರವಾಗಿ ಈ ಮಾತು ಹೇಳುತ್ತಿದ್ದೇನೆ.

ಅರೆಕೊರೆಗಳನು ಸಹಿಸಿ ಒಲುಮೆಯೊಂದನೆ ಹರಿಸಿ
ಬದುಕು ಬೆಳಕಾಗಿಸುತ ಇರುವಳಲ್ಲ,
ಅವಳಿಗರ್ಪಿತನನ್ನದೆಂಬುದೆಲ್ಲ.

"ಆಡಳಿತದಲ್ಲಿ ಕನ್ನಡವನ್ನು ಬಳಸಿ ಕನ್ನಡಕ್ಕೆ ಅಥವಾ ಕನ್ನಡ ಜನರಿಗೆ ಮಹದುಪಕಾರ ಮಾಡುತ್ತಿದ್ದೇವೆಯೆಂದು ನಾವ್ಯಾರೂ ಭಾವಿಸ ಬೇಕಾಗಿಲ್ಲ. ಇದು ಪ್ರಜಾಸತ್ತಾತ್ಮಕ ವ್ಯವಸ್ಥೆಯ ಒಂದು ಅಗತ್ಯ."

# ಶುಭೇಚ್ಛೆಯ ಹಿತವಾಕ್ಯ

ಡಾ. ವಿ. ಕೃ. ಗೋಕಾಕರು
ಬೆಂಗಳೂರು

ಶ್ರೀಮಾನ್ ಜಯತೀರ್ಥ ರಾಜಪುರೋಹಿತರು ನನಗೆ ಬಹಳ ಬೇಕಾದವರು, ನಾನು ಬಹಳ ಹತ್ತಿರದಿಂದ ನೋಡಿದವರು. ಈಚೆಗಿನ ಆಪ್ತಮಿತ್ರರಿಷ್ಟೇ ಅಲ್ಲದೆ ಈಗ 35 ವರ್ಷಗಳಿಂದ ತಮ್ಮ ಹೃದಯಸಾಮೀಪ್ಯವನ್ನು ನನಗೆ ಕೊಟ್ಟವರು.

ಅದು ಹೇಗೆ? ನನ್ನ ಭಾರತ ಸಂಚಾರ ಯುಕ್ತ ಉದ್ಯೋಗ ಪರ್ವದಲ್ಲಿ ಆಂಗ್ಲ ಭಾಷಾ ಸಾಹಿತ್ಯಗಳ ಪ್ರಾಧ್ಯಾಪಕನೆಂದು ನಾನು 1931 ರಿಂದ 1944 ಹಾಗು 1949–1952ರ ವರೆಗೆ ಮಹಾರಾಷ್ಟ್ರದಲ್ಲಿದ್ದೆ. 1946 ರಿಂದ 1949ರ ವರೆಗೆ ಗುಜರಾತವನ್ನು ಹಿಡಿದೆ. ಈ ನಡುವೆ ಒಂದು ವರ್ಷ, ಅಂದರೆ 1945–46 ರಲ್ಲಿ ಹೈದ್ರಾಬಾದಿನ ಉಸ್ಮಾನಿಯ ವಿಶ್ವವಿದ್ಯಾನಿಲಯದಲ್ಲಿದ್ದೆ. ಆದರೆ ಆ ಒಂದು ವರ್ಷದಲ್ಲಿಯೇ ಒಂದೆರಡು ಅಪೂರ್ವ ಯೋಗಗಳು ಸಂಭವಿಸಿದವು. ಆಗ ಶ್ರೀ ವೀರೇಂದ್ರ ಪಾಟೀಲರು ವಿದ್ಯಾರ್ಥಿಯಾಗಿ ಅಲ್ಲಿದ್ದರು. ಶ್ರೀ ಜಯತೀರ್ಥ ರಾಜಪುರೋಹಿತರೂ ಇದ್ದರು.

ಸಾಹಿತ್ಯದಲ್ಲಿ ವಿಶೇಷ ಲವಲವಿಕೆಯಿದ್ದ ಕೆಲವರು ವಿದ್ಯಾರ್ಥಿಗಳು ನಮ್ಮ ಮನೆಗೆ ಮೇಲಿಂದ ಮೇಲೆ ಬರತೊಡಗಿದ್ದರಿಂದ 'ಜಿಜ್ಞಾಸುಗಳ ಕೂಟ'ಎಂಬ ಸ್ನೇಹ ವರ್ತುಲ ತನ್ನಷ್ಟಕ್ಕೆ ತಾನು ನಿರ್ಮಿತವಾಯಿತು. ಆದರೆ ಅಕಸ್ಮಾತ್ ಒಂದು ವರ್ಷದ ಕೊನೆಗೆ ನಾನು ಉಸ್ಮಾನಿಯ ಬಿಟ್ಟು ವೀಸನಗರಕ್ಕೆ ನಡೆದದ್ದರಿಂದ ಅದು ಒಡನೆ ಭಗ್ನ ವರ್ತುಲವಾಗಿ ಕೆಲವರು ಕಣ್ಣೀರಿಡುವ ಪ್ರಸಂಗ ಬಂದಿತು. ಕ್ರಮೇಣ ನನ್ನ ಆಯುಷ್ಯದಲ್ಲಿ ಇದೊಂದು ಪುನಃ ಪುನಃ ಕೆರಳಿಸುವ ಸನ್ನಿವೇಶವೂ ಆಯಿತು. ಒಂದು ಹೊಸ ಹೃದಯಸ್ಪರ್ಶನ ಆ ಸಮಯದಲ್ಲಿ ಸಂಭವಿಸುತ್ತಿತ್ತು.

ಇಂಥದೊಂದು ಸಾಹಿತ್ಯ ಸಲ್ಲಾಪದ ಸಂಬಂಧದೊಳಗಿಂದ ಹಾಯ್ದು ರಾಜ ಪುರೋಹಿತರಿಗೂ ನನಗೂ ಮತ್ತೆ ಪರಸ್ಪರ ಸೇರಲು ಹಲವು ವರ್ಷಗಳು ಹಿಡಿದವು. ಆದರೆ, ನಾವು ಒಬ್ಬರನ್ನೊಬ್ಬರು ಮರೆತಿರಲಿಲ್ಲ. ಅವರ ಸಣ್ಣ ಕತೆಗಳು, ಕಾದಂಬರಿಗಳು, ತುಂಗಭದ್ರಾ ಜಲಾಶಯವನ್ನು ಕುರಿತ ಅವರ ದೃಶ್ಯಾತ್ಮಕ ಕಾವ್ಯ - ಇವೆಲ್ಲ

ಅವರು ಓರ್ವ ಖಂಬೀರ ಸಾಹಿತಿಯಾಗಿ ಬೆಳೆದು ಬಂದ ದಾರಿಯನ್ನು ಗುರುತಿಸುವ ಮೈಲುಗಲ್ಲುಗಳಾದವು. ಇಷ್ಟರಲ್ಲಿ ಅವರು ವಹಿಸಿದ ಅಧಿಕಾರಸ್ಥಾನಗಳಲ್ಲಿಯೂ ವೈವಿಧ್ಯ ಬಂದೊದಗಿತ್ತು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅವರು ಪರೀಕ್ಷಾ ನಿಯಂತ್ರಣಾಧಿಕಾರಿಗಳಾದರು. ಮುಂದೆ ಕನ್ನಡ ಸಂಸ್ಕೃತಿ ಇಲಾಖೆಯ ಮುಖ್ಯಾಧಿಕಾರಿಗಳಾದರು. ಅವರ 'ಕನ್ನಡ ತೀರ್ಪುಗಳು' ಎಂಬ ನ್ಯಾಯ ವಿಚಾರಣೆಯ ಪುಸ್ತಕ ದೇಶೀಯ ಭಾಷೆಗಳಿಗೆ ಒಂದು ಹೊಸ ದಾರಿಯನ್ನು ತುಳಿದು ತೋರಿಸಿತೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಕನ್ನಡ ಸಂಸ್ಕೃತಿ ಇಲಾಖೆಯಲ್ಲಿ ಅವರು ಅನೇಕ ಹೊಸ ವಿಕ್ರಮಗಳನ್ನು ಸ್ಥಾಪಿಸಿದರು. ತಮಗೆ ಸರಕಾರ ವಹಿಸಿಕೊಟ್ಟ ಕಾರ್ಯದೊಡನೆ ಅವರು ಸಂಪೂರ್ಣ ಸಮರಸರಾಗಿದ್ದರು.

ಇದನ್ನೆಲ್ಲ ಸಾಧಿಸಿ ಕರ್ನಾಟಕದಲ್ಲಿ ಸಾಹಿತಿಯೆಂದೂ ಕಾರ್ಯಕುಶಲರೆಂದೂ ಎರಡು ಹೆಸರು ಗಳಿಸಿದ ಜಯತೀರ್ಥರು ಈಗ ಕರ್ನಾಟಕದಲ್ಲಿ ತಮ್ಮ ಪ್ರೀತಿಯ ಭಾಗವಾದ ನಿಜಾಮ್ ಕರ್ನಾಟಕದ ಗುಲ್ಬರ್ಗಾ ವಿಶ್ವವಿದ್ಯಾನಿಲಯದ ಸ್ಥಾಪನೆಯ ಪೂರ್ವದ ಆಡಳಿತಗಾರರೆಂದು ನೇಮಿಸಲ್ಪಟ್ಟಿರುವುದು ಅವರ ಕಾರ್ಯಕುಶಲತೆಗೆ ಸಂದ ಉಚಿತ ಗೌರವವೆಂದು ಹೇಳಬಹುದು.

ರಾಜಪುರೋಹಿತರ ಕೀರ್ತಿ ಹೀಗೆಯೇ ಧವಲಾಕಾರವಾಗಿ ಹೆಚ್ಚಿ ಅವರ ಜೀವನ ಮಂಗಳಮಯ, ಸುಖಮಯ, ಶಾಂತಿಮಯವಾಗಲಿ !

"ಆಡಳಿತ ಭಾಷೆ ಇಂದು ಭಾವನಾತ್ಮಕ ವಿಚಾರವಲ್ಲ. ಅದು ವ್ಯಾವಹಾರಿಕ ಅಗತ್ಯವಾಗಿದೆ"

# ಅಖಿಲ ಕರ್ನಾಟಕವನ್ನು ತಬ್ಬಿಕೊಂಡಿರುವ ರಾಜಪುರೋಹಿತರು

**ಪ್ರೊ. ಕು. ಶಿ. ಹರಿದಾಸಭಟ್ಟ,**
**ಉಡುಪಿ**

ಜಯತೀರ್ಥ ರಾಜಪುರೋಹಿತ-ಈ ಬಾಯಿ ತುಂಬುವ ಹೆಸರನ್ನು ನೋಡಿದ್ದು, ಸುಧಾ ಪತ್ರಿಕೆಯಲ್ಲಿ. ಬಹುಮಾನಿತ ಕಾದಂಬರಿಯ ಲೇಖಕರಾದ ಈ ಸುದೀರ್ಘ ನಾಮವುಳ್ಳ ಮಹನೀಯರು ಸರ್ಕಾರಿ ಅಧಿಕಾರಿಗಳು ಎಂಬುದೂ ಅಲ್ಲೇ ಎಲ್ಲೊ ಅಂಕಿತವಾಗಿತ್ತು. ಅವರನ್ನು ಕಂಡದ್ದು ಮತ್ತೆ ಹತ್ತು ವರ್ಷಗಳ ಬಳಿಕ ಬಹುಶಃ ನಮ್ಮ ಮೈಸೂರು ವಿಶ್ವವಿದ್ಯಾನಿಲಯದ ಪರೀಕ್ಷಾಧಿಕಾರಿಗಳಾಗಿ ಬಂದಾಗಲೇ. ಅಲ್ಲಿಂದ ಜಿಲ್ಲಾ ಮುಖ್ಯಾಧಿಕಾರಿಯಾಗಿ ಅವರು ಚಿತ್ರದುರ್ಗಕ್ಕೆ ಹೋದರು. ಅಲ್ಲಿ ಕನ್ನಡದಲ್ಲೆ ತೀರ್ಪು ಬರೆದು ಸುದ್ದಿ ಮಾಡಿದರು. ಮತ್ತೆ ಕನ್ನಡ ಅಭಿವೃದ್ಧಿಯ ಖಾತೆಯ ವರಿಷ್ಠರಾಗಿ ನೇಮಕಗೊಂಡರು; ಅಲ್ಲಿ ಕೆಲಕಾಲ ಸೇವೆ ಮಾಡಿ ವಿಧಾನ ಸೌಧದಲ್ಲಿ ಉಪಕಾರ್ಯದರ್ಶಿ ಸ್ಥಾನದಲ್ಲಿ ನಿಯುಕ್ತರಾದರು. ಇದಿಷ್ಟು ನನ್ನ ತಿಳಿವಳಿಕೆಗೆ ಬಂದ ರಾಜಪುರೋಹಿತರ ಉದ್ಯೋಗ ನಕಾಶೆ. ನನ್ನ ತಿಳಿವಿಗೆ ಬಾರದವು ಇನ್ನು ಏನೇನೋ ಈ ನಡುವೆ ಇದ್ದಿರಬೇಕು. ಈ ಎಲ್ಲ ವಿಭಿನ್ನ ಉದ್ಯೋಗಗಳ ಹೊಣೆ ಹೊರಬಲ್ಲ ಒಬ್ಬ ಮನುಷ್ಯ ಎಂಥವನಿರಬೇಕು ಎಂದು ಜಯತೀರ್ಥರನ್ನು ನೋಡದೆ ಊಹಿಸುವುದು ಕಷ್ಟ. ಜೀವನದ ದಂಧೆಯಾಗಿ, ಜೀವನೋಪಾಯಕ್ಕೊಂದು ಕಸುಬಾಗಿ ಮಾತ್ರವೇ ಇದನ್ನು ಮಾಡುವವರು ಮಾಡಬಹುದು; ಆದರೆ ಜಯತೀರ್ಥರ ವ್ಯಕ್ತಿತ್ವ ಈ ದಂಧೆಗಳನ್ನೆಲ್ಲ ಮೀರಿನಿಂತದ್ದು, ಏನೇನೋ ಕರಕರೆಯ ಹೊಣೆಗಳನ್ನು ನಿರ್ವಹಿಸಬೇಕಾಗಿ ಬಂದಾಗಲೂ ತನ್ನತನವನ್ನು ಮರೆಯದ್ದು, ಎಲ್ಲೆಲ್ಲೂ ಮಾನವೀಯ ಅಂತಃಕರಣದಿಂದ ಪರಿಸರದ ನೌಕರರನ್ನು, ಸ್ನೇಹಿತರನ್ನು, ಪರಿಚಿತರನ್ನು ನಡೆಸಿಕೊಳ್ಳುವಂಥಾದ್ದು. ನೌಕರಶಾಹಿ (Bureaucracy)ಯ ಸಂಖ್ಯಾಬಲ ಅಪರಿಮಿತವಾಗಿ ವರ್ಧಿಸುತ್ತಿರುವ ಸ್ವಾತಂತ್ರ್ಯೋತ್ತರ ಯುಗದಲ್ಲಿ ಜಯತೀರ್ಥರಂಥ ಸಾವಿರಾರು ಅಧಿಕಾರಿಗಳು ದೇಶದ ತುಂಬ ಇದ್ದಾರೆ ನಿಜ; ಆದರೆ ಆಳವಾಗಿ ನೋಡ

ಹೋಗುವುದಾದರೆ ಜಯತೀರ್ಥರಂಥವರೆ ಎಲ್ಲಿದ್ದಾರೆ. — ಅವರೊಬ್ಬರಲ್ಲದೆ — ಎಂದೆನಿಸೀತು.

ಸಾಹಿತಿಗಳು, ಸಾಹಿತ್ಯದಿಂದ ಅದೇನೋ ಕಿಂಚಿತ್ ಲಾಭ ಪಡೆವವರು — 'ಕಿಂಚಿತ್' ಅಲ್ಲದೆ ಭಾರೀ ಲಾಭಕ್ಕೆ ಸಾಹಿತ್ಯ ಕ್ಷೇತ್ರದಲ್ಲಿ ಸ್ಥಾನ ಇರುವುದಿಲ್ಲವಷ್ಟೆ— ಅಥವಾ ಸಾಹಿತ್ಯದಲ್ಲಿ ಪಟ್ಟಭದ್ರಹಿತಾಸಕ್ತಿಯುಳ್ಳವರು, ಅರ್ಥಾತ್ ಕಾರ್ಯನಿರತ ಸಾಹಿತಿಗಳು 'ಕನ್ನಡ' 'ಕನ್ನಡ' ಎಂದು ಬಡಿದುಕೊಂಡರೆ ತಮ್ಮ ಪುಸ್ತಕದ ಮಾರಾಟಕ್ಕೋಸ್ಕರ ಒದ್ದಾಡುತ್ತಿದ್ದಾರೆಂದು ಕನಿಕರಿಸಬಹುದು. ಆದರೆ ಅಧಿಕಾರಿಗಳು 'ಕನ್ನಡ'ವನ್ನು ಪಟ್ಟಾಗಿ ಹಿಡಿದು ಕೂರುವುದು ಅಪರೂಪ. ಸಾಮಾನ್ಯರನ್ನು, ನೀವು ಕನ್ನಡ ಅಭಿವೃದ್ಧಿ ಇಲಾಖೆಗೇ ಹಾಕಿದರೂ ಅವರದನ್ನು ಗ್ರಾಮಾಭಿವೃದ್ಧಿ, ನೀರಾವರಿ, ಹೈನಾಭಿವೃದ್ಧಿಯ ಹಾಗೆ ಏನೋ ಒಂದು ದಸ್ತಾವೇಜು, ದಾಖಲೆ ಇತ್ಯಾದಿಗಳನ್ನು ಪೇರಿಸುವ ಕೆಲಸ ಎಂದಷ್ಟೇ ತಿಳಿದಾರು. ಆದರೆ ರಾಜಪುರೋಹಿತ ಅಂಥವರಿಗೆ ಅವರು ಕೈಕೊಂಡ ಹುದ್ದೆಗಳೆಲ್ಲವೂ ಕನ್ನಡದ ಅಭಿವೃದ್ಧಿ ಇಲಾಖೆಗೆ ಸೇರಿದವುಗಳೇ ಎನಿಸುತ್ತದೆ. ಕನ್ನಡದಲ್ಲಿ ಒಳ್ಳೆಯ ಕಾದಂಬರಿ ಮಾತ್ರವೇ ಅಲ್ಲ, ಒಳ್ಳೆಯ ತೀರ್ಪುಗಳನ್ನೂ ಬರೆಯಬಹುದೆಂದು ತೋರಿಸಿಕೊಟ್ಟವರು ಅವರು; ಅಧಿಕಾರದ ಚಿಂತೆಗಳು ಲೇಖನ ವ್ಯವಸಾಯಕ್ಕೆ ಮುಳುವಾಗದಂತೆ ನೋಡಿಕೊಂಡವರು. ಎಲ್ಲಾದರು ಇರು, ಎಂತಾದರು ಇರು, ಎಲ್ಲೆಲ್ಲೂ ನೀ ಕನ್ನಡವಾಗಿರು' ಎಂಬ ಕುವೆಂಪು ಮಂತ್ರಕ್ಕೆ ಸಮನಾಗಿ ಬಾಳುತ್ತಿರುವವರು.

ಕನ್ನಡದ ಕೆಲಸವನ್ನು ಇಲ್ಲಿ ಮಾತ್ರವೇ ಅಲ್ಲ ದಿಲ್ಲಿಯಲ್ಲೂ ಮಾಡಲು ಶಕ್ತರಾದವರು. ನಮಗೆ ಬೇಕೆಂದೆನಿಸುವ ಕಾಲಕ್ಕೆ ಜಯತೀರ್ಥರು ಸರ್ಕಾರಕ್ಕೆ ನೆನಪು ಬರಬೇಕಾಗಿತ್ತು. ದಿಲ್ಲಿಯವರು ನಾಚುವಂಥ ಹಿಂದೂಸ್ಥಾನಿಯನ್ನು ಆಡಬಲ್ಲ ಜಯತೀರ್ಥರು ದಿಲ್ಲಿಯೊಡನೆ ವಾದ ಬೇಕಿದ್ದರೆ ವಿವಾದವನ್ನೂ ಸಂಬಾಳಿಸಿಕೊಂಡು ಹೋಗಬಲ್ಲರು. ಜನತಾ ಸರ್ಕಾರ ರಚಿತವಾದ ಹೊಸದರಲ್ಲಿ ದಿಲ್ಲಿಯಲ್ಲೊಂದು ಎಲ್ಲಾ ರಾಜ್ಯಗಳ ಶಿಕ್ಷಣ ಸಚಿವರ ಸಮ್ಮೇಳನದಲ್ಲಿ ಚರ್ಚಾ ಮಾಧ್ಯಮ ಇಂಗ್ಲೀಷ್ ಆಗಿರಲಿಲ್ಲ— ಹಿಂದಿ ಆಗಿತ್ತಂತೆ. ಅಂತರರಾಜ್ಯ ಮಾಧ್ಯಮವೆಂದು ದಾಕ್ಷಿಣಾತ್ಯರು ಅಪೇಕ್ಷಿಸುವ ಇಂಗ್ಲೀಷ್ ಭಾಷೆಯನ್ನು ಔತ್ತರೇಯರು ಈಗಾಗಲೇ ಆ ಪೀಠದಿಂದ ಕೆಳಗೆ ತಳ್ಳಿದ್ದಾರೆ. ಇಂದು ದಿಲ್ಲಿಯ ಮಂತ್ರಾಲಯ, ವಿಜ್ಞಾನ ಭವನ, ಉದ್ಯೋಗ ಭವನ ಇತ್ಯಾದಿ ಭವನಗಳ ಗೋಡೆಗಳಲ್ಲಿ ಅನುರಣಿಸುತ್ತಿರುವುದು ಇಂಗ್ಲೀಷ್ ಅಲ್ಲ —ಹಿಂದೀ. ಇದು ಇನ್ನಷ್ಟು ಬಿಗಿಯಾಗುವುದಲ್ಲದೆ, ಸಡಿಲವಾಗುವ ಭರವಸೆಯಿಲ್ಲವಾದ್ದರಿಂದ ದಕ್ಷಿಣದ ರಾಜ್ಯಗಳು ನಿರ್ದಾಕ್ಷಿಣ್ಯವಾಗಿ ಹಿಂದಿಯಲ್ಲಿ ಠೇಂಕರಿಸಲು, ಹೂಂಕರಿಸಲು, 'ಜೀ' ಪದದ ಪೂರ್ವದಲ್ಲೋ ಪಶ್ಚಿಮದಲ್ಲೋ 'ಹಾಂ' ಕರಿಸಲು ಚೆನ್ನಾಗಿ ಆತ್ಮವಿಶ್ವಾಸದಿಂದ ಹಿಂದಿಯನ್ನೇ ವಾಪರಿಸುವ ಅಧಿಕಾರಿಗಳನ್ನು ಬಳಸ

ಬೇಕು ಎಂದು ನನ್ನ ಮತ. ಕೇಂದ್ರ ಮತ್ತು ರಾಜ್ಯಗಳ ಸಂಬಂಧ ಅರ್ಥಪೂರ್ಣ ವಾಗಿ ನಡೆಯಬೇಕಾದರೆ ಹಿಂದೀ ಜ್ಞಾನ ಒಂದು ಆಯುಧ. ಈ ವಿಷಯದಲ್ಲಿ ತಮಿಳ್ನಾಡಿನದು ಅವಾಸ್ತವ ನಿಲುವು—ಕರ್ನಾಟಕದ್ದೇ ಸರಿ. ಇಂಗ್ಲೀಷ್ ಇರಲಿ, ಹಿಂದಿಯೂ ಬರಲಿ. ಅರ್ಧಂಬರ್ಧ ಅಲ್ಲ, ಸಾಕಷ್ಟು ಜನ ಅಧಿಕಾರಿಗಳಿಗೆ ಸಾಕಷ್ಟು ಹಿಂದಿ ಕಲಿಸಬೇಕು. ಈ ನಡುವೆ ಕಲಿಸದೆಯೇ ಹಿಂದಿ ಬಲ್ಲಂಥವರನ್ನು ಬಳಸ ಬೇಕು. ಇಂಥ ಬಳಕೆಗೆ, ಯಾವ ಉನ್ನತ ಮಟ್ಟದಲ್ಲಾದರೂ ವ್ಯವಹರಿಸುವುದಕ್ಕೆ, ಜಯತೀರ್ಥರಂಥವರು ಅನುಕೂಲವಲ್ಲವೇ ? ಇದೇನೂ ಸರ್ಕಾರಕ್ಕೆ ನಾನು ಶಿಫಾ ರಸ್ಸು ಮಾಡಬೇಕಾಗಿರಲಿಲ್ಲ. ಆದರೆ ಅವರಾಡುವ ಜೋರಾದ ಹಿಂದಿಯನ್ನು ಕೇಳಿದ ನನಗೆ—ಪುಸ್ತಕ ಹಿಂದೀಯಲ್ಲಿ ಸಂವಾದ ಮಾಡಿ ನನಗೆ ನಾನೇ ನಗುವಂಥವನಿಗೆ— ಅನಿಸಿದ್ದನ್ನಷ್ಟೇ ಹೇಳಿದೆನೆಂದು ನನ್ನ ನಂಬಿಕೆ.

ಜಯತೀರ್ಥರಿಗೂ ನನಗೂ ಹೆಚ್ಚಿನ ಸರ್ಕಾರಿ ಅಧಿಕಾರಿಗಳಿಗೂ ನನಗೂ ಇರು ವಂಥ ರೀತಿಯದೇ ಸಂಬಂಧ ಆಗುತ್ತಿತ್ತು, ಮುಟ್ಟಿ ಓಡುವ 'ಟ್ಯಾಂಜೆನ್ಸಿಯಲ್' ಬಗೆಯ ಸಂಬಂಧವಷ್ಟೇ ಇರುತ್ತಿತ್ತು; ಅವರು ಸಾಹಿತ್ಯಕಾರರಲ್ಲವಾಗಿದ್ದರೆ. ಅವರು ಪರೀಕ್ಷಾಧಿಕಾರಿಗಳಾಗಿ ಮೈಸೂರಿಗೆ ಬಂದ ವೇಳೆ ನನಗೆ ಸ್ವಂತ ಪರೀಕ್ಷಕನಾಗುವುದ ರಲ್ಲಿ ಅನಾಸಕ್ತಿ ಉಂಟಾಗಿತ್ತು. ನೀರಸವಾದ ಮತ್ತು ಸುಲಭವಾದ ಮೌಲ್ಯಾಂಕನದ ವೃತ್ತಿಗೆ ವಿಮುಖನಾಗಿ ಬೇರೆ ಮೌಲ್ಯಗಳನ್ನರಸಿಕೊಂಡು ಹೊರಟಿದ್ದೆನಾಗಿ ಪರೀ ಕ್ಷಾರ್ಥ ವರ್ಷಕ್ಕೆರಡು ಬಾರಿ ಮೈಸೂರು ಯಾತ್ರೆ ಮಾಡಿ ಪರೀಕ್ಷೆಯ ಪ್ರಶ್ನೆ ಪತ್ರಿಕೆ ಗಳನ್ನು ಹೊತ್ತು ತರುವ ಜವಾಬ್ದಾರಿ ಕರ್ತವ್ಯವನ್ನಷ್ಟೇ ನಾನು ನಿರ್ವಹಿಸುತ್ತಿದ್ದೆ. ಆಗ ಜಯತೀರ್ಥರ ದರ್ಶನ ಮಾಡಲೇಬೇಕಾಗಿತ್ತು. ಪರೀಕ್ಷೆಯ ಬಗ್ಗೆ ನಾಲ್ಕುನಾಲ್ಕು ಮಾತು ಆದ ಬಳಿಕ ನಮ್ಮ ಸಂವಾದ ಎಲ್ಲ ವಿಷಯಾಂತರವೇ. ಕೆಲಕಾಲ ವಿ. ವಿ. ನಿಲಯದ ಪರೀಕ್ಷಾ ಭಾರವನ್ನು ಹೊತ್ತು ರಾಜಪುರೋಹಿತರು ಆಮೇಲೆ ಮರಳಿ ರೆವಿನ್ಯೂ ಇಲಾಖೆ ಸೇರಿ ಪಾರಾದರು. ಅವರು ಪರೀಕ್ಷಾಧಿಕಾರಿಯ ಪೀಠ ಬಿಟ್ಟೇ ಳುವ ಸುಮಾರಿಗೆ ಕುಲಪತಿ ದೇ. ಜ. ಗೌ. ನನ್ನನ್ನು ಆ ಪೀಠಕ್ಕೆ ಖಾಸಗಿಯಲ್ಲಿ ಆಹ್ವಾನಿಸಿದರೆಂದು ನನ್ನ ನೆನಪು. ಈ ಸೂಚನೆ ಬಂದ ಕೂಡಲೇ ನನಗೆ ಗಟ್ಟಿಯಾಗಿ ನಗಬೇಕೆಂದೆನಿಸಿತ್ತು; ಆದರೆ ನಾನು ಕುಲಪತಿಗಳ ಸಮ್ಮುಖದಲ್ಲಿದ್ದುದರಿಂದ ಹಾಗೆ ಮಾಡಲಿಲ್ಲ. ಅವರನ್ನೇ ನಗಿಸಿದೆ: ಸ್ವಾಮೀ ಈ ಅಖಂಡ ಕರ್ನಾಟಕದಲ್ಲಿ ಈ ಪೀಠ ದಲ್ಲಿ ಕೂರಲು ಯಾರಾದರೂ ಸಖ್ತ ಅಯೋಗ್ಯನೊಬ್ಬನಿದ್ದರೆ ಅದು ನಾನೇ. ಪರೀಕ್ಷೆಗೆ ಕೂತು ತಕ್ಕಮಟ್ಟಿಗೆ ಚೆನ್ನಾಗಿ ಪಾಸಾಗುವ ಯೋಗ್ಯತೆಯುಂಟೇ ಹೊರತು, ನನಗೆ ವಿದ್ಯಾರ್ಥಿ ಸಂದೋಹವನ್ನು ಪೀಡಿಸುವ ಮುಖ್ಯ ಪರೀಕ್ಷಕನಾಗಲು ಯೋಗ್ಯತೆ ಇಲ್ಲ; ಅಭಿರುಚಿಯೂ ಇಲ್ಲ ಎಂದೆ. ಸ್ವಂತ ಅಯೋಗ್ಯತೆ ಏನಿದ್ದರೂ ನಮ್ಮ ವಿ. ವಿ. ನಿಲಯದ ಪರೀಕ್ಷೆಗಳನ್ನು ಯಾರು ನಡೆಸುತ್ತಾನೋ ಅಂಥ ಮುಖ್ಯ ಅಧಿ

ಕಾರಿ ಬಲು ದೊಡ್ಡ ಭ್ರಮೆಯಲ್ಲಿರುತ್ತಾನೆಂದು ನನ್ನ ನಂಬಿಕೆ. ಪರೀಕ್ಷೆಗಳೇ ಅವನನ್ನು ನಡೆಸುತ್ತವಲ್ಲದೆ ಅವನು ನಿಜವಾದ ಕಂಟ್ರೋಲರ್ ಆಗಲು ಈ ದುಷ್ಕಾಲದಲ್ಲಿ ಸಾಧ್ಯವಿಲ್ಲ. ವಿದ್ಯಾರ್ಥಿಗಳೇ ಪರೀಕ್ಷಾದಿ ನಿರ್ಣಯ ಮಾಡುವ ಸಂದರ್ಭ ಬಂದಿರ ಲಾಗಿ 'ಪರೀಕ್ಷಾಧಿಕಾರಿ' ಎಂಬುದು ಬರಿಯ ಒಣ ಬಿರುದಾಗಿ ಬಿಟ್ಟಿದೆ. ಅದರಲ್ಲೂ ಮೈಸೂರಿನ ಪರೀಕ್ಷಾ ನಿಯಂತ್ರಣ ಪೀಠ ಎಂತು ಪ್ರಾಧ್ಯಾಪಕರುಗಳನ್ನೂ,ಐ.ಎ.ಎಸ್. ಅಧಿಕಾರಿಗಳನ್ನೂ ಬಲಿ ತೆಗೆದುಕೊಂಡಿದೆ. ಏನಾದರೂ ಪೂರ್ವೋದ್ಯೋಗದಲ್ಲಿ ಕೀರ್ತಿಗಳಿಸಿದ್ದಿದ್ದರೆ ಅದನ್ನು ಆತ ಇಲ್ಲಿ ಬಿಟ್ಟು ಹೋಗಬಹುದಾಗಿದೆ. ಸಾಕಷ್ಟು ಬೇಗನೇ ಹೋದರೆ ಅಲ್ಪ ಸ್ವಲ್ಪ ಸಂಗ್ರಹವಾದರೂ ಉಳಿದೀತು. ಜಯತೀರ್ಥ ರಾಜಪುರೋಹಿತರು ಇಂಥ ಕೀರ್ತಿವಧಾಸ್ಥಾನದಲ್ಲೂ ಸಾಕಷ್ಟು ಕಾಲ ಇದ್ದೇ ಅಪ ಕೀರ್ತಿಗಳಿಸದೆ ಹೋದದ್ದೇ ದೊಡ್ಡ ಸಂಗತಿ ಎಂದು ಆ ದಿನಗಳನ್ನು ಸ್ಮರಿಸಿದರೆ ನನಗ ನಿಸುತ್ತದೆ. ಅವರು ಮಾತ್ರ ಇಲ್ಲಿ ಬರದೆ ಹೋಗಿದ್ದರೆ ನನಗೆ ಮಿತ್ರಲಾಭ ಆಗು ತ್ತಿರಲಿಲ್ಲ ಎಂಬುದರಿಂದ ನಾನೊಲ್ಲದ, ಒಲಿಯದ ಆ ಸ್ಥಾನಕ್ಕೂ ನಾನು ಕೃತಜ್ಞತೆ ಸಲ್ಲಿಸುತ್ತೇನೆ.

ಜಯತೀರ್ಥ ರಾಜಪುರೋಹಿತರ ಮಾತಿನಲ್ಲಿ ನಾನು ಕಂಡ ಸೌಜನ್ಯದ ಸೊಗಸು ಸುಲಭವಾದದ್ದು. ಮಾತು ಹಿತಮಿತ, ಅನಾವಶ್ಯಕವಾದುದಲ್ಲ. ಎಳೆಸಿದಾಗ ಹಿಂದೂಸ್ತಾನಿಯ ಹೇ ಹೈಗಳ ಪಡೆಸುತನವನ್ನು ಪ್ರಕಟಿಸಬಲ್ಲರಾದರೂ, ಕನ್ನಡಕ್ಕೆ ಬಂದರೆ ಎಲ್ಲ ಒನಪು, ಒಲವು ಅಧಿಕಾರದ ರೇಖೆಯನ್ನು ಮೀರಿದ ಮಿತ್ರತ್ವದ ಭಾವಗಳನ್ನು ನೀಗಿಸಿಕೊಳ್ಳುವ ಕಲೆಗಾರಿಕೆಯೂ ಅವರಿಗೆ ಗೊತ್ತಿದೆ. ಅಧಿಕಾರ ಉಳಿಯುವಂಥದಲ್ಲ—ಐವತ್ತೈದರ ಮೇಲೂ ಶಾಶ್ವತವಾದದ್ದು ಮಿತ್ರತ್ವ, ಸ್ನೇಹ ಎಂಬುದನ್ನು ಅವರು ಬಲ್ಲರು. ಜಿಲ್ಲೆ ಜಿಲ್ಲೆಗಳ ಸಂಚಾರ ಮಾಡುವ ರಾಜಪುರೋ ಹಿತರಿಗೆ ದೊಡ್ಡ ಮಿತ್ರವೃಂದ ಇರಬೇಕೆಂದು ನನ್ನ ಊಹೆ. ನಾನಂತೂ ಅವರು ಎಲ್ಲಿದ್ದರೂ ಪೀಡೆ ಕೊಟ್ಟವನೇ; ಅದನ್ನವರು ಸಹಿಸಿಕೊಂಡಿದ್ದರಿಂದ ಮಾತ್ರ ಮತ್ತೆ ಅವರ ನೆರವು ಕೋರಿದವನೇ. ಕೈಯಲ್ಲಿ ಬೆರಳಿರುವಷ್ಟೆ ಸಾರ್ವಜನಿಕ ಕೆಲಸಗಳನ್ನು ಹಮ್ಮಿಕೊಳ್ಳುವ ನನ್ನಂಥ ಉಪಾಧ್ಯಾಪಿಗಳಿಗೆ ಕಛೇರಿಯ ಕಂಬಗಳ ನಡುವೆ ಒಬ್ಬ ಮನುಷ್ಯ ಸಿಕ್ಕಿದರೆ ಅದೇ ದೊಡ್ಡ ಭಾಗ್ಯನಿಧಿ ಆಗಿಬಿಡುತ್ತದೆ.

ನಿರ್ಭಯವಾಗಿ ನಾನು ಮಾತನಾಡುವ, ನೆರವು ಕೋರಿ ಪಡೆಯುವ ಉನ್ನತಾ ಧಿಕಾರಿಗಳಲ್ಲಿ—ಅಂಥ ವಿರಳರಲ್ಲಿ—ಜಯತೀರ್ಥರು ಒಬ್ಬರು. ಅವರ ಮುಂದೆ ಕೂತಾಗ, ಮಾತನಾಡುವಾಗ ಅವರು ಅಧಿಕಾರಿಗಳೆಂಬುದೂ ಮರವೇ ಆಗಿರುತ್ತದೆ. ಹೀಗೆ ಮೈ ಮರೆಸಬಲ್ಲ ಗುಣ ಯಾವುದೋ ಸಂಸ್ಕೃತಿ ಫಲವಲ್ಲದೆ ಮತ್ತೇನು? ಜಯತೀರ್ಥರ ಸೇವಾವಧಿ ಇನ್ನೂ ಇದೆ. ಅಷ್ಟರಲ್ಲಿ ಅವರು ಇನ್ನೂ ಹೊಸ ಆಯಾಮಗಳನ್ನು ಬದುಕಿಗೆ ಜೋಡಿಸಿಕೊಳ್ಳಬಹುದು; ಹೊಸ ಮುಖಗಳನ್ನು

ತೋರಬಹುದು. ಏನಿದ್ದರೂ ಅದು ಕನ್ನಡದ ಶ್ರೇಯಸ್ಸಿಗೆ ಕಾರಣವಾಗುತ್ತದೆ ಎಂಬ ವಿಶ್ವಾಸ ನನಗಿದೆ. ಸಾಹಿತ್ಯದಿಂದಲೂ, ಅಧಿಕಾರದ ವ್ಯಾಪ್ತಿಯಿಂದಲೂ, ಅಖಿಲ ಕರ್ನಾಟಕವನ್ನು ತಬ್ಬಿಕೊಂಡಿರುವ ರಾಜಪುರೋಹಿತರ ಕನಸುಗಳು ನನಸಾಗಲಿ, ಅವರಿಂದ ಇನ್ನಷ್ಟು ಕನ್ನಡದ ಕೆಲಸಗಳು ಸಾಗಲಿ ಎಂದು ಹಾರೈಸಿ ಈ ಲೇಖನ ಮುಗಿಸುತ್ತೇನೆ.

"ಆಡಳಿತ ಭಾಷೆಯ ವಿಚಾರವೆಂದರೆ ಕರ್ನಾಟಕದ ಜನಸಾಮಾನ್ಯರಿಗಾಗಿ ಸೀಮಿತ ಕ್ಷೇತ್ರದಲ್ಲಿ ಕನ್ನಡ ಬಳಸುವ ವಿಚಾರ ಅಷ್ಟೆ. ರಾಷ್ಟ್ರೀಯ ಏಕತೆಗೂ ಸಂಪರ್ಕ ಭಾಷೆಯ ಪ್ರಶ್ನೆಗೂ ಇದಕ್ಕೂ ಸಂಬಂಧವಿಲ್ಲ."

"ಆಡಳಿತ ಭಾಷೆಯ ಪ್ರಶ್ನೆ ಕೇವಲ ನೂರಾರು ಜನ ಅಧಿಕಾರಿಗಳ ಅಥವಾ ಸಾವಿರಾರು ಜನ ಕೆಲಸ ಹುಡುಕಿಕೊಂಡು ಬರುವವರ ಪ್ರಶ್ನೆಯಲ್ಲ. ಇದು ಕೋಟಿ ಕೋಟಿ ಕನ್ನಡ ಜನಸಾಮಾನ್ಯರ ಅನುಕೂಲದ ಪ್ರಶ್ನೆ."

# ನಾ ಕಂಡ ಜಯತೀರ್ಥರು

ಎನ್ಕೆ. ಕುಲಕರ್ಣಿ
ಧಾರವಾಡ

ಐ. ಎ. ಎಸ್. ಅಧಿಕಾರಿಗಳು ಇಷ್ಟು ಸಾದಾ ಸೀದಾ ಇರಬಹುದೆ ? ಹೌದು ಇರಬಹುದು. ನನ್ನೊಳಗೆ ನಾನೆ ರಾಜಿ ಮಾಡಿಕೊಂಡೆ ಜಯತೀರ್ಥರ ಪ್ರಥಮ ಪರಿಚಯದೊಂದಿಗೆ.

ಶ್ರೀ ಮಾಸ್ತಿಯವರು ಡೆಪ್ಯೂಟಿ ಕಮೀಷನರರೆಂದು ಕನ್ನಡಿಗರ ಆಸ್ತಿಯೆನಿಸಲಿಲ್ಲ, ಅದ್ವಿತೀಯ ಕತೆಗಾರರೆಂದು, ಶ್ರೇಷ್ಠ ಕವಿಗಳೆಂದು, ದಾರ್ಶನಿಕರೆಂದು. ಡೆಪ್ಯೂಟಿ ಕಮಿಷನರರು ಸಾಹಿತಿಗಳಾಗಲಿಕ್ಕೆ ಸಾಧ್ಯವೆ ? ಧಾರವಾಡಕ್ಕೆ ಹೆಚ್ಚಾಗಿ ಬಿಳಿಯರೂ, ಕನ್ನಡೇತರರೂ ಇವರೇ ಕಲೆಕ್ಟರರಾಗಿ ಕಾರಭಾರ ನಡೆಸುತ್ತಿದ್ದರಿಂದ, ಕನ್ನಡ ಸಾಹಿತಿಗಳಿರಲಿ ಕನ್ನಡ ಮಾತನಾಡಲೂ ಸಾಧ್ಯವಿಲ್ಲವೆಂಬ ಒಂದು ಪ್ರತೀತಿ ಇತ್ತು. ಕಲೆಕ್ಟರರು ಕನ್ನಡ ಮಾತನಾಡುವುದೆಂದರೆ ಬಹಳ ಚೀಪ್ ಎಂಬ ಭಾವನೆ ಇತ್ತು. ಆದರೆ ಶ್ರೀ ಸಿದ್ಧಯ್ಯ ಪುರಾಣಿಕ, ಶ್ರೀ ಜಯತೀರ್ಥ ರಾಜಪುರೋಹಿತರಂಥವರು ಐ. ಎ. ಎಸ್. ಅಧಿಕಾರಿಗಳಾಗಿ ಡೆಪ್ಯೂಟಿ ಕಮಿಷನರರಾಗಿ ಬಂದ ಮೇಲೆ ಬಡ ಕನ್ನಡ ಸಾಹಿತಿಗಳಿಗೆ ಒಂದಿಷ್ಟು ಜಂಭ. ಸ್ವತಃ ಸಾಹಿತಿ ಇರುವುದಿರಲಿ ಸಾಹಿತ್ಯದಲ್ಲಿ, ಸಂಸ್ಕೃತಿಯಲ್ಲಿ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಆಸಕ್ತಿಯುಳ್ಳವರು ದೊರೆತರೂ ಸಾಕು ಕನ್ನಡ ಸಾಹಿತಿಗಳಿಗೆ ಕೋಡು ಮೂಡಿದಂತಾಗುತ್ತದೆ.

ನಮ್ಮ ಜಯತೀರ್ಥರು ಕನ್ನಡ—ಕನ್ನಡವೆಂದೇ ಉಸಿರಾಡಿಸುವವರು. ಅವರ ಉಸಿರು ಕನ್ನಡ, ಅವರ ಪ್ರಾಣ ಕನ್ನಡ, ಅವರ ಜೀವ ಕನ್ನಡ. ಸರ್ಕಾರಿ ಆಡಳಿತದಲ್ಲಿ ಕನ್ನಡವನ್ನು ಬಳಕೆಯಲ್ಲಿ ತರುವುದಕ್ಕೆ ನೋಂಪಿಯನ್ನೆ ಹೊತ್ತು ನಿಂತವರು. ನ್ಯಾಯತೀರ್ಪುಗಳನ್ನು ಕನ್ನಡದಲ್ಲೇ ಬರೆಯುವಂತೆ ಅವರು ನ್ಯಾಯಾಧೀಶರನ್ನು ಕೈ ಜೋಡಿಸಿ ಕೇಳಿಕೊಂಡರು; ಮನವೊಲಿಸಿ ಬೇಡಿಕೊಂಡರು. ಇನ್‌ಸೆಂಟಿವ್ ನೀಡಿದರು, 'ಕೋರ್ಸ್' ಮಾಡಿದರು. "ಹುಚ್ಚು ಹಿಡಿಯಿತೆನಗೆ ಅಚ್ಯುತನ ನಾಮ" ವೆಂಬ ಎಂದು ದಾಸರು ಹೇಳುವಂತೆ ರಾಜಪುರೋಹಿತರಿಗೆ ನಿಜವಾಗಿಯೂ ಕನ್ನಡದ ಹುಚ್ಚು. ಇಂಥ ಹುಚ್ಚು ಹಿಡಿದಾಗಲೆ ಸರ್ಕಾರದ ಘೋಷಣೆ ಹೊರ ಬೀಳುತ್ತದೆ

ಕನ್ನಡವು ಆಡಳಿತ ಭಾಷೆ ಎಂದು. ವಿಧಾನ ಸೌಧದ ಮೇಲಿಂದ ಕನ್ನಡ ಕುಲಕ್ಕೆಲ್ಲ, ಮೂರು ಕೋಟಿ ಜನಕ್ಕೆಲ್ಲಾ ಕಿವಿ ಗಡಚಿಕ್ಕುವಂತೆ ತನು ಕನ್ನಡ, ಮನ ಕನ್ನಡ. ನುಡಿ ಕನ್ನಡ, ನಡೆ ಕನ್ನಡ ಎಂದು ಘೋಷಿಸಿದರು. ವಿಧಾನ ಸೌಧದ ಬೆರಳಚ್ಚುಗಳು "ಕನ್ನಡ ಕನ್ನಡ" ಎಂದು ಟಂಕನಾದವನ್ನು ನುಡಿಸುತ್ತಿರುವವರೆಗೂ ಜಯತೀರ್ಥರ ಹೆಸರು ಜಯಜಯಕಾರದೊಂದಿಗೆ ಮೊಳಗುತ್ತಿರುವುದು.

ಇದೊಂದೆ ಸಾಹಸದ ಮೈಲುಗಲ್ಲು ಸಾಕು ಜಯತೀರ್ಥ ರಾಜಪುರೋಹಿತರ ಸಾಧನೆಯನ್ನು ಶ್ರುತಪಡಿಸಲಿಕ್ಕೆ. ಇದರೊಂದಿಗೆ ಅವರು ಸ್ವತಃ ಸಾಹಿತಿ; ಉಚ್ಚ ಮಟ್ಟದ ಸಾಹಿತಿ. ಪಾರವ್ವನ ಪಂಚಾಯಿತಿ, ಸುಳಿಗಾಳಿ, ಜೊಹರಾದಂಥ ಬಹು ಮಾನ ವಿಜೇತ ಗದ್ಯ ಕೃತಿಗಳಲ್ಲಿ ಪಳಗಿದ ಪ್ರತಿಭೆ ಪದ್ಯಕಾವ್ಯದಲ್ಲಿಯೂ ಇಣಿಕಿದೆ. ಅವರ 'ತುಂಗೆಯುಂಗಳ'ದ ಶೈಲಿ ಮೋಹಕವಾಗಿದೆ. "ತಿಂಗಳಿನ ಕಾಂತಿ, ಅರುಣನೇ ಕಾಂತ, ಚೇತನದ ಚಿಲಿಪಿಲಿ, ಸುಷುಪ್ತಿಯ ಹೊದರಿನಲಿ ಪವಡಿಸಿದ ಶಾಂತಿ," ಓ! ಏನು ಸುಂದರ ರೂಪಕ. ಸಾಲು ಸಾಲಿಗೂ ಇಂಥವೇ ರೂಪಕಗಳನ್ನು ಚೆಲ್ಲಿದ್ದಾರೆ. ಅವರ ಕಾದಂಬರಿ, ಕತೆಗಳ ರಿಯಲಿಸಂನಲ್ಲಿ ಶೈಲಿ ರಜಾಕಾರರಷ್ಟೇ ಒರಟೆನ್ನುವಷ್ಟು ವಾಸ್ತವವಾಗಿದ್ದರೆ, ಅವರ ಕಾವ್ಯದಲ್ಲಿ ಪ್ರಸಾದ ಗುಣ ಎನ್ನುವದು 'ಮಜ್ಜಿಗೆ ಯೊಳಗಿನ ಬೆಣ್ಣೆಯಂತೆ' ಉದಿಸಿ ಬರುತ್ತದೆ. 'ಕುಮಾರ ವ್ಯಾಸ' ಅಷ್ಟೇ ಮಾರ್ಮಿಕ ವಾಗಿದೆ. ಎಷ್ಟು ಸ್ಫೂರ್ತಿಪ್ರದ?

'ತುಂಗೆಯುಂಗಳದಲ್ಲಿ' ಜಯತೀರ್ಥರ ಕಾವ್ಯ ಹೃದಯಕ್ಕೆ ಕನ್ನಡಿ ಹಿಡಿಯುವ ಇನ್ನೊಂದು ಅಪರೂಪ ಕೃತಿ. ಸಾಹಿತಿ ಜಯತೀರ್ಥ ರಾಜಪುರೋಹಿತರು ಜನತೆಯ ಹೃದಯವನ್ನೂ ಜನರ ಕಷ್ಟನಿಷ್ಠುರಗಳನ್ನೂ ತಮ್ಮ ಸಂವೇದನಶೀಲತೆಯಿಂದ ಆಳ ವಾಗಿ ಗ್ರಹಿಸಬಲ್ಲವರು. ಈ ಒಂದು ಗುಣವು ಅವರ ಅಧಿಕಾರ ಕ್ಷೇತ್ರದಲ್ಲಿ ಜನ ಪ್ರಿಯತೆಯನ್ನೂ ಒದಗಿಸಲು ಕಾರಣವಾಗಿದೆ. ಅವರು ಡೆಪ್ಯೂಟಿ ಕಮೀಷನರ್ ಆಗಿದ್ದಾಗ ಜನಸಾಮಾನ್ಯರೊಡನೆಯೇ ಅವರ ಸಂಪರ್ಕ. ಆ ಕವಿಹೃದಯ ಜನ ಸಾಮಾನ್ಯರೊಡನೆ ಸಹಾನುಭೂತಿಯನ್ನೊದಗಿಸುವಂತಾಗಿತ್ತಲ್ಲದೆ, ಅಧಿಕಾರದ ಬಿರುಸು ತನ್ನ ಮೇಲುಗೈ ತೋರಲಿಲ್ಲ.

ಕನ್ನಡ ಸಂಸ್ಕೃತಿ ಇಲಾಖೆಯು ನಿರ್ದೇಶಕರಾದ ಮೇಲೆ ಕನ್ನಡ ಕವಿ-ಕಲಾವಿದರ ಕೈವಾರಿಗಳಾಗಿ ಅನೇಕ ಕಲ್ಯಾಣಕಾರಿ ಯೋಜನೆಗಳ ಪುರಸ್ಕರ್ತರೆನಿಸಿದರು. ಕಾರಣ ಪುರುಷರೆನಿಸಿದರು. ಇವರೊಂದಿಗೆ ಶ್ರೀ ಅನಿರುದ್ಧ ದೇಸಾಯಿ ಅವರೂ ಹಗಲಿಗೆ ಹಗಲು ಹಚ್ಚಿ ದುಡಿದರು. ಮುಂದೆ ದೇಸಾಯಿಯವರೇ ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ, ಜಯತೀರ್ಥರು ಶಿಕ್ಷಣ ಇಲಾಖೆಯ ಉಪಕಾರ್ಯದರ್ಶಿಯಾಗಿ ಜನತಾ ಉಪಕಾರಿಯಾಗಿ ಕಾರ್ಯಮಾಡುತ್ತಿದ್ದಾರೆ. ಶ್ರೀ ಅನಿರುದ್ಧ ದೇಸಾಯಿ ಹಾಗೂ ಶ್ರೀ ಜಯತೀರ್ಥ ರಾಜಪುರೋಹಿತರಿಂದಾಗಿ ಶಿಕ್ಷಣ-ಸಂಸ್ಕೃತಿ ಇಲಾಖೆಗಳಲ್ಲಿ

ಹೊಸದೊಂದು ಚೈತನ್ಯ, ಹೊಸ ಹೊಸ ಕ್ಷಿತಿಜಗಳು. ಹೊಸ ಹೊಸ ಹಿತಸಂವರ್ಧಕ ಕಾರ್ಯ ಕಲಾಪಗಳು, ಯುವಜನ ಕಲ್ಯಾಣ ಹಾಗೂ ಸಂಸ್ಕೃತಿ ಇಲಾಖೆಗಳಿಗೆ ಅಂದಿನ ಮಂತ್ರಿಗಳಾದ ಶ್ರೀ ಕೆ. ಎಚ್. ಶ್ರೀನಿವಾಸ್ ಅವರು ಮೂಲಶಕ್ತಿಯಾಗಿ ಈ ಉಭಯ ಕಾರ್ಯಕರ್ತರ ಕೈಗಳನ್ನು ಬಲಪಡಿಸಿದರು. ಇಂದಿನ ಸುಶಿಕ್ಷಿತ ಕವಿ ಕಲಾವಿದರ ನಿರುದ್ಯೋಗ ಸಮಸ್ಯೆಯನ್ನೂ ದೂರು ಮಾಡಲು, ಕನ್ನಡ ಕಲಾವಿದರಿಗೆ ಮಾಸಾಶನ, ವೃದ್ಧಾಪ್ಯ ವೇತನಗಳನ್ನು ಜಾರಿಮಾಡಲು ಹೆಣಗಾಡಿದ್ದಾರೆ, ಹೆಣ ಗಾಡುತ್ತಲಿದ್ದಾರೆ.

ಶ್ರೀ ಜಯತೀರ್ಥರು ರಾಯಚೂರಿನಲ್ಲಿದ್ದರು. ಈಗ ಸುಮಾರು ದಶಕದ ಹಿಂದಿನ ಮಾತಿರಬೇಕು. ರಾಯಚೂರು ಕನ್ನಡ ಸಂಘದ ಆಶ್ರಯದಲ್ಲಿ ನನ್ನದೊಂದು ಭಾಷಣಕಾರ್ಯಕ್ರಮ —ಶ್ರೀ ರಾಜಪುರೋಹಿತರ ಅಧ್ಯಕ್ಷತೆಯಲ್ಲಿ. ಆ ಸಂದರ್ಭ ದಲ್ಲಿ ಅವರು ನನಗೆ ನೀಡಿದ ಹಾರ್ದಿಕ ಸ್ನೇಹಾತಿಥ್ಯಗಳು ಅವಿಸ್ಮರಣೀಯ. ಒಬ್ಬ ಹಳೆಯ ಸಾಹಿತಿ ಮಿತ್ರನನ್ನೂ ಆತ್ಮೀಯವಾಗಿ ಕಾಣುವ ಅವರ ಮನಸ್ಸಿನ ಔದಾ ರ್ಯಕ್ಕೆ ನಾನು ಮನಸೋತೆ. ಆ ಸಂದರ್ಭದಿಂದಾಗಿ ನಮ್ಮ ಸ್ನೇಹವು ಚಿಗುರಿ ದಾಂಗುಡಿಬಿಡತೊಡಗಿತು. ನನ್ನ ಸಾಹಿತ್ಯ ಕೃತಿಗಳನ್ನು ಸಹೃದಯಭಾವದಿಂದ ಓದಿ ವಿಮರ್ಶಿಸುವ, ಮೆಚ್ಚುವ ಅವರ ಗುಣಗ್ರಾಹಕ ಬುದ್ಧಿಯನ್ನು ನೆನೆದಾಗಲೆಲ್ಲಾ ನನಗೆ ಕವಿ ಕುಮಾರವ್ಯಾಸನ 'ಗುಣಮೌನಿ'ಗಳ ಬಗ್ಗೆ ಹೇಳಿದ ಮಾತು ಯಾವಾ ಗಲೂ ನೆನಪಾಗುತ್ತದೆ. ಕಲಿಯುಗದವರು ಅರ್ಥಪರಾಯಣರು, ಧರ್ಮಾಶ್ರಮ ವಿದೂಷಕರು, ದುಷ್ಪಾತ್ರದಾನಿಗಳು, ಗುಣಮೌನಿಗಳು, ಗರ್ವಿತರು, ಮಿಥ್ಯಾಜ್ಞಾನಿ ಗಳು ಎಂದೆಲ್ಲ ಕವಿ ಭೀಮನಿಗೆ ಹನಮಂತನ ಬಾಯಲ್ಲಿ ಹೇಳಿಸುತ್ತಾನೆ. ಇದು ನಿಜ. ಅಸೂಯೆ ಹೊಟ್ಟೆಯ ಕಿಚ್ಚುಗಳೆ ತಾಂಡವವಾಡುವ ಈ ಸ್ವಾರ್ಥಯುಗದಲ್ಲಿ ಗುಣ ವಿದ್ದಲ್ಲಿ ಮೌನತಾಳುವರಲ್ಲದೆ ಬಾಯಿಬಿಟ್ಟು ಮೆಚ್ಚುಗೆಯ ಮಾತನಾಡುವುದಿಲ್ಲ. ಸಾಹಿತ್ಯದ ಸಾರ್ಥಕತೆ ಸಹೃದಯತ್ವದಲ್ಲಿ. ಸ್ವತಃ ಸಾಹಿತಿಯಾದವನಿಗೆ ಸ್ವತಃ ಸಂಗೀತ ಕಾರನಾದವನಿಗೆ, ಇನ್ನೊಬ್ಬರ ಸಾಹಿತ್ಯ, ಇನ್ನೊಬ್ಬರ ಸಂಗೀತ ಅದರಲ್ಲಿ ಗುಣಗಂಧ ವಡಗಿದ್ದರೂ, ಮೆಚ್ಚಿಗೆಯಾಗುವುದು ಅಪರೂಪ. ಹಾಗೆ ಸಮಾನ ವ್ಯವಸಾಯ ಗಳಲ್ಲಿ ಸದ್ಗುಣವನ್ನು ಕಂಡು ಮೆಚ್ಚುವುದಕ್ಕೂ ಹೃದಯ ಸಂಸ್ಕಾರ ಬೇಕು. ಅದ ರಿಂದಲೇ ವಿಶಾಲ, ಉದಾರ ಮನೋಭಾವ ಬೆಳೆಯುವುದು. ಜಯತೀರ್ಥ ರಾಜ ಪುರೋಹಿತರಲ್ಲಿ ಈ ದೊಡ್ಡ ಮನಸ್ಸಿನ ಔದಾರ್ಯವನ್ನೂ ಕಂಡು ನಾನು ಅವರ ಸ್ನೇಹಕ್ಕೆ ಮಣಿದಿದ್ದೇನೆ. ತಾವು ದೊಡ್ಡ ಅಧಿಕಾರಿ ಎಂಬ ಅಹಮಹಮಿಕೆ ಅವರಲ್ಲಿ ನಾನು ಔಷಧಕ್ಕೂ ಕಂಡಿಲ್ಲ. ಯಾವಾಗಲಾದರೂ ಬೆಟ್ಟಿಯಾದಾಗ ಅವರು ವಿ.ಐ.ಪಿ. ಬಿಡಾರದಲ್ಲೇ ಇರಲಿ, ಮದುವೆಯಮಂಟಪದ ಅತಿಥಿಯೇ ಆಗಿರಲಿ ಆ ಅಧಿಕಾರದ ಕೋಪುಕವಚನಗಳನ್ನು ತೆಗೆದಿಟ್ಟು, ತೆರೆದ ಹೃದಯದಿಂದ ಮಾತನಾಡುತ್ತಾರೆ.

ಜಯತೀರ್ಥ ರಾಜಪುರೋಹಿತರ ಬಗ್ಗೆ ಬರೆಯುತ್ತ ಹೋದಂತೆ ಅನೇಕ ವೈಯುಕ್ತಿಕ ಸಂಬಂಧದ ಹಿತಾಸಕ್ತಿಯ ಮಾತುಗಳು ನನ್ನಿಂದ ಹೊರಬಂದು ಅವರನ್ನು ಎಂಬರ್ಯಾಸ್ಸಿಂಗ್ ಪರಿಸ್ಥಿತಿಗೆ ಗುರಿಮಾಡಬಹುದು. ಆದರೆ ನನಗೊಬ್ಬನಿಗೆ ಆಗಿರ ಲಕ್ಕಿಲ್ಲ ಜಯತೀರ್ಥರ ಹೃದಯ ಶ್ರೀಮಂತಿಕೆಯ ಬಗ್ಗೆ ಬಂದ ಅನುಭವ. ನನ್ನೊಡನೆ ಅವರು ಪಕ್ಕಾ ಉತ್ತರ ಕರ್ನಾಟಕದ ದೇಸೀಯ ಭಾಷೆಯಲ್ಲಿ ನಿರ್ವಂಚನೆಯಿಂದ ಮಾತನಾಡುವಾಗ ನನ್ನೊಬ್ಬನಿಗಷ್ಟೆ ಅವರು ಈ ಬಗೆಯ ಸಲುಗೆ, ಸರಸಗಳನ್ನೂ ವ್ಯಕ್ತಪಡಿಸುವರೇನೊ ಎಂಬ ಅನುಮಾನ ಬರುತ್ತದೆ. ಆದರೆ ನನ್ನಂಥ ನೂರಾರು ಕನ್ನಡ ಮಿತ್ರರಿಗೆ ಜಯತೀರ್ಥರು ಒಂದೇ ಭಾವನೆಯ ಬಂಧು ಪ್ರೇಮವನ್ನು ತೋರಿದಾಗ ನಾನೇ ಸಣ್ಣವ, ಅವರೇ ದೊಡ್ಡವರು ಎಂಬ ಆತ್ಮ ಪ್ರತ್ಯಯವೂ ಆಗಿದೆ.

ಎತ್ತರದ ಹಣೆಯ, ಗೌರವರ್ಣದ, ಎತ್ತರದ ನಿಲುವಿನ, ಮಧುರ ನಡೆನುಡಿಯ ಜಯತೀರ್ಥರು ಮಾಡಿದುದೆಲ್ಲಾ ಜಯ. ಆಡಿದುದೆಲ್ಲಾ ತೀರ್ಥ. ಈ 'ಜಯತೀರ್ಥರು' ಎಂಬ ಸಂಭಾವನಾ ಗ್ರಂಥದ ಶೀರ್ಷಿಕೆ ಸಾರ್ಥಕವಾಗಿದೆ. ನನ್ನ ಮಿತ್ರರಾದ ಬ.ವೀ. ಹಂಪನಗೌಡರು "ಜಯತೀರ್ಥ ಎಂಬ ನಾಮಾಂಕಿತದ ಬಗ್ಗೆ ಎರಡು ವಿಚಾರ ಹೇಳಿರಿ"ಎಂದಾಗ, "ಇದ ವಿಚಾರಿಸೆ ಬರಿಯ ತುಳಸಿಯ ಉದಕ"ಎಂದು ಕವಿಕುಮಾರ ವ್ಯಾಸನು ತನ್ನ ಮಹಾಮಂಗಲಕೃತಿಯ ಮೌಲ್ಯವನ್ನು ಕುರಿತು ಆಡಿದ ಅಮೂಲ್ಯ ಮಾತು ನೆನಪಿಗೆ ಬರುತ್ತದೆ. ತುಳಸಿಯ ಉದಕ ಎಂದರೆ ತೀರ್ಥ. ತೀರ್ಥ ಎಂದರೆ ಬರಿ ಎಚ್$_2$ಓ ಅಲ್ಲ (ಎಚ್.ಟು.ಓ) ಅದು ಜಡವಾದ ಜಲ ಮಾತ್ರವಲ್ಲ. ಅದರಲ್ಲಿ ಒಂದಿಷ್ಟು ಪಾವನತ್ವವೂ ಬೆರೆತು ಉದಕ+ಪುಣ್ಯ=ತೀರ್ಥ ಎಂಬ ಉತ್ತರ ಬರುತ್ತದೆ.

'ಜಯತೀರ್ಥ'ವೆಂದು ಹೆಸರುವೆತ್ತ ಈ ಅಭಿನಂದನ ಗ್ರಂಥ ಮಧ್ವಾಚಾರ್ಯರ ವ್ಯಾಖ್ಯಾನ ಗ್ರಂಥಕ್ಕೆ ಟೀಕೆ ಬರೆದ ಜಯತೀರ್ಥಾಚಾರ್ಯರನ್ನು ನೆನಪಿಗೆ ತರುತ್ತದೆ. ಅವರಿಗೆ ಟೀಕಾಚಾರ್ಯರೆಂದೇ ವಿಶೇಷ ನಾಮಕರಣ. ಹಾಗೆ ನಮ್ಮ ಜಯತೀರ್ಥರೂ ಕನ್ನಡ ಸಾಹಿತ್ಯ, ಸಂಸ್ಕೃತಿ ಅಭಿವೃದ್ಧಿ—ಶಿಕ್ಷಣಗಳ ಮೇಲೆ ಅಧಿಕಾರವಾಣಿಯಿಂದ ಮಾತನಾಡುವ ಟೀಕಾಚಾರ್ಯರೂ (ಟೀಕಾರಾಯರೆನ್ನಿರಿ ಬೇಕಾದರೆ) ಹೌದು. ಈ ದೃಷ್ಟಿಯಿಂದ 'ಜಯತೀರ್ಥ' ಶೀರ್ಷಿಕೆಯು ಅನೇಕಾರ್ಥ ಸಾರ್ಥಕ್ಯ ಸೂಚಿಸುತ್ತದೆ. ಅವರ ದಕ್ಷ ಆಡಳಿತ, ಸಿದ್ಧಪ್ರಸಿದ್ಧ ಸಾಹಿತ್ಯ, ಕನ್ನಡದ ನಿಸ್ಪೃಹ ಸೇವೆಗಳನ್ನು ಗುರುತಿಸುವ ದೃಷ್ಟಿಯಿಂದ ಪ್ರಕಟಗೊಳ್ಳುತ್ತಿರುವ ಈ ಸಂಭಾವನಾ ಪ್ರಕಟಣೆ ಗುಣ ಮೌನಿಗಳನ್ನು ಒಂದಿಷ್ಟು ಮುಕ್ತಕಂಠದಿಂದ ಇದ್ದುದನ್ನು ಇದ್ದಂತೆ ಮಾತನಾಡಲು ಹಚ್ಚಲು, ಸಾಕು. ಇದೇ ಜಯತೀರ್ಥರ ಜಯಜಯಕಾರ.

# ನಾ ಕಂಡ ರಾಜಪುರೋಹಿತರು

**ಡಾ. ಸಂಗಮೇಶ್ವರ ಸರದಾರ**
ಮಾಜಿ ನಗರಸಭಾಧ್ಯಕ್ಷ, ರಾಯಚೂರು

ಯಾವದೇ ಕೆಲಸವನ್ನು ಸೇವಾಭಾವದಿಂದ ಮತ್ತು ಜನರ ಹಿತದೃಷ್ಟಿಯಿಂದ ಕೈಗೊಂಡಾಗ ಮಾತ್ರ ಅದು ಸಾಧನೆಯಾಗುತ್ತದೆ; ಸಂತಸ ತರುತ್ತದೆ. ಸರ್ಕಾರಿ ಸೇವೆಯಲ್ಲಿದ್ದು ಶ್ರದ್ಧಾಯುಕ್ತ ಮತ್ತು ದಕ್ಷ ಆಡಳಿತಕ್ಕೆ ಹೆಸರಾದ ಕೆಲವೇ ಅಧಿಕಾರಿಗಳ ಪಂಕ್ತಿಗೆ ಜಯತೀರ್ಥ ರಾಜಪುರೋಹಿತರ ಹೆಸರೂ ಸೇರುತ್ತದೆ. ಅವರು ಗುಣಗ್ರಾಹಿ ಮತ್ತು ಒಳ್ಳೆಯ ಸ್ನೇಹಿತರೂ ಹೌದು.

ಅವರು 1967ರಲ್ಲಿ ರಾಯಚೂರಿನ ಪುರಸಭೆಗೆ ಕಮಿಷನರ್ ಆಗಿ ಬಂದಾಗ ನಾನು ಪುರಸಭೆಯ ಅಧ್ಯಕ್ಷನಾಗಿದ್ದೆ. ಸುಮಾರು ಮೂರು ವರ್ಷಗಳ ವರೆಗೆ ಅವರು ರಾಯಚೂರಿನಲ್ಲಿದ್ದರು. ಆ ಮೂರು ವರ್ಷಗಳಲ್ಲಿ ಅವರು ತಮ್ಮ ಆಡಳಿತ ಕ್ರಮ ಮತ್ತು ಶ್ರದ್ಧಾಯುಕ್ತ ದುಡಿಮೆಯಿಂದ ನನ್ನ ಮೇಲೆ ಹಾಗೂ ಇತರ ಮಹನೀಯರ ಮೇಲೆ ವಿಶೇಷ ಪ್ರಭಾವ ಬೀರಿದರು. ರಾಯಚೂರು ಜಿಲ್ಲೆಯವರಾದ ರಾಜಪುರೋಹಿತರು ಈ ನಗರದ ಸರ್ವತೋಮುಖ ಬೆಳವಣಿಗೆಗೆ ಮಾರ್ಗದರ್ಶನ ಮಾಡಿದರು. ಇತರ ಜಿಲ್ಲೆಗಳಂತೆ ಈ ನಗರವನ್ನು ಹೊಸ ಮಾದರಿಯ ಮೇಲೆ ಬೆಳೆಸಬೇಕೆಂಬುದೇ ಅವರ ಹಂಬಲವಾಗಿತ್ತು. ಬೀದಿಗಳಿಗೆ ಹೊಸದಾಗಿ ನಾಮಕರಣ, ಎಲ್ಲ ಬೀದಿಗಳಲ್ಲಿ ನೈರ್ಮಲ್ಯ ಕಾಪಾಡಿಕೊಳ್ಳುವದರ ಬಗ್ಗೆ ಕ್ರಮ, ಹೆಚ್ಚಿನ ಪ್ರಮಾಣದಲ್ಲಿ ನೀರಿನ ಪೂರೈಕೆ, ಹೊಸ ಬಡಾವಣೆಗಳ ಕಾರ್ಯ ಮುಂತಾದ ಪ್ರಗತಿಪರ ಯೋಜನೆಗಳಲ್ಲಿ ಸಲಹೆ ಕೊಡುತ್ತಿದ್ದರಲ್ಲದೆ, ಬೇರೆ ಜಿಲ್ಲೆಗಳಲ್ಲಿ ಸಾಧಿಸಿದ ಕೆಲಸಗಳ ಉದಾಹರಣೆಯನ್ನು ನಮ್ಮ ಮುಂದಿಡುತ್ತಿದ್ದರು. ನಗರ ಸಭಾಧ್ಯಕ್ಷರ ಮತ್ತು ಸದಸ್ಯರ ಹಕ್ಕು ಮತ್ತು ಸೌಲಭ್ಯಗಳನ್ನು ಕುರಿತು ಅವರು ಚರ್ಚಿಸಿದ್ದುಂಟು.

ರಾಯಚೂರಿನ 'ಶೀನ್ ಕಂದೀಲ್' ಹತ್ತಿರ ನಿಂತಿದ್ದ ಕಲ್ಲಾನೆಗೆ ಬಣ್ಣ ಕೊಡಿಸಿ ಅದಕ್ಕೊಂದು ಆಕರ್ಷಣೆ ತಂದವರು ರಾಜಪುರೋಹಿತರು. ಈ ಐತಿಹಾಸಿಕ ನಗರದ ಗುಡ್ಡಗಳ ಮೇಲ್ತುದಿಯವರೆಗೂ ಬೆಳಕು ಇರುವಂತೆ ಗುಡ್ಡಗಳ ಮೇಲೆ ಕಂಭಗಳನ್ನು

ನೆಡಿಸಿ ವಿದ್ಯುದ್ದೀಪಗಳನ್ನು ಒದಗಿಸಿದ ಶ್ರೇಯಸ್ಸು ಅವರಿಗೇ ಸಲ್ಲುತ್ತದೆ. ಗುಡ್ಡದ ತುದಿಯಲ್ಲಿ ರಾಷ್ಟ್ರಧ್ವಜವನ್ನು ಹಾರಿಸುವ ವ್ಯವಸ್ಥೆಯನ್ನೂ ಮಾಡಿದರು. ಸ್ವತಃ ಇತಿಹಾಸದಲ್ಲಿ ಆಸಕ್ತಿಯುಳ್ಳ ಅವರು 'ಕಾಟೀ ದರವಾಜಾ' ಮತ್ತು ಮೂವತ್ತೈದು ಫೂಟು ಉದ್ದದ ಕೋಟೆಕಲ್ಲಿನಲ್ಲಿ ಕೊರೆದ ಶಿಲ್ಪ ಮುಂತಾದ ಅವಶೇಷಗಳ ರಕ್ಷಣೆ ಕೈಕೊಂಡರು. ಮಲಿಯಾಬಾದ ಕೋಟೆಯ ಕೆಳಗೆ ಹೊಲದಲ್ಲಿ ಕಟೆದು ನಿಲ್ಲಿಸಿದ ಸುಂದರ ಕಲ್ಲಾನೆಗಳನ್ನು ನಗರಕ್ಕೆ ತಂದಿರಿಸುವ ಬಗ್ಗೆ ಅನೇಕ ಸಲ ನನ್ನೊಂದಿಗೆ ಚರ್ಚಿಸಿದರು. ಆದರೆ ಈ ಯೋಜನೆ ಇನ್ನೂವರೆಗೂ ಕೈಗೂಡಿಲ್ಲ. ಇಂಥ ಎಲ್ಲ ಕಾರ್ಯಗಳಲ್ಲಿ ಅವರ ಸೌಂದರ್ಯಪ್ರಜ್ಞೆ ಮತ್ತು ಸಂಸ್ಕೃತಿಯ ಬಗ್ಗೆ ಹೆಮ್ಮೆ ಎದ್ದು ಕಾಣುತ್ತಿದ್ದವು. ರಾಯಚೂರ ನಗರದ ಅನೇಕ ಚಿಕ್ಕ ಓಣಿಗಳಲ್ಲಿ ಶಾಬಾದ್ ಹಾಸುಗಲ್ಲುಗಳನ್ನು ಜೋಡಿಸಿ ಸ್ವಚ್ಛವಾಗಿ ಇಡುವ ಕಾರ್ಯ ಅವರ ಕಾಲದಲ್ಲಾಯಿತು.

ಹೈದ್ರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದ ರಾಜಕೀಯ ವಿಭಾಗದವರು ನಡೆಸಿದ ದಕ್ಷಿಣ ರಾಜ್ಯಗಳ ನಗರಾಡಳಿತ ಸಂಸ್ಥೆಗಳ ಅಧಿಕಾರಿ ಮತ್ತು ಅಧ್ಯಕ್ಷರ ತರಬೇತಿ ಶಿಬಿರಕ್ಕೆ ನಾನೂ, ಶ್ರೀ ರಾಜಪುರೋಹಿತರೂ ಹೋಗಿದ್ದೆವು. ಒಂದೂವರೆ ತಿಂಗಳ ತರಬೇತಿಯ ನಂತರ ನಾವು ಒಂದು ನಿರ್ದಿಷ್ಟ ವಿಷಯದ ಮೇಲೆ ಪ್ರಬಂಧ ಬರೆಯಬೇಕಿತ್ತು. 'ಹೈದ್ರಾಬಾದ್ ಕಾರ್ಪೊರೇಷನ್‌ನಲ್ಲಿ ಅಧಿಕಾರ ವಿಕೇಂದ್ರೀಕರಣ' ಎಂಬ ವಿಷಯದ ಮೇಲೆ ರಾಜಪುರೋಹಿತರು ಬರೆದ ಪ್ರಬಂಧ ಸರ್ವಶ್ರೇಷ್ಠವೆಂದು ಪರಿಗಣಿತವಾಯಿತು. ತಜ್ಞರು ನಮ್ಮೊಂದಿಗೆ ನಡೆಸಿದ ಚರ್ಚೆಯಲ್ಲಿಯೂ ಸಹ ರಾಜಪುರೋಹಿತರದೇ ಮೇಲುಗೈ. ಆಕ್ಟ್ರಾಯ್ ಕರದಿಂದ ಲಂಚಕೋರತನ ದುರಾಡಳಿತಗಳಿಗೆ ಆಸ್ಪದವಾಗುವುದು ಅನಿವಾರ್ಯವಾದ ಕಾರಣ ಅದನ್ನು ತೆಗೆದು ಹಾಕಿ ಬೇರೇನಾದರೂ ನಿರ್ದಿಷ್ಟ ವ್ಯವಸ್ಥೆ ಮಾಡಬೇಕೆಂದು ಸಮರ್ಥವಾಗಿ ಪ್ರತಿಪಾದಿಸಿ ತಜ್ಞರ ಮೆಚ್ಚಿಕೆ ಪಡೆದರು. ಅಧಿಕಾರಿಗಳ ಪೂರ್ವಸಿದ್ಧತೆ ಇಲ್ಲದ ಕಾರಣ ಆಗ ರಾಜಪುರೋಹಿತರಿಗೆ ಸಿಗಬಹುದಾಗಿದ್ದ ಚಿನ್ನದ ಪದಕ ಕೈ ತಪ್ಪಿತು.

ಅನೇಕ ವರ್ಷಗಳಿಂದ ಸಮಾಜ ಸೇವೆಯಲ್ಲಿ ತೊಡಗಿದ್ದ ನನಗೆ ಅವರ ಆಸಕ್ತಿ ಮತ್ತು ಸಹಕಾರಗಳಿಂದಾಗಿ ಕೆಲವು ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಯಿತು. ಅವರ ಸಹಕಾರ ಮತ್ತು ಪ್ರೋತ್ಸಾಹವಿರದಿದ್ದಲ್ಲಿ ಈ ಯೋಜನೆಗಳು ನನ್ನ ಕನಸಾಗಿಯೇ ಉಳಿಯುತ್ತಿದ್ದವೇನೊ ? ಅವರಿದ್ದ ಮೂರು ವರ್ಷಗಳ ಅವಧಿಯಲ್ಲಿ ಹಮ್ಮಿಕೊಂಡಿದ್ದ ಯೋಜನೆಗಳು ಪೂರ್ಣಗೊಂಡಿವೆಯಲ್ಲದೆ, ಈ ದಿಶೆಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದ್ದೇವೆ.

ರಾಜಪುರೋಹಿತರು ರಾಯಚೂರಿಗೆ ಬಂದ ನಂತರ, ಇಲ್ಲಿಯ ಸಾಹಿತ್ಯಕ ಚಟು

ವಟಿಕೆಗೆ ಒಂದು ಹೊಸ ತಿರುವು ಕೊಟ್ಟಂತಾಯಿತು. ಸ್ವತಃ ಸಾಹಿತಿಯಾದ ಶ್ರೀಯುತರು ಇತರ ತರುಣ ಬರಹಗಾರರಿಗೆ ಪ್ರೋತ್ಸಾಹಿಸುತ್ತಿದ್ದರು. 'ಸುಳಿಗಾಳಿ' ಎಂಬ ಅವರ ಕಾದಂಬರಿಗೆ ಪುರಸ್ಕಾರ ದೊರಕಿದ್ದು ಅವರು ರಾಯಚೂರಿನಲ್ಲಿರುವಾಗಲೇ. ಇವರ ಮಾರ್ಗದರ್ಶನ ಮತ್ತು ಪ್ರೋತ್ಸಾಹದಿಂದ ಇಲ್ಲಿನ ಅನೇಕ ತರುಣರು ಒಳ್ಳೆಯ ಬರಹಗಾರರಾಗಿದ್ದಾರೆ. ಮುನ್ಸಿಪಲ್ ಲೈಬ್ರರಿಯನ್ನು ವಿಸ್ತರಿಸಿದ್ದಲ್ಲದೆ, ಅಲ್ಲಿದ್ದ ಪುಸ್ತಕಗಳ ಸಂಖ್ಯೆಯನ್ನೂ ಗಣನೀಯವಾಗಿ ಹೆಚ್ಚಿಸಿದರು. ರಾಯಚೂರಿನಲ್ಲಿ ಜರಗುತ್ತಿದ್ದ ಎಲ್ಲ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಬಹಳ ಆಸ್ಥೆಯಿಂದ ಭಾಗವಹಿಸುತ್ತಿದ್ದರು.

1968ರಲ್ಲಿ ತ್ರಿವೆಂಡ್ರಮ್ಮನಲ್ಲಿ ಜರುಗಿದ ಅಖಿಲ ಭಾರತ ನಗರ ಪಾಲಕರ ಸಮ್ಮೇಳನ (All India Municipal Commissioners Conference)ದಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದರು. ಅಷ್ಟೇ ಅಲ್ಲ, ಆ ಸಮ್ಮೇಳನದ ಅಧ್ಯಕ್ಷತೆಯನ್ನೂ ಅವರೇ ವಹಿಸಿದರು; ಇದು ಕೇವಲ ರಾಯಚೂರು ನಗರಕ್ಕಲ್ಲದೆ ಇಡೀ ರಾಜ್ಯಕ್ಕೆ ಸಂದ ಗೌರವ ಮತ್ತು ನಮಗೆ ಹೆಮ್ಮೆಯ ವಿಷಯ.

ರಾಜಪುರೋಹಿತರು ಬೇರೆ ಬೇರೆ ಖಾತೆಗಳಲ್ಲಿ ಕೆಲಸ ಮಾಡಿ ತಮ್ಮ ನಿಷ್ಠಾವಂತ ಸೇವೆಯಿಂದ, ಆ ವಿಭಾಗಗಳಿಗೆ ಗೌರವಸ್ಥಾನ ದೊರಕಿಸಿಕೊಟ್ಟಿದ್ದಾರೆ. ಸಧ್ಯದಲ್ಲಿಯೇ ಸ್ಥಾಪನೆಯಾಗಲಿರುವ ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ಅವರು ವಿಶೇಷಾಧಿಕಾರಿಯಾಗಿ ನೇಮಕಗೊಂಡದ್ದು ನಮಗೆಲ್ಲ ಸಂತಸದ ಹಾಗೂ ಅಭಿಮಾನದ ಸಂಗತಿ. 'ಕನ್ನಡ ಮತ್ತು ಸಂಸ್ಕೃತಿ' ಇಲಾಖೆಯ ಶಿಲ್ಪಿಯೆನಿಸಿಕೊಂಡ ರಾಜಪುರೋಹಿತರು ಗುಲ್ಬರ್ಗಾ ವಿಶ್ವವಿದ್ಯಾನಿಲಯದ ಶಿಲ್ಪಿಯಾಗುವದರಲ್ಲಿ ಸಂದೇಹವಿಲ್ಲ. ಅವರನ್ನು ನಿಯಮಿಸಿದ ಸರ್ಕಾರ ಅಭಿನಂದನೀಯ.

ನನ್ನ ಯೋಜನೆಗಳಿಗೆ ಅವರ ಸಹಕಾರ, ಸಲಹೆ ಮತ್ತು ಮಾರ್ಗದರ್ಶನ ಬಹಳ ಸಹಾಯಕವಾದವು. ಅವರು ಇಂದು ರಾಯಚೂರಿನಲ್ಲಿರದಿದ್ದರೂ, ಅವರು ರಾಯಚೂರಿನ ಅಭಿವೃದ್ಧಿಯ ಬಗ್ಗೆ ಚಿಂತಿಸುವ ಮನೋಭಾವ ತಾಳಿದ್ದಾರೆ. ತಮ್ಮ ಕುಶಲ ಹಾಗೂ ಆಸಕ್ತಿಯುತ ಕೆಲಸದಿಂದ ನನ್ನ ಮನಸ್ಸಿನ ಮೇಲೆ ಸಚೇತನವೂ ಪ್ರಗಾಢವೂ ಆದ ಬಿಂಬವನ್ನುಳಿಸಿಹೋಗಿದ್ದಾರೆ.

# ಹೋರಾಟಗಾರ

ಪ್ರೊ. ಡಿ. ಆರ್. ಬಳೂರಗಿ

ಸಹಸ್ರಾರು ವರ್ಷ ನಮ್ಮನ್ನಾಳಿದವರು ಪರಕೀಯರೇ. ಇಂದು ನಮ್ಮನ್ನು ನಾವೇ ಆಳಿಕೊಳ್ಳುತ್ತಿದ್ದೇವೆ. ಜಗತ್ತಿನ ಪ್ರಜಾಪ್ರಭುತ್ವದ ದೇಶಗಳಲ್ಲಿಯೇ ನಮ್ಮ ರಾಷ್ಟ್ರ ಅತ್ಯಂತ ದೊಡ್ಡದು. ಅದು ನಮಗೆ ಅಭಿಮಾನದ ವಿಷಯ. ಆಂಗ್ಲರ ಆಳಿಕೆಯಿಂದ ಮುಕ್ತಿ ಪಡೆಯಲು ಭಾರತೀಯರು ನಡೆಯಿಸಿದ ಸ್ವಾತಂತ್ರ್ಯ ಹೋರಾಟ, ಭಾರತ ದೇಶದ ಇತಿಹಾಸದಲ್ಲಿಯೇ ಬಹು ಮಹತ್ವದ ಘಟ್ಟ. ಅದು ಅನೇಕರ ತ್ಯಾಗ ಬಲಿದಾನಗಳ ಫಲ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಅನೇಕರು ಹುತಾತ್ಮರಾದರು. ಹಲವರು ಸಕ್ರಿಯ ರಾಜಕೀಯದಲ್ಲಿಯೇ ಮುಂದು ವರಿದು, ಮಂತ್ರಿಗಳಾಗಿ, ರಾಜ್ಯಪಾಲರಾಗಿ, ರಾಷ್ಟ್ರಪತಿಯಾಗಿ ದೇಶಕ್ಕೆ ಸೇವೆ ಸಲ್ಲಿಸಿ ದರು, ಸಲ್ಲಿಸುತ್ತಿದ್ದಾರೆ. ಕೆಲವರು ವಿದ್ಯಾರ್ಥಿಗಳಾಗಿದ್ದಾಗಲೇ ಶಾಲೆ ಮತ್ತು ಕಾಲೇಜುಗಳಿಗೆ ಶರಣು ಹೊಡೆದು, ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ದೇಶ ಸ್ವತಂತ್ರವಾದೊಡನೆ ಸಕ್ರಿಯ ರಾಜಕೀಯದಿಂದ ದೂರ ಸರಿದು ಅರ್ಧಕ್ಕೆ ನಿಲ್ಲಿಸಿದ ವಿದ್ಯಾಭ್ಯಾಸವನ್ನು ಪೂರ್ತಿಗೊಳಿಸಿದರು ಮತ್ತು ತಮ್ಮ ಬದುಕನ್ನು ನೇರ್ಪುಗೊಳಿಸಿಕೊಂಡರು. ಅಂಥವರು ಇಂದು ಕೇಂದ್ರ ಹಾಗೂ ರಾಜ್ಯ ಸರ್ಕಾರ ಗಳ ವಿವಿಧ ಕ್ಷೇತ್ರಗಳಲ್ಲಿ ಅಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಸ್ವಾತಂತ್ರ್ಯ ಹೋರಾಟದಲ್ಲಿ ಮಾಡಿದ ತ್ಯಾಗ, ತೋರಿದ ಎದೆಗಾರಿಕೆ ಹಾಗೂ ದಿಟ್ಟತನ ಜನ ಸಾಮಾನ್ಯರಿಂದ ಸಂಪೂರ್ಣವಾಗಿ ಮರೆಯಾಗಿ ಹೋಗಿವೆ. ಕೇವಲ ಉನ್ನತ ಅಧಿಕಾರಿಗಳಾಗಿಯೇ ಅವರು ಸಾಮಾನ್ಯರಿಗೆ ಪರಿಚಿತರು. ಇಂಥವರಲ್ಲಿ ಶ್ರೀ ಜಯತೀರ್ಥ ರಾಜಪುರೋಹಿತರೂ ಒಬ್ಬರು.

1942 ರಲ್ಲಿ ಮಹಾತ್ಮಾ ಗಾಂಧೀಜಿಯವರು 'ಚಲೇಜಾವ್' ಚಳುವಳಿಯನ್ನು ಘೋಷಿಸಿದಾಗ ರಾಜಪುರೋಹಿತರಿಗೆ ಕೇವಲ ಹದಿನೆಂಟು ವರ್ಷ. ಆಗ ಅವರು ತಮ್ಮ ಹುಟ್ಟೂರಾದ ರಾಯಚೂರು ಜಿಲ್ಲೆಯ ಕನಕಗಿರಿಯಲ್ಲಿ ವಾಚನಾಲಯ ವೊಂದನ್ನು ಸ್ಥಾಪಿಸುವ ಯತ್ನ ನಡೆಸಿದರು. ಕೆಲ ವರ್ತಕರನ್ನು ಕಂಡು ಪತ್ರಿಕೆಗಳಿ

ಗಾಗಿ ಚಂದಾ ಹಣ ಸಂಗ್ರಹಿಸಿದರು. ಹಾಗೂ ಪತ್ರಿಕೆಗಳು ಬರುವಂತೆ ವ್ಯವಸ್ಥೆ ಮಾಡಿದರು. ವಾಚನಾಲಯದ ಸಹಾಯದಿಂದ ತಮ್ಮೂರಿನ ಜನರಲ್ಲಿ ರಾಜಕೀಯ ಪ್ರಜ್ಞೆಯನ್ನು ಜಾಗ್ರತಗೊಳಿಸುವದು ಅವರ ಉದ್ದೇಶವಾಗಿತ್ತು. ಆದ್ದರಿಂದ ವಾಚನಾಲಯವನ್ನು ಉದ್ಘಾಟಿಸಲು ಯಾರೂ ಒಪ್ಪಲಿಲ್ಲ. ಅಲ್ಲದೆ ವಾಚನಾಲಯ ವನ್ನು ತೆರೆದದ್ದೇ ಆದರೆ ಸೆರೆಮನೆ ಸೇರಬೇಕಾಗುತ್ತದೆಂದು ಸ್ಥಳೀಯ ಮುಖ್ಯಾ ಧ್ಯಾಪಕರೂ ಮತ್ತು ಪೋಲಿಸ ಇನ್‌ಸ್ಪೆಕ್ಟರೂ ಅವರನ್ನು ಹೆದರಿಸಿದರು. ಈ ಹೆದರಿಕೆಗೆ ಮಣಿಯದೆ, ನಿಜಾಮ್ ಕರ್ನಾಟಕ ಪರಿಷತ್ತಿನ ನಾಯಕರಾದ ದಿ. ಜನಾರ್ದನರಾವ್ ದೇಸಾಯಿಯವರಿಂದ ವಾಚನಾಲಯದ ಉದ್ಘಾಟನೆಯನ್ನು ನೆರವೇರಿಸಿಯೇ ಬಿಟ್ಟರು. ಇದು ರಾಜಪುರೋಹಿತರು ಸರ್ಕಾರದ ವಿರುದ್ಧ ಊದಿದ ಪ್ರಥಮ ಕಹಳೆ ಹಾಗೂ ಅವರ ಹೆಸರು ಪೋಲಿಸ ದಾಖಲೆಯಲ್ಲಿ ಸೇರ್ಪಡೆಯಾಗುವಂತೆ ಮಾಡಿದ ಪ್ರಥಮ ಘಟನೆ. ಆಗ ಅವರು ನಿಜಾಮ್ ಕರ್ನಾಟಕ ಪರಿಷತ್ತಿನ ಕನಕಗಿರಿ ಶಾಖೆಗೆ ಸ್ವತಃ ಕಾರ್ಯದರ್ಶಿಗಳಾಗುವ ಧೈರ್ಯ ತೋರಿದರು.

ಈ ಘಟನೆಯಿಂದ ಜನರಿಗೆ ಅವರ ಬಗ್ಗೆ ನಂಬುಗೆ ಹುಟ್ಟಿತು. ಅನೇಕರು ಬಂದು ಅಧಿಕಾರಿಗಳ ಭ್ರಷ್ಟಾಚಾರಗಳ ವಿಷಯವಾಗಿ ಅವರಲ್ಲಿ ದೂರು ಹೇಳಲಾ ರಂಭಿಸಿದರು. ಆಗ ಸರ್ಕಾರ ಲೆವಿ ವಸೂಲಿಯ ಬಗ್ಗೆ ಆಜ್ಞೆ ಹೊರಡಿಸಿತ್ತು. ಆ ಭಾಗದಲ್ಲಿಯ ಬೆಳೆಗಳು ಸರಿಯಾಗಿರದಿದ್ದರೂ, ವಸೂಲಿಯ ಕಾರ್ಯ ಭರ ದಿಂದ ಸಾಗಿತ್ತು. ಈ ಅನ್ಯಾಯವನ್ನು ತಡೆಯಲು ರಾಜಪುರೋಹಿತರು ರೈತರ ತಂಡವೊಂದನ್ನು ಕಟ್ಟಿಕೊಂಡು ಅವರ ಊರಿಗೆ ಬಂದಿದ್ದ ಕಲೆಕ್ಟರ ಮುಂದೆ ಅಹ ವಾಲನ್ನು ಹೇಳಿಕೊಂಡರು. ಅದಕ್ಕಾತ "ಮಗೂ! ನೀನಿನ್ನೂ ಹಾಲುಗಲ್ಲದವ. ಇದರಲ್ಲಿ ಬರಬಾರದು" ಎಂದು ಹೇಳಿದನಂತೆ.

ಆಂಗ್ಲರು ನಮ್ಮ ದೇಶಕ್ಕೆ ಸ್ವಾತಂತ್ರ್ಯ ನೀಡಿ ಹೊರಟು ಹೋಗುವಾಗ ರಾಜಪುರೋಹಿತರು ಬಿ. ಎ. ವರ್ಗದಲ್ಲಿ ಓದುತ್ತಿದ್ದ ವಿದ್ಯಾರ್ಥಿ. ಅವರು ಓದು ತ್ತಿದ್ದುದು ಹೈದ್ರಾಬಾದಿನಲ್ಲಿ; ವಾಸ ಉಸ್ಮಾನಿಯ ವಿಶ್ವವಿದ್ಯಾಲಯದ ವಿದ್ಯಾರ್ಥಿ ನಿಲಯದಲ್ಲಿ. 1947ರ ಆಗಸ್ಟ 15 ದೇಶಕ್ಕೆಲ್ಲ ಸಂಭ್ರಮದ ಘಳಿಗೆ. ಆದರೆ ಹೈದ್ರಾಬಾದಿನ ಜನರಿಗೆ ರಾಷ್ಟ್ರಧ್ವಜ ವಂದನೆಗೆ ಕೂಡ ಅವಕಾಶ ದೊರೆಯಲಿಲ್ಲ. ಯಾಕೆಂದರೆ ಹೈದ್ರಾಬಾದು ದೇಶಿ ಸಂಸ್ಥಾನವಾಗಿದ್ದು, ನಿಜಾಮನ ಆಡಳಿತದಲ್ಲಿತ್ತು. ಮತ್ತು ನಿಜಾಮ್ ಸರ್ಕಾರ ಭಾರತ ಒಕ್ಕೂಟದಿಂದ ಪ್ರತ್ಯೇಕವಾಗಿಯೇ ಉಳಿಯಲು ನಿರ್ಧರಿಸಿದಂತಿತ್ತು. ಆದ್ದರಿಂದ ಜನಪ್ರತಿಭಟಿಸಿದರು, ಸತ್ಯಾಗ್ರಹಗಳಾದವು. ಸ್ವಾತಂತ್ರ್ಯ ಪ್ರಿಯ ಜನನಾಯಕರ ಬಂಧನಗಳು ನಡೆದವು. ಆಗ ರಾಜಪುರೋ ತರು ಉಸ್ಮಾನಿಯ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದ ಕ್ರಿಯಾ ಸಮಿತಿಯ ಸದಸ್ಯರಾಗಿದ್ದರು. ಮುಖಂಡರ ಬಂಧನವಾದಾಗಲೆಲ್ಲ ವಿದ್ಯಾರ್ಥಿಗಳು ಕಾಲೇಜನ್ನು

ಬಹಿಷ್ಕರಿಸಿ ಪ್ರಚಂಡ ಮೆರವಣಿಗೆಗಳನ್ನು ಹೊರಡಿಸುತ್ತಿದ್ದರು. ಮೆರವಣಿಗೆ, ಹಾಗೂ ಪ್ರತಿಭಟನಾ ಪ್ರದರ್ಶನಗಳನ್ನು ಸಂಘಟಿಸುವ ಕಾರ್ಯ ರಾಜಪುರೋಹಿತ ರದ್ದೆ. ಪೋಲಿಸರು ಮೆರವಣಿಗೆಗಳನ್ನು ತಡೆಯುತ್ತಿದ್ದರು. ಅನೇಕ ಸಲ ಲಾಠೀ ಪ್ರಹಾರ ನಡೆಯುತ್ತಿತ್ತು. ಅಂಥ ಸಂದರ್ಭಗಳಲ್ಲಿ ಮುಂಚೂಣಿಯಲ್ಲಿದ್ದ ಅವರು ಕುಸಿದು ಬಿದ್ದುದೆಷ್ಟು ಸಲವೋ. ಇದೇ ಸುಮಾರಿಗೆ ವಿದ್ಯಾರ್ಥಿ ಸಂಘದ ಸದಸ್ಯ ನೊಬ್ಬ ನಿಜಾಮನ ಕಾರಿನ ಮೇಲೆ ಬಾಂಬೆಸೆದು ಸೆರೆಸಿಕ್ಕ. ಇದರಿಂದ ವಿದ್ಯಾರ್ಥಿ ಕ್ರಿಯಾ ಸಮಿತಿಯ ಸದಸ್ಯರನ್ನೆಲ್ಲ ಸೆರೆಹಿಡಿಯಲು ಸರ್ಕಾರ ನಿರ್ಧರಿಸಿತು. ಸರ್ಕಾರದ ನಿರ್ಧಾರ ಇವರಿಗೆ ತಿಳಿಯಿತು. ಆಗ ಅಸೆಂಬ್ಲಿ ಸದಸ್ಯರಾಗಿದ್ದ ದಿ. ಅನ್ವರಿ ಮಧ್ವ ರಾಯರಿಗೆ ಕೂಡ ಈ ವಿಷಯ ತಿಳಿದಿತ್ತೇನೋ. ಅವರು ರಾಜಪುರೋಹಿತರನ್ನು ಕರೆಯಿಸಿ 400 ರೂಪಾಯಿಗಳನ್ನು ಕೊಟ್ಟು ರಾಜಕೀಯ ಚಟುವಟಿಕೆಗಳಿಗೆ ಬಳಸ ಬೇಕೆಂದು ಹೇಳಿ, ಕೂಡಲೇ ಹೈದ್ರಾಬಾದ ಬಿಟ್ಟು ಹೊರಡಲು ತಿಳಿಸಿದರು. ರಾಜಪುರೋಹಿತರು ಅಂದೇ ರಾತ್ರಿ ಹೈದ್ರಾಬಾದಿನಿಂದ ಹೊರಟು ಗದಗ ತಲುಪಿ ದರು ಹಾಗೂ ಅಲ್ಲಿನ ಹೈದ್ರಾಬಾದ ಸ್ಟೇಟ್ ಕಾಂಗ್ರೆಸ್ ಕ್ಯಾಂಪಿನಲ್ಲಿ ಹಣಕೊಟ್ಟು ಕನಕಗಿರಿಗೆ ಹೋದರು.

ಈಗ ಅವರು ರಾಯಚೂರು ಜಿಲ್ಲೆಯ ವಿವಿಧ ಭಾಗಗಳಲ್ಲಿ ಸತ್ಯಾಗ್ರಹ ಸಂಘ ಟನೆಯ ಕಾರ್ಯ ಕೈಕೊಂಡರು. ತಾವರಗೆರೆ, ಮುದಗಲ್, ಲಿಂಗಸುಗೂರು, ನವಲಿ, ಕುಷ್ಟಗಿ, ಒಂಕಲಕುಂಟೆ ಮುಂತಾದ ಊರುಗಳಲ್ಲಿ ಸಂಚಾರ ಮಾಡಿ ಜನಾಭಿಪ್ರಾಯ ತಿಳಿದುಕೊಂಡರು. ಹೋದೆಡೆಯಲ್ಲೆಲ್ಲ ನಿಜಾಮ್ ಸರ್ಕಾರದ ವಿರುದ್ಧ ಉಗ್ರವಾದ ಭಾಷಣಗಳನ್ನು ಮಾಡಿದರು. ಜನರನ್ನು ಸತ್ಯಾಗ್ರಹಕ್ಕಾಗಿ ಅಣಿಗೊಳಿಸಿದರು. ಸರ್ಕಾರ ಇವರನ್ನು ಬಂಧಿಸಬೇಕೆಂದಾಗ,ಭೂಗತರಾಗಿ ಚಳುವಳಿ ಆರಂಭಿಸಿದರು. ಹಳ್ಳಿ ಗಳಲ್ಲಿ ಇವರ ಚಟುವಟಿಕೆ ಹೆಚ್ಚಾದಂತೆ ಪೋಲಿಸ್ ಬಂದೋಬಸ್ತು ಕೂಡ ಹೆಚ್ಚಿತು. ರಜಾಕಾರರು ಇವರ ಮನೆ ಸುಡುವ ಯತ್ನಮಾಡಿದರು. ಆದರೆ ಹೊನ್ನೂರ ಸಾಬ ನೆಂಬ ಹಿರಿಯ ಮಿತ್ರನ ಸಹಾಯದಿಂದ ಕುಟುಂಬ ಪಾರಾಯಿತು.

ಸ್ವಾತಂತ್ರ್ಯದ ನಂತರ, ಭಾರತ ಸರ್ಕಾರವು 1948 ಸಪ್ಟಂಬರಿನಲ್ಲಿ ಪೋಲಿಸ್ ಕಾರ್ಯಾಚರಣೆ ನಡೆಯಿಸಿ ಹೈದ್ರಾಬಾದನ್ನು ವಿಮೋಚನೆಗೊಳಿಸುವವರೆಗೆ ಅಂದರೆ ಒಂದು ವರ್ಷ ಪರ್ಯಂತ ಹೈದ್ರಾಬಾದ್ ಸಂಸ್ಥಾನದಲ್ಲಿಯ ಪರಿಸ್ಥಿತಿ ತೀರ ವಿಚಿತ್ರ ವಾಗಿತ್ತು. ಕಾನೂನು ಮತ್ತು ರಕ್ಷಣೆಗಾಗಿ ನಿಜಾಮ್ ಸರ್ಕಾರದ ಸೈನ್ಯ ಹಾಗೂ ಪೋಲಿ ಸರಿದ್ದರು. ಇವೆರಡರ ಮಧ್ಯೆ ಮುಸ್ಲಿಂ ತೀವ್ರಗಾಮಿ ಸಂಘಟನೆಯೊಂದು ಹುಟ್ಟಿ ಕೊಂಡಿತು. ಕಾಸೀಂ ರಝ್ವಿ ಇದರ ನಾಯಕ. ಈ ಸಂಘಟನೆಯ ಸದಸ್ಯರು ತೀವ್ರಗಾಮಿ ಮುಸ್ಲಿಮರೇ ಆಗಿದ್ದು, ಅವರನ್ನು ರಜಾಕಾರರೆಂದು ಕರೆಯುತ್ತಿ ದ್ದರು. ರಜಾಕಾರರಿಗೆ ನಿಜಾಮನ ಪ್ರೋತ್ಸಾಹವೂ ಇದ್ದಿತು. ಸಂಸ್ಥಾನದಲ್ಲಿಯ

ಶ್ರೀಮಂತ ಹಿಂದೂಗಳ ಆಸ್ತಿಪಾಸ್ತಿಗಳ ಲೂಟಿ, ಹಿಂದೂ ಸ್ತ್ರೀಯರ ಮಾನಾಪಹರಣ, ಮಕ್ಕಳ ಕೊಲೆ ಮುಂತಾದ ಭಯೋತ್ಪಾದಕ ಚಟುವಟಿಕೆಗಳನ್ನು ರಜಾಕಾರರು ನಡೆಸುತ್ತಿದ್ದರು. ಪೋಲಿಸರು ಇದನ್ನು ತಡೆದು ಜನರಿಗೆ ರಕ್ಷಣೆ ನೀಡುತ್ತಿರಲಿಲ್ಲ. ಹೀಗಾಗಿ ಹೈದ್ರಾಬಾದ್ ಸಂಸ್ಥಾನದಲ್ಲಿ ವಾಸಿಸುವ ಹಿಂದೂಗಳ ಪರಿಸ್ಥಿತಿ ತೀರ ಶೋಚನೀಯವಾಯಿತು. ನಿಜಾಮ ಪೋಲಿಸರನ್ನು ಮತ್ತು ರಜಾಕಾರರನ್ನು ಹಿಂಸಾತ್ಮಕವಾಗಿಯೇ ಪ್ರತಿಭಟಿಸಲೋಸುಗ ಕೆಲ ಉಗ್ರಗಾಮಿ ಸತ್ಯಾಗ್ರಹಿಗಳು ನಿಜಾಮ ಸರ್ಕಾರದ ಗಡಿಯಾಚೆ ಅಲ್ಲಲ್ಲಿ ಶಿಬಿರಗಳನ್ನು ಸ್ಥಾಪಿಸಿಕೊಂಡರು. ರಾಯಚೂರು ಜಿಲ್ಲೆಯಲ್ಲಿ ಇಂಥ ಪ್ರತಿಭಟನೆಯ ಸಂಘಟನೆಗಾಗಿ ರಚಿತವಾದ ಮೂರು ಸದಸ್ಯರ ಸಮಿತಿಯಲ್ಲಿ ರಾಜಪುರೋಹಿತರು ಒಬ್ಬರಾದರು. ಹಣಕಾಸು ಮತ್ತು ಪ್ರಚಾರದ ವ್ಯವಸ್ಥೆ ಅವರ ಕಡೆಗಿತ್ತು. ಗಾಣಧಾಳ ನಾರಾಯಣಪ್ಪ ಮತ್ತು ಬಿ. ಹೆಚ್. ಇನಾಂದಾರ್ ಅವರು ಇತರ ಸದಸ್ಯರಾಗಿದ್ದರು. ಗಜೇಂದ್ರಗಡದಲ್ಲಿ ಕಾಂಗ್ರೆಸ್ಸಿನ ಸಶಸ್ತ್ರ ಶಿಬಿರದ ಕೇಂದ್ರವಿತ್ತು. ಇಂಥ ಅನೇಕ ಶಿಬಿರಗಳು ಶಾಂತಗೇರಿ, ಇಟಗಿ, ಮುಂಡರಗಿ, ಕಂಪಲಿ, ಚಳ್ಳಿಕೊಡ್ಲೂರು, ತುಂಗಭದ್ರಗಳಲ್ಲಿದ್ದವು. ಶಿಬಿರಗಳಿಂದ ಸ್ವಾತಂತ್ರ್ಯ ಹೋರಾಟಗಾರರು ಆಗಾಗ್ಗೆ ನಿಜಾಮ ಗಡಿಯೊಳಕ್ಕೆ ಪ್ರವೇಶಿಸಿ ರಜಾಕಾರ ಮತ್ತು ಪೋಲಿಸರ ವಿರುದ್ಧ ಸಶಸ್ತ್ರ ಕಾರ್ಯಾಚರಣೆ ನಡೆಸುತ್ತಿದ್ದರು. ಕೈ ಬಾಂಬುಗಳನ್ನೂ ಶಸ್ತ್ರಗಳನ್ನೂ ಗದಗ ಕೇಂದ್ರದಿಂದ ರೈಲಿನಲ್ಲಿ ತುಂಗಭದ್ರಾ ದಡದ ಶಿಬಿರಗಳಿಗೆ ಸಾಗಿಸುವುದು ರಾಜಪುರೋಹಿತರ ಕೆಲಸವಾಗಿತ್ತು. ಅನೇಕ ಸಲ ಅವರು ಸಶಸ್ತ್ರ ದಾಳಿಗಳನ್ನು ಕೈಕೊಂಡರು. ಒಂದು ಸಲ ನಾಲ್ಕಾರು ಜನ ಮಿತ್ರರೊಡಗೂಡಿ ನಿಜಾಮ ಗಡಿಯಲ್ಲಿದ್ದ ಕೋರಗಲ್ ಎಂಬ ಊರಿನ ಕರೊಡಗಿರಿ (ಕಸ್ಟಮ್ಸ್) ನಾಕಾಕ್ಕೆ ಬೆಂಕಿಯಿಟ್ಟು ಭಸ್ಮ ಮಾಡಿದರು. ಮತ್ತೊಮ್ಮೆ ಗುನ್ನಾಳಿನಲ್ಲಿ ಒತ್ತಾಯದಿಂದ ಕಂದಾಯ ವಸೂಲಿ ಮಾಡುತ್ತಿದ್ದ ತಹಸೀಲ್ದಾರರ ಮೇಲೆ ದಾಳಿ ಮಾಡಿದರು. ಇದರಲ್ಲಿ ಅವರ ಸಂಗಾತಿ ಗೆದ್ದಗೇರಿ ಬಂಡೆಪ್ಪನಿಗೂ, ತಹಸೀಲ್ದಾರನಿಗೂ ಗಾಯಗಳಾದವು. ರಾತ್ರಿಯೇ ನಡೆದು ಗಡಿಪಾರಾದರು.

ಹೀಗೆ ಹಿಂಸಾತ್ಮಕ ಪ್ರತಿಭಟನೆಯಿಂದ ರಜಾಕಾರ ಮತ್ತು ನಿಜಾಮ ಪೋಲಿಸರ ಸ್ಥೈರ್ಯವನ್ನೇ ಕುಂದಿಸಿದ್ದರು. ಹೆಂಡದ ಅಂಗಡಿಗಳನ್ನು ಸುಡಿಸುವುದಂತೂ ವ್ಯಾಪಕ ಕಾರ್ಯಕ್ರಮವಾಗಿತ್ತು.

ತಮ್ಮ ಮೇಲೆ ವಾರೆಂಟ್ ಜಾರಿಯಲ್ಲಿದ್ದಾಗಲೇ ರಾಜಪುರೋಹಿತರು ಒಂದು ರಾತ್ರಿ ಕನಕಗಿರಿಗೆ ಹೋಗಿದ್ದರು. ಅವರ ಆತ್ಮೀಯ ಸ್ನೇಹಿತನು, ರಾಜಪುರೋಹಿತರನ್ನು ಕಂಬಳಿಯ ಮುಸುಕಿನಲ್ಲಿ ಕರೆದುಕೊಂಡುಹೋಗಿ ಅವರ ಪತ್ನಿ ಹಾಗೂ ತಂದೆ ತಾಯಿಯರಿಗೆ ಭೇಟಿ ಮಾಡಿಸಿದ. ಅವರ ಮೇಲೆ ಕೇವಲ ಬಂಧನದ ವಾರೆಂಟ್ ಇದ್ದರೂ, ಅವರನ್ನು ಮುಗಿಸಿಯೇ ಬಿಡಬೇಕೆಂದು ಸ್ಥಳೀಯ ರಜಾಕಾರರು ಮಾತಾ

ಡುತ್ತಿದ್ದರು. ಇದು ಸ್ವಾಭಾವಿಕವಾಗಿಯೇ ಅವರ ಬಂಧುಗಳನ್ನು ಗಾಬರಿಗೀಡು ಮಾಡಿತು. ಆದ್ದರಿಂದ ಅವರ ತಂದೆಯವರು ಒಂದು ಬಂಡಿಯನ್ನು ತರಿಸಿ ಕೂಡಲೇ ಗಡಿದಾಟಿ ಹೋಗಬೇಕೆಂದು ಕಳಿಸಿಕೊಟ್ಟರು. ಆದರೆ, ಮರುದಿನ ಕನಕಗಿರಿಯಿಂದ ಎಂಟು ಮೈಲಿ ದೂರದಲ್ಲಿರುವ ಗೌರೀಪುರದಲ್ಲಿ ಅವರೊಂದು ಸಭೆಯನ್ನುಉದ್ದೇಶಿಸಿ ಮಾತನಾಡುವದೆಂದು ಗೊತ್ತಾಗಿತ್ತು. ಆಗಲೇ ಕರಪತ್ರಗಳನ್ನು ಹಂಚಿಸಿಯಾಗಿತ್ತು. ಈಗ ರಾಜಪುರೋಹಿತರ ಬಂಡಿ ಗಡಿ ದಾಟುವ ಬದಲು ಗೌರೀಪುರಕ್ಕೆ ನಡೆಯಿತು. ಮೃತ್ಯು ಬೆನ್ನಟ್ಟಿದ್ದರೂ ಅವರು ಕರ್ತವ್ಯದಿಂದ ಹಿಮ್ಮುಖರಾಗಲಿಲ್ಲ. ಉತ್ಕಟ ಸ್ವಾತಂತ್ರ್ಯ ಪ್ರೇಮವಿದ್ದರೆ ಮಾತ್ರ ಇಂಥ ಮನೋಧೈರ್ಯ ಸಾಧ್ಯ. ಗೌರೀಪುರದ ಗುಡಿಯ ಪೌಳಿಯಲ್ಲಿ ಆ ದಿನ ಎರಡು ಸಾವಿರ ಜನ ಸೇರಿದ್ದರು. ಸುತ್ತಲೂ ದೊಣ್ಣೆ, ಕೊಡಲಿಗಳನ್ನು ಹಿಡಿದುಕೊಂಡು ಅನೇಕ ಜನ ಕಾವಲು ನಿಂತರು. ಎರಡು ಗಂಟೆಗಳ ಕಾಲ ರಾಜಪುರೋಹಿತರ ಆವೇಶಪೂರ್ಣ ಭಾಷಣ ಸಾಗಿತು. ಅಷ್ಟರಲ್ಲಿಯೇ ಸುದ್ದಿ ಬಂತು ಕುಷ್ಟಗಿಯಿಂದ ಪೋಲಿಸ್ ದಳ ಬರುತ್ತಿದೆಯೆಂದು. ಅಲ್ಲಿಂದ ನೇರವಾಗಿ ಬಂದೂಕಧಾರಿ ರೋಣದ ವೀರಭದ್ರಪ್ಪನೊಂದಿಗೆ ಹುಲಸನ ಹಟ್ಟಿಗೆ ಓಟ. ಹುಲಸನ ಹಟ್ಟಿಯಲ್ಲಿ ಊಟಮುಗಿಸಿ ಒಂಕಲಕುಂಟೆಯುತ್ತ ಪ್ರಯಾಣ. ಮುಂದೆ ರಾಜಪುರೋ ಹಿತರು, ಹಿಂದೆ ಹಿಂದೆ ಪೋಲಿಸ್ ದಳ. ಒಂಕಲಕುಂಟೆಯ ಕಾರ್ಯಕರ್ತರಿಗೆ ರಾಜಪುರೋಹಿತರ ರಕ್ಷಣೆಯೊಂದು ಸಮಸ್ಯೆಯೇ ಆಯಿತು. ಆಗ ಅವರನ್ನು ಉಪ್ಪಲದಿನ್ನಿಯ ಮಡಿವಾಳಪ್ಪನೆಂಬ ರೈತನ ಗೋದಲೆಯಲ್ಲಿ ಅಡಗಿಸಿಬಿಟ್ಟರು.

(ಈಗ ನಡೆದ ಪ್ರಸಂಗವನ್ನು ರಾಜಪುರೋಹಿತರಿಂದಲೆ ಕೇಳಬೇಕು)

ಮಡಿವಾಳಪ್ಪನ ಮನೆಯಲ್ಲಿ ಮೂರೇ ಜನ, ಮಡಿವಾಳಪ್ಪ—ಆತನ ಹೆಂಡತಿ ಮತ್ತು ಹರಯದ ಮಗ. ಬೆಳೆ ಕಾಯಲು ಮಗ ಹೊಲದಲ್ಲಿ ಮಲಗಿಕೊಂಡಿದ್ದ. ರಾಜ ಪುರೋಹಿತರು ಗೋದಲೆಯಲ್ಲಿ ದಂಟುಗಳ ನಡುವೆ. ಆಗಲೇ ಉಪ್ಪಲದಿನ್ನಿಯ ಮನೆ ಮನೆಯನ್ನೂ ಪೋಲಿಸರು ಶೋಧಿಸುತ್ತಿದ್ದರು. ಗಾಬರಿಯಾದ ಮಡಿವಾಳಪ್ಪ "ನಾನೂ, ನೀವೂ ಸೆರೆಸಿಕ್ಕಿ ಬೀಳ್ತೀವಿ ಧಣೇರ" ಎಂದ. "ಹಾಗಾದರೆ ನಾನು ಹೋಗಿ ಬಿಡುತ್ತೇನೆ ಮಡಿವಾಳಪ್ಪ. ನನಗಾಗಿ ನಿಮಗೆಲ್ಲರಿಗೂ ತೊಂದರೆ ಬೇಡ" ಎಂದು ರಾಜಪುರೋಹಿತರು ಗೋದಲೆಯಿಂದ ಇಳಿದು ಬಾಗಿಲತ್ತ ಧಾವಿಸಿದರು. ಆಗ ಮಡಿವಾಳಪ್ಪ "ಸ್ವಲ್ಪ ನಿಲ್ಲಿರಿ ಧಣೇರ, ನಾನು ನಿಮಗೆ ಹೋಗ್ರಿ ಅನ್ಲಿಲ್ಲ. ದನಾ ಮಳೆಯಾಗ ತೋಯ್ತಿದ್ರ ನಾವು ಮುಸುಕಿನಾಗ ಕರ್‍ಕೊಂಬೋ ಜನ. ನಿಮ್ಮನ್ನ ಹ್ಯಾಂಗ ಹೊರಗ ಕಳಿಸೇನ್ರಿ, ? ಬರ್‍ರೀ, ಅಲ್ಲೇ ನನ್ನ ಹೇಣ್ತಿ ಹಂತೇಕ್ ಹೋಗಿ ಕೌದಿ ಹೊದಕೊಂಡು ಮಲಕೋರಿ. ನನ್ನಮಗ ಮಲಗ್ಯಾನ ಅಂತ ಹೇಳ್ತೀನಿ"ಅಂದ. ರೈತನ ಮಾತು ಕೇಳಿ ಮೂಕನಾಗಿ ಆ ತಾಯಿಯ ಪಕ್ಕದಲ್ಲಿ ಮುದುರಿಕೊಂಡು ಮಲಗಿದರು. ಅಷ್ಟರಲ್ಲಿಯೇ ಪೋಲಿಸರು ಬಾಗಿಲು ತಟ್ಟಿದ ಶಬ್ದ ಕೇಳಿಸಿತು.

ಮಡಿವಾಳಪ್ಪ ಸಹಜವಾಗಿಯೇ ವರ್ತಿಸಿ ಅವರನ್ನು ಸಾಗಹಾಕಿದ ಮತ್ತು ರಾಜ ಪುರೋಹಿತರು ಬಂಧನಕ್ಕೊಳಗಾಗುವದನ್ನು ತಪ್ಪಿಸಿದ. ನಿಷ್ಕಳಂಕ ಪ್ರೇಮದ ಪರಾ ಕಾಷ್ಠೆಯನ್ನು ಪ್ರತಿಬಿಂಬಿಸುವ ಇಂಥ ಘಟನೆಗಳು ಬದುಕಿನಲ್ಲಿ ಘಟಿಸುವದು ತೀರ ಕ್ವಚಿತ್ತಾಗಿ. ಅದನ್ನು ಅನುಭವಿಸಿದ ವ್ಯಕ್ತಿಗೆ ಅದು ಬಹುಕಾಲ ಸ್ಮರಣೀಯವಾಗಿ ಉಳಿಯುತ್ತದೆ. ಹಳ್ಳಿಗರ ಈ ಮುಗ್ಧ ವಾತ್ಸಲ್ಯವು ಸತ್ಯಾಗ್ರಹಿಗಳಿಗೆ ಒದಗಿಸುವಷ್ಟು ಚೈತನ್ಯವನ್ನೂ ಮನಸ್ಥೈರ್ಯವನ್ನೂ ಯಾವ ಚಂದಾಹಣ ಒದಗಿಸೀತು ? ಆಗಿನ ಸಭೆಗಳ ವಿಶೇಷವೆಂದರೆ ಹಳ್ಳಿಯ ಹೆಂಗಸರು ಬಂದು ಸತ್ಯಾಗ್ರಹಿಗಳಿಗೆ ಆರತಿ ಬೆಳಗುತ್ತಿದ್ದರು.

ಸತ್ಯಾಗ್ರಹಿಗಳ ಹೋರಾಟ ಅತ್ಯುಗ್ರವಾದಾಗ. ಪರಿಸ್ಥಿತಿ ವಿಕೋಪಕ್ಕೆ ತಿರುಗಿ ದಾಗ ಭಾರತ ಸರ್ಕಾರ 1948ರ ಸಪ್ಟೆಂಬರಿನಲ್ಲಿ ಪೋಲಿಸ್ ಕಾರ್ಯಾಚರಣೆ ಕೈಕೊಂಡು ಹೈದ್ರಾಬಾದನ್ನು ವಿಮೋಚನಗೊಳಿಸಿತು. ಅಲ್ಲಿಗೆ ರಾಜಪುರೋಹಿತರ ಹೋರಾಟದ ಒಂದು ಘಟ್ಟ ಮುಗಿಯಿತು. ಅದೇ ವರ್ಷ ನಡೆದ ಬಿ. ಎ. ಪರೀಕ್ಷೆ ಯಲ್ಲಿ ಅವರು ವಿಶ್ವವಿದ್ಯಾಲಯಕ್ಕೇ ಮೊದಲಿಗರಾಗಿ ಉತ್ತೀರ್ಣರಾದರು ಮತ್ತು ಸರ್ಕಾರಿ ಅಧಿಕಾರಿಯಾಗಿ ನೇಮಕಗೊಂಡರು.

ಆದರೆ ರಾಜಪುರೋಹಿತರ ಹೋರಾಟ ಅಷ್ಟಕ್ಕೆ ಮುಗಿಯಲಿಲ್ಲ. ಕರ್ನಾಟಕ ದಲ್ಲಿ ಕನ್ನಡಕ್ಕೆ ಸೂಕ್ತ ಸ್ಥಾನ ದೊರಕಿಸಿಕೊಡುವದಕ್ಕಾಗಿ ಹೋರಾಟ ನಡೆಯಿಸಿದರು. ಚಿತ್ರದುರ್ಗದ ಜಿಲ್ಲಾಧಿಕಾರಿಯಾಗಿದ್ದಾಗ ಪ್ರಪ್ರಥಮವಾಗಿ ಕನ್ನಡದಲ್ಲಿ ತೀರ್ಪು ಗಳನ್ನು ನೀಡಿ ಕನ್ನಡ ಆಡಳಿತ ಭಾಷೆಯಾಗುವದಕ್ಕೆ ನಾಂದಿ ಹಾಡಿದರು. ಕನ್ನಡವು ಆಡಳಿತ ಭಾಷೆಯಾಗುವದಕ್ಕೆ ಎಷ್ಟೋ ಜನ ಸರ್ಕಾರಿ ಅಧಿಕಾರಿಗಳೇ ವಿರೋಧವಾಗಿ ದ್ದರು. ತಮಗಿಂತಲೂ ಉನ್ನತ ಅಧಿಕಾರಿಗಳಾಗಿದ್ದ ಅವರನ್ನು ವೇದಿಕೆಯ ಮೇಲೆಯೇ ಖಂಡಿಸುವಂತಹ ಎದೆಗಾರಿಕೆ ರಾಜಪುರೋಹಿತರದು. ಕನ್ನಡವು ಸಮರ್ಥ ಆಡಳಿತ ಭಾಷೆಯಾಗಲಾರದೆಂಬ ಕನ್ನಡ ವಿರೋಧಿಗಳಿಗೆ ಅವರ 'ಕನ್ನಡ ತೀರ್ಪುಗಳು'ಒಂದು ಸಶಕ್ತ ಸವಾಲು. ಇಂದು ನಮ್ಮ ರಾಜ್ಯದ ಆಡಳಿತ ಭಾಷೆ ಕನ್ನಡ. ಅದಕ್ಕಾಗಿ ರಾಜಪುರೋಹಿತರು ಪಟ್ಟ ಶ್ರಮ ಅಪಾರ. ಅವರೊಬ್ಬ ನಿರಂತರ ಹೋರಾಟಗಾರ.*

* ಹೋರಾಟದ ವಿವರಗಳಿಗಾಗಿ ಡಾ. ಸೂರ್ಯನಾಥ ಕಾಮತರು ಸಂಪಾದಿಸಿದ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಎರಡನೆಯ ಸಂಪುಟದ ಪುಟ 220 ರಿಂದ ನೋಡಿರಿ.

# ಸಂಘಟನಾ ಚತುರ, ಸ್ನೇಹ ಜೀವಿ – ನೆನಪುಗಳು

**ಕೆ. ವಿರೂಪಾಕ್ಷ ಗೌಡ**
ಬಾಚಿಗೊಂಡನಹಳ್ಳಿ ಜಿ. ಬಳ್ಳಾರಿ

1960-61ನೇ ಇಸ್ವಿ ಇಡೀ ಕರ್ನಾಟಕ ರಾಜ್ಯದಲ್ಲಿ ಹೊಸ ಪಂಚಾಯ್ತಿ ಕಾನೂನು ಪ್ರಕಾರ ಚುನಾವಣೆ ಮಾಡಿ ಅಧ್ಯಕ್ಷ ಸದಸ್ಯರಿಂದ ಕಾರ್ಯದರ್ಶಿಗಳಿಲ್ಲದೆ ಆಡಳಿತ ಶುರುವಾಗಿತ್ತು. ಹೊಸಪೇಟೆಯ ಮುನ್ಸಿಪಲ್ ಹೈಸ್ಕೂಲ್‌ನಲ್ಲಿ ಬಳ್ಳಾರಿ ಜಿಲ್ಲಾ ಮಟ್ಟದ ಗ್ರಾಮ ಪಂಚಾಯ್ತಿ ಅಧ್ಯಕ್ಷರ ಸೆಮಿನಾರ್‌ನ್ನು ಕರೆದಿದ್ದರು. ಸುಮಾರು 200-300 ಜನ ಗ್ರಾಮ ಪಂಚಾಯ್ತಿ ಸೇವಾ ಸಹಕಾರ ಸಂಘಗಳ ಅಧ್ಯಕ್ಷರು, ಬಿ.ಡಿ.ಓ., ತಹಸೀಲ್ದಾರರು, ಅಸಿಸ್ಟೆಂಟ್ ಕಮಿಷನರ್, ಡೆಪ್ಯೂಟಿ ಕಮಿಷಿನರ್, ಗ್ರಾಮ ಸೇವಕರು 3 ದಿನಗಳ ಸೆಮಿನಾರ್‌ನಲ್ಲಿ ಭಾಗವಹಿಸಿದ್ದರು. ಸಭೆ ನಡೆದ ಸ್ಥಳದ ಸಮೀಪ ಊಟ, ಫಳಾರ, ವಸತಿ ಏರ್ಪಾಡು. ಆಗ ಶ್ರೀ ರಾಜ ಪುರೋಹಿತರು ಬಳ್ಳಾರಿ ನಗರದಲ್ಲಿ ಕೆಲವು ದಿನ ಮುನ್ಸಿಪಲ್ ಕಮಿಷನರ್, ಕೆಲವು ದಿನ ಅಸಿಸ್ಟೆಂಟ್ ಕಮಿಷನರ್ ಆಗಿದ್ದರು. ಮೂರು ದಿನದ ಆ ಸಭೆಯ ಕಾರ್ಯಕಲಾಪಗಳಲ್ಲಿ ಊಟ—ವಸತಿಯು ಏರ್ಪಾಡಿನಲ್ಲಿ ಸಹ ಸಕ್ರಿಯ ಪಾತ್ರ ವಹಿಸಿ ಅವರೇ ಸ್ವತಃ ನಿಗರಾಣಿ ಮಾಡುವುದನ್ನು ನೋಡಿ ತುಂಬಾ ಆಶ್ಚರ್ಯಪಟ್ಟೆ, ಸಂತೋಷಪಟ್ಟೆ. ಕೆಂಪಗೆ, ಎತ್ತರ, ನಗುಮುಖ, ಚಾಳಿಸು ನೋಡಿ ಇವರು ಆಂಗ್ಲೋ ಇಂಡಿಯನ್ ಇರಬಹುದೆಂದು ಯಾರಾದರೂ ಊಹಿಸುವಂತಿದ್ದರು. ಇದೇ ಸಮಯದಲ್ಲಿ ಅವರ ಸಾಹಿತ್ಯದ ಹೆಚ್ಚಿನ ಕೃಷಿ ನಡೆಯಿತು. ಬರೆಯುವದು, ಪತ್ರಿಕೆಗಳಿಗೆ ಕಳಿಸುವದು, ಧಾರಾವಾಹಿ ಕಾದಂಬರಿ, ಪುಸ್ತಕ ಪ್ರಕಟಣೆ ಅವರವು ಒಂದೊಂದೇ ಪ್ರಾರಂಭವಾಗಿ ನಾಡಿನಲ್ಲಿ ಜಯತೀರ್ಥರ ಹೆಸರಿಗೆ ಜಯಭೇರಿ ತರುತ್ತಿದ್ದವು.

ಮತ್ತೊಮ್ಮೆ 1968-69ರಲ್ಲಿರಬೇಕು. ರಾಯಚೂರಿನಲ್ಲಿ ಮುನ್ಸಿಪಾಲಿಟಿ ಕಮಿಷನರ್ ಆಗಿ ಗಂಗಾ ನಿವಾಸದಲ್ಲಿದ್ದರು. ರಾಯಚೂರಿನಲ್ಲಿ ಗುಲ್ಬರ್ಗಾ ವಿಭಾಗದ ಜಿಲ್ಲೆಗಳ ಕವಿಗಳ ಕುಟುಂಬ ಯೋಜನೆ ಪ್ರಚಾರಾರ್ಥ ಕವಿಗೋಷ್ಠಿ ಕರ್ನಾಟಕ ಸಂಘದಲ್ಲಿ ಸಂಜೆ ನಡೆಯಿತು. ಆ ರಾತ್ರಿ ಅಲ್ಲಿಗೆ ಬಂದಿದ್ದ ಎಲ್ಲರನ್ನೂ 15-20 ಜನ

ಲೇಖಕರನ್ನು ತಮ್ಮ ಮನೆಗೆ ಆಮಂತ್ರಿಸಿ ಊಟ, ಫಳಾರ, ಚಹ ಕೊಟ್ಟು ರಾತ್ರಿಯೆಲ್ಲಾ ಅವರ ಮನೆಯಲ್ಲೇ ಮತ್ತೊಂದು ಕವಿಗೋಷ್ಠಿ. ಕವಿತೆಯ ಬಗ್ಗೆ ಚರ್ಚೆ. ಹರಟೆ, ನಗೆ ಬೆಳಗಿನ ತನಕ ನಡೆಯಿತು. ಅವರ ಶ್ರೀಮತಿ ಸೀತಮ್ಮನವರೂ ಮಕ್ಕಳೂ ಭಾಗವಹಿಸಿದ್ದರು,

1969 ರಿಂದ 1970-71-72ರ ವರೆಗೆ ಬಳ್ಳಾರಿ ಜಿಲ್ಲೆಯಲ್ಲಿ ನೀರಾವರಿ ತೆರಿಗೆ ವಿಧಿಸುವ ಅಸಿಸ್ಟೆಂಟ್ ಕಮಿಷನರ್, ಕೆಲವು ದಿನ ಇನ್‌ಚಾರ್ಜ್ ಡೆಪ್ಯೂಟಿ ಕಮಿಷನರ್, ಸ್ಪೇಶಲ್ ಡೆಪ್ಯೂಟಿ ಕಮಿಷನರ್ ಆಗಿದ್ದರು. ನಾನು ಬಳ್ಳಾರಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಸಮಿತಿಗೆ ಅಧ್ಯಕ್ಷನಾಗಿದ್ದೆ. ಈ 2-3 ವರ್ಷ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ, ನಗರದಲ್ಲಿ ಸಾಹಿತ್ಯ ಸಾಂಸ್ಕೃತಿಕ ಚಟುವಟಿಕೆ ಶ್ರೀ ರಾಜಪುರೋಹಿತರ ಮಾರ್ಗದರ್ಶನ, ಪ್ರೋತ್ಸಾಹದಿಂದ ಭರ್ಜರಿ ನಡೆದಿದ್ದುವು. ಎಲ್ಲ ಕಾರ್ಯಕ್ರಮಗಳಿಗೂ ಇವರು ಬೆನ್ನೆಲುಬಾಗಿ ನಿಂತು ಧನಸಂಗ್ರಹ, ಪೆಂಡಾಲ್ ಹಾಕಿಸುವುದು, ಅತಿಥಿಗಳನ್ನು ಕರೆಸುವುದು, ಕಳಿಸುವುದು, ಉಳಿಸುವುದು, ಊಟ—ವಸತಿ ವ್ಯವಸ್ಥೆ ಪತ್ರ ವ್ಯವಹಾರ ಇವರೇ ನೋಡಿಕೊಳ್ಳುತ್ತಿದ್ದರು. ಸಂಗ್ರಹಿಸಿದ ಹಣ ನಮ್ಮ ಕಡೆ ಕೊಟ್ಟು ಮತ್ತೆ ನಮ್ಮಿಂದ ಇಂತಿಂಥದ್ದಕ್ಕೆ ಇಷ್ಟು ಕೊಡಿರಿ ಎಂದು ಕೊಡಿಸುತ್ತಿದ್ದರು. ಬಳ್ಳಾರಿ ನಗರದಲ್ಲಿ 1970ರಲ್ಲಿ ರಾಜ್ಯೋತ್ಸವ, ಜಿಲ್ಲಾ ಸಾಹಿತ್ಯ ಸಮ್ಮೇಳನ, ಸಾಹಿತಿಗಳ ಸನ್ಮಾನ, ವಸಂತ ಸಾಹಿತ್ಯೋತ್ಸವ ಏರ್ಪಾಡು ಮಾಡಿಸಿ ಅಚ್ಚುಕಟ್ಟಾಗಿ ನೆರವೇರಿಸಿಕೊಟ್ಟರು. ನಾನು ನಾಮಕಾರ್ಥ ಅಧ್ಯಕ್ಷ. ಆದರೆ, ಶ್ರೀ ಜಯತೀರ್ಥ ರಾಜ ಪುರೋಹಿತರು ಉತ್ಸಾಹೀ ಕಾರ್ಯಾಧ್ಯಕ್ಷರಾಗಿರುತ್ತಿದ್ದರು, ತೆರೆಯ ಮರೆಯಲ್ಲಿ. ಪ್ರಿಂಟಿಂಗ್ ಪ್ರೆಸ್‌ಗೆ ಹೋಗಿ ಪ್ರೂಫ್ ತಿದ್ದುವ ಕೆಲಸವನ್ನು ತಿಂಗಳುಗಟ್ಟಲೆ ಮಾಡುತ್ತಿದ್ದರು. ಜಿಲ್ಲಾ ಪರಿಷತ್ತಿನ ಅಧ್ಯಕ್ಷನಾಗಿದ್ದ ನಾನು ತಣ್ಣಗೆ ಊರಲ್ಲಿ ವ್ಯಾಪಾರ ಮಾಡುತ್ತ (ಬೇಸಾಯದಲ್ಲಿ) ಇರುತ್ತಿದ್ದೆ. ನನ್ನನ್ನು ಆಗಾಗ ಪತ್ರ ಬರೆದು ಕರೆಸಿದಾಗ ಹೋಗುತ್ತಿದ್ದೆ. ಅವರ ಸಮರ್ಥ, ಸರಳ ನೇತೃತ್ವ, ಮುಖಂಡತ್ವದಲ್ಲಿ ಮೂರು ವರ್ಷದಲ್ಲಿ ಎರಡು ಜಿಲ್ಲಾ ಸಾಹಿತ್ಯ ಸಮ್ಮೇಳನ, ಎರಡು ಜಿಲ್ಲಾ ಸಮ್ಮೇಳನದ ಸ್ಮಾರಕ ಗ್ರಂಥ 'ಪಂಪಾ ಸಂಪದ' ಭಾಗ 1 ಮತ್ತು ಭಾಗ 2 ಮತ್ತು ಜಿಲ್ಲಾ ಕಥೆಗಾರರ ಕಥಾಸಂಕಲನ 'ಪಂಪಾ ತುಂತುರ' ಪ್ರಕಟವಾದುವು. ಇವೆಲ್ಲಾ ಕೆಲಸ ಕಾರ್ಯಗಳು ಶ್ರೀ ರಾಜಪುರೋಹಿತರ ನೆರವಿಲ್ಲದಿದ್ದರೆ ನಡೆಯಲಿಕ್ಕೆ ಸಾಧ್ಯವೇ ಇದ್ದಿಲ್ಲ. ಹಳ್ಳಿಯ ಮೂಲೆಗಳಿಂದ ಬಂದ ಸಣ್ಣ ಪುಟ್ಟ ದೊಡ್ಡ ಬರಹಗಾರರನ್ನು ಅವರು ಮನೆಗೆ ಕರೆಸಿಕೊಂಡು ಊಟ ತಿಂಡಿ ಕೊಟ್ಟು ಹರಟೆ ಹೊಡೆದು, ಮಾರ್ಗದರ್ಶನ ಮಾಡಿ, ಪುಸ್ತಕ ಕೊಟ್ಟು, ಬರೆಯಲು ಪ್ರೇರೇಪಿಸಿ ಕಳಿಸುತ್ತಿದ್ದರು. 1971-72ರಲ್ಲಿ ಅವರಿಗೆ ಬಳ್ಳಾರಿ ಜಿಲ್ಲೆಯಿಂದ ವರ್ಗವಾಗುವದೆಂಬ ವದಂತಿ ಬಂತು. ಶಿರುಗುಪ್ಪಾದಲ್ಲಿ ನಡೆದ ಬಳ್ಳಾರಿ ಜಿಲ್ಲೆಯ ಎರಡನೇ

ಸಾಹಿತ್ಯ ಸಮ್ಮೇಳನದಲ್ಲಿ ಅವರಿಗೆ ಶಾಲು ಹೊದಿಸಿ ಸನ್ಮಾನ ಮಾಡಿ ನಮ್ಮ ಜಿಲ್ಲೆಯವರೆಲ್ಲಾ ಕೃತಜ್ಞತೆ ಸಲ್ಲಿಸಿದೆವು. ಅವರನ್ನು ಸನ್ಮಾನಿಸಿದ ಪ್ರಥಮರಲ್ಲಿ ನಾವೇ ಇರಬೇಕೆಂದು ನನ್ನ ಊಹೆ. ಆಗಲೇ ಆಂಧ್ರಪ್ರದೇಶದ ಕನ್ನಡಿಗರು ಅತಿಥಿಗಳನ್ನೆಲ್ಲ ಆದವಾನಿಗೆ ಆಹ್ವಾನಿಸಿದಾಗ ಎಲ್ಲರೂ ಕನ್ನಡದ ಕೆಲಸಕ್ಕಾಗಿ ಅಲ್ಲಿಗೆ ಹೋಗಿಬಂದೆವು. ನೀರಾವರಿ ತೆರಿಗೆ ಹಾಕುವ ಕೆಲಸ; ಚುನಾವಣೆ ನಡೆಸುವ ಏರ್ಪಾಟು, ಮುಂತಾದ ಕೆಲಸದ ಮೇಲೆ ಹೊಸಪೇಟೆ, ಹಡಗಲಿ, ಹರಪನಹಳ್ಳಿ, ಹಗರಿಬೊಮ್ಮನಹಳ್ಳಿಗೆ ಬಂದಾಗ ನಮ್ಮ ಕುಗ್ರಾಮಗಳಿಗೆ, ಮನೆಗಳಿಗೆ ಬಂದು, ಚಹ ಕುಡಿದು ನಮ್ಮನ್ನು ಅವರ ಜೀಪು ಕಾರಿನಲ್ಲಿ ಕರೆಕೊಂಡು ಸರ್ಕಾರಿ ಅತಿಥಿಗೃಹಗಳಿಗೆ ಹೋಗಿ ರಾತ್ರಿ, ಸಾಹಿತ್ಯಕ ಚರ್ಚೆ, ಬರವಣಿಗೆಗೆ ಮಾರ್ಗದರ್ಶನ ಮಾಡಿ, ಊರಿಗೆ ತಂದು ಬಿಟ್ಟು ಬಳ್ಳಾರಿ ನಗರಕ್ಕೆ ಹೋಗುತ್ತಿದ್ದರು. ಯಾವ ಜಿಲ್ಲೆಗೇ ಹೋಗಲಿ, ಎಲ್ಲೇ ಇರಲಿ ಸಾಹಿತಿಗಳ ಸಂಪರ್ಕ ಪಡೆದು ಸಂತೋಷಪಡುವ, ಸಂತೋಷ ಕೊಡುವ ಸ್ವಭಾವ ಶ್ರೀ ಜಯತೀರ್ಥ ರಾಜಪುರೋಹಿತರದು. 1975ನೇ ಇಸ್ವಿ ಚಿತ್ರದುರ್ಗದಲ್ಲಿ ವಿಶೇಷ ಜಿಲ್ಲಾಧಿಕಾರಿಯಾಗಿ ಶ್ರೀ ಜಯತೀರ್ಥ ರಾಜಪುರೋಹಿತರಿದ್ದಾಗ ಜಿಲ್ಲಾ ಜಾನಪದ ಕಲಾ ಪ್ರದರ್ಶನ ನಡೆಯಿತು. ನಾನೂ ನೋಡಲು ಹೋದಾಗ ಅವರು ಬಹಳ ಗಲಾಟೆಯಲ್ಲಿದ್ದರು. ನಮಸ್ಕರಿಸಿದೆ. ನಕ್ಕು ಸಚಿವರ ಜೊತೆ ಸಭಾಂಗಣಕ್ಕೆ ಹೋಗಿ ಸ್ವಾಗತ ಮಾಡುವಾಗ ಬೇರೆ ಜಿಲ್ಲೆಯಿಂದ ಬಂದ ಹಲಜನ ನನ್ನಂಥವರನ್ನೂ ಹೆಸರಿಸಿ ಸ್ವಾಗತಿಸಿದರು. ಆ ಗಲಾಟೆಯಲ್ಲಿ ಅವರ ಶ್ರೀಮತಿ ಸೀತಮ್ಮನವರು ಸಾಮಾನ್ಯರೆಲ್ಲ ಕೂಡ್ರುವ ಸ್ಥಳದಲ್ಲಿದ್ದು, ನನ್ನನ್ನು ಗುರ್ತು ಹಿಡಿದು ಮಾತನಾಡಿಸಿದರು. ನನಗೆ ಮೊದಲು ನೆನಪಾಗಲಿಲ್ಲ. ನಂತರ ಶ್ರೀಮತಿ ರಾಜಪುರೋಹಿತರೆಂದು ಸ್ಮರಿಸಿ ನನ್ನ ದಡ್ಡತನಕ್ಕೆ ನಾನೇ ನಾಚಿ ವ್ಯಸನಪಟ್ಟೆ.ಮರುದಿನ ಶ್ರೀ ಜಿ. ನಾರಾಯಣ ಶ್ರೀ ಎಚ್.ಎಲ್. ನಾಗೇಗೌಡರು, ಶ್ರೀ ಗೊರೂರರವರು, ನನ್ನನ್ನು, ಮುದೇನೂರು ಸಂಗಣ್ಣರನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಗುಲಾಬ್ ಜಾಮೂನು, ಇಡ್ಲಿ ಚಟ್ನಿ, ಖಾರ, ಚಹ ಕೊಟ್ಟು ತೃಪ್ತಿಪಡಿಸಿ ಸಾಕಷ್ಟು ಸುದ್ದಿ, ಸುಖ ದುಃಖ ಚರ್ಚಿಸಿದರು. ಗೌರವದಿಂದ ನಮ್ಮನ್ನು ಕಂಡರು.

1977–78ರಲ್ಲಿ ಬೆಂಗಳೂರಲ್ಲಿ ಕನ್ನಡ-ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿದ್ದಾಗ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶ್ರೀ ಜಯತೀರ್ಥ ರಾಜಪುರೋಹಿತರ ಭೆಟ್ಟಿಯಾಯಿತು. ಸಭೆ ಮುಗಿದ ನಂತರ ಕಾರಿನಲ್ಲಿ ಜಯ ಮಹಲ್(ರಾಜ ಮಹಲ್) ಬಡಾವಣೆಯ ಅವರ ಮನೆಗೆ ಸಾಮಾನ್ಯ ರೈತನಾದ ನನ್ನನ್ನು ಕರಕೊಂಡು ಹೋಗಿ ಸೀತಮ್ಮನವರ ದರ್ಶನ ಮಾಡಿಸಿ, ಫಳಾರ, ಕಾಫಿ ಕೊಟ್ಟು ಮತ್ತೆ ನನ್ನನ್ನು ಚಾಮರಾಜಪೇಟೆಗೆ ಸಿಟಿ ಬಸ್ಸು ಹತ್ತಿಸಿ ಕಳಿಸಿಕೊಟ್ಟರು. ಸಣ್ಣವರು ದೊಡ್ಡವರೆನ್ನದೆ, ನಮ್ಮವರು ತಮ್ಮವರೆನ್ನದೆ, ಹಳ್ಳಿ ಪಟ್ಟಣಿಗರೆನ್ನದೆ ಎಲ್ಲರನ್ನೂ ನಗು ನಗುತ್ತಾ

ಮಾತಾಡಿಸಿ, ಉಭಯ ಕುಶಲೋಪರಿ ಕೇಳಿ, ಮನೆ ಕಡೆಗೆ ಕರೆದುಕೊಂಡು ಹೋಗಿ, ಊಟ-ತಿಂಡಿ ಕೊಟ್ಟು ಕಳಿಸುತ್ತಾರೆ. ನಾವು ಉಂಡ ಎಲೆ-ಗಂಗಾಳ ನಮ್ಮಿಂದ ತೆಗಿಸದೆ, ನಾವು ತಿಂದ ಪ್ಲೇಟ್, ಕುಡಿದ ಕಪ್ಪನ್ನು ನಮ್ಮಿಂದ ಮುಟ್ಟಿಸದೆ, ಮಕ್ಕಳಿಗೆ-ಪತ್ನಿಗೆ ಹೇಳಿ ತೆಗೆಸುತ್ತಾರೆ. ಕಾರನ್ನು ಸ್ವಂತ ಅವರೇ ನಡೆಸುತ್ತಾ, ಎಲ್ಲಿಯಾದರೂ ನಿಂತರೆ ಅವರೇ ದಬ್ಬುತ್ತಾರೆ. ಮಕ್ಕಳ ಲಗ್ನವಾದರೆ ಎಲ್ಲರನ್ನೂ ನೆನಪುಮಾಡಿಕೊಂಡು ಲಗ್ನ ಪತ್ರಿಕೆ ಕಳಿಸುತ್ತಾರೆ. ಇದನ್ನೆಲ್ಲಾ ಗಮನಿಸಿದರೆ ಇವೆಲ್ಲಾ ಸಣ್ಣ ಸಂಗತಿಗಳಲ್ಲ. ಉಚ್ಚ ಕುಲದಲ್ಲಿ ಹುಟ್ಟಿ, ದೊಡ್ಡ ಅಧಿಕಾರಿಯಾಗಿ, ಅವರು ಮನೆಯಲ್ಲಿ, ಆಫೀಸಿನಲ್ಲಿ, ಸಮಾಜದಲ್ಲಿ, ಕನ್ನಡದ ಕೆಲಸಗಳಲ್ಲಿ ಅವರು ವರ್ತಿಸುವುದು ನೋಡಿದರೆ ಹಸಿದ ಹೊಟ್ಟೆ, ತುಂಬಿದಂತಾಗಿ ಸಂತೃಪ್ತಿಯಾಗಿ, ಮೂಕ ವಿಸ್ಮಿತನಾಗುತ್ತೇನೆ. ಬರೆಯುತ್ತಾ ಹೋದರೆ ಬಹಳವಾಗುತ್ತದೆ. ಸ್ಯಾಂಪಲ್‌ಗಾಗಿ ಕೆಲವು ವಿಷಯಗಳನ್ನು ಬರೆದಿದ್ದೇನೆ. ಇಂಥಾ ನೂರಾರು ವಿಷಯ ಸಾಧನೆ ಸಿದ್ಧಿ ಶ್ರೀ ಜಯತೀರ್ಥ ರಾಜ ಪುರೋಹಿತರ ಬಗ್ಗೆ ಇವೆ. ದೇವರು ಅವರಿಗೆ ಆಯುರಾರೋಗ್ಯ ಭಾಗ್ಯಗಳನ್ನು ಕೊಟ್ಟು ಇನ್ನೂ ಅನೇಕ ದಶಕಗಳವರೆಗೆ ಅವರು ನಾಡಿನ ನುಡಿಯ ಸೇವೆ ಮಾಡಲೆಂದು ಹಾರೈಸುತ್ತೇನೆ.

"ಪ್ರಾದೇಶಿಕ ಭಾಷೆ ಬರಲಾರದ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರು ಆ ಭಾಷೆಗೆ ಪರೋಕ್ಷವಾಗಿ ಆತಂಕ ಒಡ್ಡುವ ಒಂದು ಪ್ರಬಲವರ್ಗವೆಂಬುದು ಅನೇಕ ಆಯೋಗಗಳ ಅಭಿಪ್ರಾಯ."

# ಹೈದ್ರಾಬಾದಿನ ನಾಡಹಬ್ಬದ ಕಾರ್ಯದರ್ಶಿ

**ಪಿ. ಗೋವಿಂದರಾವ್**

ಜಿಲ್ಲಾ ಖಜಾನೆ ಅಧಿಕಾರಿ, ವಿಜಾಪುರ

1947ರಲ್ಲಿ ಸಾವಿರಾರು ವಿದ್ಯಾರ್ಥಿಗಳೊಡನೆ ಶ್ರೀ ಜಯತೀರ್ಥ ರಾಜಪುರೋಹಿತರೂ ವಿಶ್ವವಿದ್ಯಾಲಯದ ವರ್ಗಗಳನ್ನು ಬಹಿಷ್ಕರಿಸಿ ನಿಜಾಮ ರಾಜ್ಯದ ಗಡಿ ಪ್ರದೇಶಗಳಲ್ಲಿ 'ಶಿಬಿರ'ಗಳನ್ನು ಸ್ಥಾಪಿಸಿ ಹೈದ್ರಾಬಾದ್ ವಿಮೋಚನಾ ಆಂದೋಲನದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. 1948ರಲ್ಲಿ ಅವರು ಭಾರತ ಸರ್ಕಾರದ ಪೋಲಿಸ್ ಕಾರ್ಯಾಚರಣೆಯ ಫಲಸ್ವರೂಪವಾಗಿ ವಿಜಯಿಗಳಾಗಿ ಹೈದ್ರಾಬಾದಿಗೆ ಮರಳಿ ಬಂದರು. ಬಿ.ಎ., ಪದವಿಯನ್ನು ಪಡೆದರು. ಆದರೂ ಅವರ ಮನಸ್ಸು ವ್ಯಗ್ರವಾಗಿತ್ತು. ನಿಜಾಮನ ರಾಜ್ಯವೇನೋ ಅಳಿದಿತ್ತು. ಆದರೆ ಅವರು ಪ್ರಚುರ ಪಡಿಸಿದ "ಹೈದ್ರಾಬಾದ್ ಸಂಸ್ಕೃತಿ" ಇನ್ನೂ ಜೀವಂತವಿತ್ತು. ಹೈದ್ರಾಬಾದಿನಲ್ಲಿ ಕನ್ನಡ ಸಂಸ್ಕೃತಿ ಉಳಿದು ಬೆಳೆಯಬೇಕು, ಹೇಗೆ ? ಇದು ರಾಜಪುರೋಹಿತರಿಗೆ ಎದುರಾದ ಪ್ರಶ್ನೆ.

1949 ಸೆಪ್ಟಂಬರ್ ತಿಂಗಳಿನ ಒಂದು ರಾತ್ರಿ. ಹೊಸ ಹೈದ್ರಾಬಾದ್ ರಾಜ್ಯದ ಲೋಕೋಪಯೋಗಿ ಮಂತ್ರಿಗಳಾದ ಡಾ. ಜಿ. ಎಸ್. ಮೇಲ್ಕೋಟೆಯವರ ಮನೆಯಲ್ಲಿ 11 ಗಂಟೆಯ ನಂತರ ಚರ್ಚೆ ಪ್ರಾರಂಭವಾಯಿತು. ಆಗಿನ ಕಾಂಗ್ರೆಸ್‌ಗೆ ಜನರಲ್ ಸೆಕ್ರೆಟರಿಗಳಾಗಿದ್ದ ಜಿ.ಕೆ.ಪ್ರಾಣೇಶಾಚಾರ್ಯರು, ನೃಪತುಂಗ ವಿದ್ಯಾಲಯದ ಉಡುಪಾಚಾರ್ಯರು, ರಾಘವೇಂದ್ರ ಇಟಗಿ, ಜಯತೀರ್ಥ ರಾಜಪುರೋಹಿತ, ಜಿ. ವಿ. ಸೂಳೆಬಾವಿ, ಎನ್. ಎನ್. ಕಠಾವಿ, ಪಿ. ಗೋವಿಂದ ರಾವ್, ಎಂ. ಎಸ್. ಶಾಮಯ್ಯಂಗಾರ್, ಎ. ಹೆಚ್. ದೇಸಾಯಿ, ಗಣೇಶ ಜೋಶಿ ಇನ್ನೂ ಹಲವು ಉತ್ಸಾಹಿಗಳು ಭಾಗವಹಿಸಿದ್ದರು. ಮಹಾರಾಷ್ಟ್ರೀಯರು ಗಜಾನನೋತ್ಸವದ ಮೂಲಕ ತಮ್ಮ ಸಂಸ್ಕೃತಿಯ ಪ್ರಚಾರ ಮಾಡುತ್ತಿರುವಂತೆ ಕನ್ನಡಿಗರಾದ ನಾವು ಈ ನಾಡಹಬ್ಬವನ್ನು ಆಚರಿಸಬೇಕು. ಇದಕ್ಕೆ ಎಲ್ಲರದೂ ಒಪ್ಪಿಗೆ. ಆಗ ರಾಜಪುರೋಹಿತರು ಹೇಳಿದರು — "ಹಿಂದೆಯೂ

ನಾಡಹಬ್ಬಗಳನ್ನು ಆಚರಿಸಿದ್ದೀರಿ. ಒಬ್ಬ ಸಾಹಿತಿಯನ್ನು ಆಮಂತ್ರಿಸಿ 15–20 ಸಭಿಕರೆದುರು ಭಾಷಣ ಮಾಡಿಸಿದ್ದೀರಿ. ಕೀರಲು ಧ್ವನಿಯ ಸಂಗೀತಾಭ್ಯಾಸಿ ಬಾಲಿಕೆಯಿಂದ ನಾಲ್ಕಾರು ದಾಸರ ಪದಗಳನ್ನು 'ಎದ್ದೋಡಿ' ರಾಗದಲ್ಲಿ ಹಾಡಿಸಿ ಸಂಸ್ಕೃತಿ ಪ್ರಚಾರವಾಯಿತೆಂದು ಭಾವಿಸಿದ್ದೀರಿ. ಇಂಥ ನಾಡಹಬ್ಬಗಳಿಂದ ಪ್ರಯೋಜನವಿಲ್ಲ. ಇವತ್ತು ನಾವು ಸಂದಿಗ್ಧ ಪರಿಸ್ಥಿತಿಯಲ್ಲಿದ್ದೇವೆ. "ಹೈದ್ರಾಬಾದ್ ಸಂಸ್ಕೃತಿ"ಯ ದಾಳಿಯಿಂದ ಕನ್ನಡ ಸಂಸ್ಕೃತಿಯನ್ನು ಉಳಿಸಿಕೊಳ್ಳಬೇಕಾಗಿದೆ. ಹೈದ್ರಾಬಾದಿನಲ್ಲಿ ಕನ್ನಡಿಗರಿದ್ದಾರೆ ಎಂದು ಎಲ್ಲ ಭಾಷೆಗಳವರಿಗೂ ತಿಳಿಯುವಂತೆ ನಾವು ನಾಡಹಬ್ಬವನ್ನು ಆಚರಿಸೋಣ. ಆಂಧ್ರ, ತಮಿಳು, ಮರಾಠಿ ಸಂಸ್ಕೃತಿಗಳೊಂದಿಗೆ ಸಹಯೋಗಕ್ಕೂ ಕನ್ನಡಿಗರು ಮುಂದಾಗಲಿ, ಸತತವಾಗಿ ಹತ್ತು ದಿನಗಳವರೆಗೆ ನಾಡಹಬ್ಬವನ್ನು ಅತಿ ವಿಜೃಂಭಣೆಯಿಂದ ಸರ್ವಾಂಗ ಸುಂದರವಾಗಿ ಆಚರಿಸೋಣ" ಎಂದು ಹೇಳಿದರು. ಆಗ ಪ್ರಾಣೇಶಾಚಾರ್ಯರು "ಹೌದು, ನಿಮ್ಮ ವಿಚಾರಗಳೇನೋ ಉತ್ಕೃಷ್ಟವಾಗಿವೆ. ಆದರೆ ಅದಕ್ಕೆ ತಗಲುವ ವೆಚ್ಚದ ಅಂದಾಜು ಹಾಕಿದ್ದೀರಾ ? ಎಷ್ಟು ಜನ, ಎಷ್ಟು ದಿನ ದುಡಿಯಬೇಕಾಗುವದೆಂಬುದನ್ನು ಲೆಕ್ಕ ಹಾಕಿದ್ದೀರಾ" ಎಂದು ಕೇಳಿದರು. ಎಲ್ಲರಿಗೂ ಒಂದು ಕ್ಷಣ ದಿಗಿಲಾಯಿತು. ಆಗ ಡಾ. ಮೇಲ್ಕೋಟೆಯವರು ಸಹಾಯಕ್ಕೆ ಬಂದರು. "ಹಣದ ವಿಷಯ ಯೋಚಿಸಬೇಡಿ. ಅದನ್ನು ನನಗೆ ಬಿಡಿ. ನೀವು ಏನೇನು ಯೋಜನೆ ಹಾಕುತ್ತೀರೋ ಹಾಕಿ. ಮೊದಲು ಉತ್ಸವ ಸಮಿತಿಯ ಆಯ್ಕೆ ಆಗಲಿ" ಎಂದರು. ಆಗ ಸರ್ವಾನುಮತದಿಂದ ಡಾ. ಜಿ. ಎಸ್. ಮೇಲ್ಕೋಟೆಯವರನ್ನು ಅಧ್ಯಕ್ಷರನ್ನಾಗಿಯೂ, ಪ್ರೊ. ಡಿ. ಕೆ. ಭೀಮಸೇನ ರಾಯರನ್ನು ಉಪಾಧ್ಯಕ್ಷರನ್ನಾಗಿಯೂ, ಜಯತೀರ್ಥ ರಾಜಪುರೋಹಿತರನ್ನು ಕಾರ್ಯದರ್ಶಿಯನ್ನಾಗಿಯೂ ಆರಿಸಲಾಯಿತು. ಹನ್ನೆರಡು ಜನ ಸದಸ್ಯರ ಉತ್ಸವ ಸಮಿತಿಯನ್ನೂ ರಚಿಸಲಾಯಿತು. ಆದರೆ ಉತ್ಸವದ ಸಂಪೂರ್ಣ ಯೋಜನೆ, ವ್ಯವಸ್ಥೆ, ನಿರ್ವಹಣೆಗಳೆಲ್ಲ ರಾಜಪುರೋಹಿತರ ಪಾಲಿಗೆ. ಜೀವದ ಹಂಗು ತೊರೆದು ಹೈದ್ರಾಬಾದ್ 'ಶಿಬಿರ'ಗಳಲ್ಲಿ ಹೋರಾಡಿದ ಈ ಜೀವಕ್ಕೆ ನಾಡಹಬ್ಬದ ಸಮಸ್ಯೆಗಳು ಹೂವಿನಷ್ಟು ಹಗುರ. ನೀರು ಕುಡಿದಷ್ಟು ಸರಳ. ಸದಾ ಮಂದಸ್ಮಿತದೊಡನೆ ಯೋಜನೆಗಳನ್ನು ವಿವರಿಸುವಾಗ ಎಲ್ಲ ಸಹೋದ್ಯೋಗಿಗಳೂ ಇವರ ಜಾಣ್ಮೆಯ ಮೋಡಿಯಿಂದ ಆಕರ್ಷಿತರಾಗುತ್ತಿದ್ದರು. ನವೋತ್ಸಾಹದೊಡನೆ ಹಗಲಿರುಳು ನಾಡಹಬ್ಬಕ್ಕಾಗಿ ದುಡಿಯಲು ಸನ್ನದ್ಧರಾಗುತ್ತಿದ್ದರು. ರಾಜಪುರೋಹಿತರ ಯೋಜನೆ ಹೀಗಿತ್ತು. "ಈ ವರ್ಷದಿಂದ ಪ್ರಾರಂಭವಾಗಿ ಇನ್ನು ಮುಂದೆ ಪ್ರತಿ ವರ್ಷ ನಾಡಹಬ್ಬವನ್ನು ಹತ್ತು ದಿನ ಆಚರಿಸಬೇಕು. ಪ್ರತಿದಿನ ಒಬ್ಬೊಬ್ಬರು ಅಧ್ಯಕ್ಷರಾಗಬೇಕು. ಹೈದ್ರಾಬಾದ್, ಸಿಕಿಂದ್ರಾಬಾದ್ ನಗರಗಳಲ್ಲಿ ಸಾಕಷ್ಟು ಉತ್ಸಾಹಿ ಶ್ರೀಮಂತರಿದ್ದಾರೆ. ಹಣದ ಚಿಂತೆಗೆ

ಕಾರಣವಿಲ್ಲ. ಮರುದಿನದಿಂದ ಕಾರ್ಯಾಚರಣೆಗೆ ಪ್ರಾರಂಭ. ಸೂಳೆಬಾವಿಯವರ ಕಾರಿನಲ್ಲಿ ಒಂದು ದಿನ, ಪ್ರಾಣೇಶಾಚಾರ್ಯರ ಕಾರಿನಲ್ಲಿ ಮತ್ತೊಂದು ದಿನ, ಡಾ. ಮೇಲ್ಕೋಟೆಯವರ ಕಾರಿನಲ್ಲಿ ಇನ್ನೊಂದುದಿನ ಹೀಗೆ ವರ್ಗಣೆ ಹಣ ಸಂಗ್ರಹ ಮಾಡಲು ರಾಜಪುರೋಹಿತ, ಉಡುಪಾಚಾರ್ಯ, ಶಾಮಯ್ಯಂಗಾರ್, ಇಟಗಿ ರಾಘವೇಂದ್ರ ಮತ್ತು ನಾನು ಹೊರಟೆವು. ಡಾ. ಮೇಲ್ಕೋಟೆಯವರು ಟೆಲಿಫೋನ್ ಮೂಲಕ ಎಲ್ಲರಿಗೂ ಮೊದಲೇ ಸೂಚನೆ ಕೊಟ್ಟಿದ್ದರು. ನಾವು ಭೇಟಿ ಮಾಡಿದ ಮೊದಲ ಮನೆ ಸಿಕಂದ್ರಾಬಾದಿನ ಸುಪ್ರಸಿದ್ಧ ಕಂಟ್ರಾಕ್ಟರ್ ಶ್ರೀ ಎಂ. ಜಿ. ಲಕ್ಷ್ಮಿನರಸು ಅವರ ಮನೆ. ಇದಕ್ಕೆ ಮನೆ ಎನ್ನುವದಕ್ಕಿಂತಲೂ ಅರಮನೆಯೆನ್ನುವುದು ಹೆಚ್ಚು ಸೂಕ್ತ. ಇವರು ಸುಪ್ರಸಿದ್ಧ ಕ್ರಿಕೆಟ್ ಆಟಗಾರ ಎಂ. ಎಲ್. ಜಯಸಿಂಹ ಅವರ ತಂದೆ. ನಮ್ಮನ್ನು ಪ್ರೀತಿಯಿಂದ ಬರಮಾಡಿಕೊಂಡು 501 ರೂಪಾಯಿಗಳನ್ನು ಸಂತೋಷದಿಂದ ಕೊಟ್ಟರು. ನಮಗೆ ಹರ್ಷವೋ ಹರ್ಷ. ನಂತರ ಹೈದ್ರಾಬಾದ್ ರಾಜ್ಯದ ಅಡ್ವೋಕೇಟ್ ಜನರಲ್ ಶ್ರೀ ಎನ್. ಎಸ್. ರಾಘವನ್ ಅವರು 101 ರೂಪಾಯಿಗಳನ್ನು ಕೊಟ್ಟು ಒಂದು ದಿನ ಅಧ್ಯಕ್ಷರಾಗಲು ಒಪ್ಪಿದರು. ಸುಪ್ರಸಿದ್ಧ ನ್ಯಾಯವಾದಿಗಳೂ, ಸಿ. ರಾಜಗೋಪಾಲಾಚಾರ್ಯರ ಬಂಧುಗಳೂ ಆದ ಸಿ. ರಂಗಾಚಾರ್ಯ ಅವರೂ 101 ರೂಪಾಯಿ ಕೊಟ್ಟು, ಒಂದು ದಿನದ ಅಧ್ಯಕ್ಷತೆಗೆ ಒಪ್ಪಿದರು. ಮೊದಲ ದಿನದ ನಮ್ಮ ವಂತಿಗೆ ಒಂದು ಸಾವಿರ ರೂಪಾಯಿಗಳಿಗೂ ಮಿಕ್ಕಿತ್ತು. ಸಂತೋಷದಿಂದ ದೋಸೆ ತಿನ್ನಲು 'ಆನಂದ ಭವನ'ಕ್ಕೆ ಹೋದರೆ ಅಲ್ಲಿ 151 ರೂಪಾಯಿ ಸಿಕ್ಕಬೇಕೆ? ಮರುದಿನ ಸುಮಾರು ಎಂಟು ನೂರು ರೂಪಾಯಿ ಸಂಗ್ರಹವಾಯಿತು. ಚಿಲ್ಲರೆ ವಂತಿಗೆಯನ್ನು ಪಡೆಯಲು ಇನ್ನೂ ಹಲವರು, ಮನೆ ಮನೆಗೆ ಭೇಟಿ ನೀಡುತ್ತಿದ್ದರು. ಹೀಗೆ ನಾಡಹಬ್ಬದ ಹಣದ ಸಮಸ್ಯೆ ಬಗೆ ಹರಿಯಿತು. ಹಣದ ಜೊತೆಗೆ ಸಾವಿರಾರು ಕನ್ನಡಿಗರ ಪರಿಚಯ ಮಾತ್ರವಲ್ಲದೆ ಅವರಲ್ಲಡಗಿದ್ದ ಸುಪ್ತ ಅಭಿಮಾನದ ಅರಿವೂ ನಮಗಾಯಿತು.

ಇನ್ನು ಕಾರ್ಯಕ್ರಮಗಳ ಸಂಘಟನೆ. ದಿನಾಲು ಮಧ್ಯ ರಾತ್ರಿಯವರೆಗೆ ಡಾ. ಮೇಲ್ಕೋಟೆಯವರ ಮನೆಯಲ್ಲಿ ಎಲ್ಲರೂ ಸೇರುತ್ತಿದ್ದರು. ರಾಜಪುರೋಹಿತರು ದಿನಾಲು ಒಂದೊಂದು ಸಮಂಜಸವಾದ ಹೊಸ ಯೋಜನೆಯನ್ನು ಹೇಳುವರು. ಟೆಲಿಫೋನ್ ಮೂಲಕ ಕಾರ್ಯಾರಂಭ. 1949ರ ನಾಡಹಬ್ಬದ ಉದ್ಘಾಟನೆಗಾಗಿ ಕೇಂದ್ರದ ಬಾನುಲಿ ಮತ್ತು ಪ್ರಸಾರ ಇಲಾಖೆಯ ಮಂತ್ರಿಗಳಾಗಿದ್ದ ಶ್ರೀ. ಆರ್. ಆರ್. ದಿವಾಕರ್‌ರವರು ಬರಲು ಒಪ್ಪಿಕೊಂಡರು. ಕನ್ನಡದ ಹಿರಿಯ ಸಾಹಿತಿ ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರರಿಂದ ಒಪ್ಪಿಗೆ ಪತ್ರ ಬಂತು. ಎಲ್ಲ ಕಾರ್ಯಕರ್ತರಿಗೆ ಹೊಸ ಹುರುಪು ಬಂತು. ಡಾ. ಮೇಲ್ಕೋಟೆಯವರ ಮನೆಯಿಂದ ಬಂದ ಮೇಲೆ ಹೊರಗೆ ಯಾವುದೋ ಇರಾಣಿ ಹೋಟಲ್‌ನಲ್ಲಿ ಚಹಾ ಕುಡಿಯುತ್ತ

ರಾಜಪುರೋಹಿತರು ಹೊಸ ಯೋಜನೆಗಳನ್ನು ಹೇಳಿ ಚರ್ಚಿಸುತ್ತಿದ್ದರು. ಬೆಳಗಿನ 3-4 ಗಂಟೆಯುವರೆಗೂ ಚರ್ಚೆ ನಡೆಯುತ್ತಿತ್ತು. ರಾಜಪುರೋಹಿತರ ಮೆದುಳು ಯೋಜನೆಗಳ ಖಜಾನೆ. ಅವರಿಗೆ ದಣಿವೆಂಬುದೇ ಇರಲಿಲ್ಲ. ನಿದ್ದೆಗೆಟ್ಟರೂ ತಾಳ್ಮೆಗೆಟ್ಟವರಲ್ಲ. ಮಂದಸ್ಮಿತ ಬಾಡುತ್ತಿರಲಿಲ್ಲ. ಇದರಿಂದಾಗಿ ಕಾರ್ಯಕರ್ತರಲ್ಲಿ ವಿರಸ ಎಂದೂ ತಲೆದೋರಲಿಲ್ಲ.

ಹೈದ್ರಾಬಾದಿನಲ್ಲಿ ಕನ್ನಡ ಚಟುವಟಿಕೆಗಳಿಗಾಗಿ ಸ್ಥಳದ ಕೊರತೆಯಿತ್ತು. 1949ರಲ್ಲಿ 'ರಾಜಾಪ್ರತಾಪ ಗಿರಿಜ ಕೋಠಿ'ಯನ್ನು ಬಾಡಿಗೆ ಹಿಡಿದು ನಾಡಹಬ್ಬ ಆಚರಿಸಲಾಯಿತು. ಹೈದ್ರಾಬಾದ್ ಕಾಂಗ್ರೆಸ್ಸಿನ ಹಿರಿಯ ಮುಂದಾಳುಗಳಾಗಿದ್ದು, ನಿಜಾಮರ ಮಂತ್ರಿ ಮಂಡಲದಲ್ಲಿ ವ್ಯವಸಾಯ ಮಂತ್ರಿಯಾಗಿದ್ದು, ನಿಜಾಮರ ಪ್ರಾರ್ಥನೆಯನ್ನೂ ಮನ್ನಿಸದೆ, ಮಂತ್ರಿ ಪದವಿಗೆ ರಾಜೀನಾಮೆಯಿತ್ತು ಹೊರಬಂದ ಜನಪ್ರಿಯ ಕನ್ನಡ ನಾಯಕರಾದ ಶ್ರೀ ಗುಡಗುಂಟಿ ರಾಮಾಚಾರ್ಯರ ಪ್ರಯತ್ನದ ಫಲವಾಗಿ ನೃಪತುಂಗ ಶಾಲೆಗಾಗಿ ಒಂದು ಸ್ವಂತ ಕಟ್ಟಡವನ್ನು ಖರೀದಿ ಮಾಡಲಾಯಿತು. ಈ ಕಟ್ಟಡದಲ್ಲಿ 15-16 ಕೋಣೆಗಳೂ, ಒಂದು ಬಯಲು ರಂಗಭೂಮಿಗಾಗಿ ಕಟ್ಟೆ ಮತ್ತು ಸುಮಾರು ಏಳೆಂಟು ಸಾವಿರ ಸಭಿಕರು ಕುಳಿತುಕೊಳ್ಳಲು ಸ್ಥಳಾವಕಾಶವೂ ದೊರೆತವು. ಈ ಕಟ್ಟಡ ಕನ್ನಡಿಗರ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಚಟುವಟಿಕೆಗಳ ಕೇಂದ್ರವಾಯಿತು. 1950 ರಿಂದ ನಾಡಹಬ್ಬ ಕಾರ್ಯಕ್ರಮಗಳು ಇಲ್ಲಿಯೇ ನಡೆಯಲಾರಂಭಿಸಿದವು.

ಆಶ್ವಯುಜ ಮಾಸದ ಪ್ರತಿಪದೆಯಂದು ಭುವನೇಶ್ವರಿಯ ಸ್ಥಾಪನೆಯಾಗುವುದು. ದೇವಿಗಾಗಿ ಸುಂದರವಾದ ಮಂಟಪವನ್ನು ಖ್ಯಾತ ಕಲಾವಿದರಾದ ಶ್ರೀ ಕೆ. ಜಿ. ನಾಯಕ ಮತ್ತು ಶ್ರೀ ಧೀರಾಚಾರ್ಯ ವಾಡಪ್ಪಿಯವರು ನಿರ್ಮಿಸುತ್ತಿದ್ದರು. 'ನೃಪತುಂಗ ಮಹಾವಿದ್ಯಾಲಯ', 'ಶಾರದಾ ಕನ್ಯಾ ಶಾಲೆ' ಮತ್ತು ಇತರ ಕನ್ನಡ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಂದ ಧ್ವಜವಂದನೆ ಬಹಳ ಆಕರ್ಷಕವಾಗಿರುತ್ತಿತ್ತು. ಅತ್ಯಂತ ಹೆಚ್ಚು ಪ್ರಸಾರದಲ್ಲಿರುವ ಸ್ಥಳೀಯ ದಿನಪತ್ರಿಕೆಗಳಾದ 'ಡೆಕ್ಕನ್ ಕ್ರಾನಿಕಲ್', 'ಡೇಲಿ ನ್ಯೂಜ್' ಪತ್ರಿಕೆಗಳು ಮೊದಲ ಪುಟದಲ್ಲಿ 'ನಾಡಹಬ್ಬ ಸೆಲೆಬ್ರೇಷನ್ಸ್ ಪ್ರೊಗ್ರಾಮ್ ಫಾರ್ ಟುಡೆ' ಎಂಬ ಶೀರ್ಷಿಕೆಯುಲ್ಲಿ ಅಂದಂದಿನ ಕಾರ್ಯಕ್ರಮಗಳನ್ನು ವಿವರವಾಗಿ ಪ್ರಕಟಿಸುತ್ತಿದ್ದವು. ಇದರಿಂದ ನಾಡಹಬ್ಬ ಹೈದ್ರಾಬಾದ್ ಸಿಕಂದ್ರಾಬಾದ್ ನಗರಗಳ ಸರ್ವ ಭಾಷೆಗಳ ನಾಗರಿಕರ ಮನೆ ಮಾತಾಯಿತು. ಸಭಿಕರ ಸಂಖ್ಯೆ ಏಳೆಂಟು ಸಾವಿರದವರೆಗೆ ಏರಿತು. ಕನ್ನಡದ ನೂರು ಜನ ಸ್ವಯಂ ಸೇವಕರ ಪಡೆ ವ್ಯವಸ್ಥೆ ಮಾಡಲು ಸದಾ ಕಾರ್ಯೋನ್ಮುಖವಾಗಿರುತ್ತಿತ್ತು. ಎಲ್ಲ ಭಾಷೆಗಳ ಜನ ಬರುತ್ತಿರುವುದರಿಂದ ಬೇರೆ ಬೇರೆ ಭಾಷೆ ಸಂಸ್ಕೃತಿಗಳ ವಿಷಯವಾಗಿ ಪ್ರವಚನಗಳನ್ನು ಏರ್ಪಡಿಸಬೇಕಾಗುತ್ತಿತ್ತು. ಶ್ರೀ ರಾಜಪುರೋಹಿತರು ಅತ್ಯಂತ ವಿಚಕ್ಷಣತೆಯಿಂದ

ಕಾರ್ಯಕ್ರಮಗಳನ್ನು ನಿರೂಪಿಸುತ್ತಿದ್ದರು. ಆಂಧ್ರ ಪಿತಾಮಹ ಮಾಡ ಪಾಟಿ ಹನುಮಂತರಾಯರ ಅಧ್ಯಕ್ಷತೆಯಲ್ಲಿ ಶ್ರೀ ಸುರವರಂ ಪ್ರತಾಪ ರೆಡ್ಡಿಯವರು ಆರಂಭಕಾಲದ ತೆಲುಗು ಸಾಹಿತ್ಯದ ವಿಷಯವಾಗಿ ಹಿಂದಿ ಭಾಷೆಯಲ್ಲಿ ಭಾಷಣ ಮಾಡಿದರು. ಮರಾಠಿ ಪ್ರಾಧ್ಯಾಪಕರಾದ ಶ್ರೀ ವಿ. ಪಿ. ದೇವಳಗಾಂವ್‌ಕರ್ ಅವರು ಮರಾಠಿ ಸಾಹಿತ್ಯದ ವಿಷಯವಾಗಿ ಮಾತನಾಡಿದರು. ದಿವಾನ್ ಬಹದ್ದೂರ್ ಎಸ್. ಅರವ ಅಯ್ಯಂಗಾರ್‌ರವರ ಅಧ್ಯಕ್ಷತೆಯಲ್ಲಿ ಶ್ರೀ ಮೀನಾಕ್ಷಿ ಸುಂದರಂ ಅವರು 'ತಮಿಳು ಸಾಹಿತ್ಯ'ದ ವಿಷಯವಾಗಿ ಭಾಷಣ ಮಾಡಿದರು. ಶ್ರೀ ಡಿ. ಎಲ್. ನರಸಿಂಹಾಚಾರ್ಯರು 'ಕನ್ನಡ ಸಾಹಿತ್ಯದ ಸೊಬಗಿ'ನ ವಿಷಯ ಪಾಂಡಿತ್ಯಪೂರ್ಣ ವಾದ ಪ್ರವಚನ ನೀಡಿದರು. ಡಾ. ಆರ್ಯೇಂದ್ರ ಶರ್ಮಾ 'ಹಿಂದಿ ಸಾಹಿತ್ಯ'ದ ಬಗ್ಗೆ, ಪ್ರೊ. ಎಂ. ಎಸ್. ದೊರೆಸ್ವಾಮಿ ಅವರು 'ಇಂಗ್ಲೀಷ್ ಸಾಹಿತ್ಯ'ದ ಬಗ್ಗೆ, ಶ್ರೀ ಖಂಡೇ ರಾವ್ ಅವರು 'ಸಂಸ್ಕೃತ ಸಾಹಿತ್ಯ'ದ ಬಗ್ಗೆ ಮಾತನಾಡಿದರು. 'ಆಧುನಿಕ ಶೇಕ್ಸಪಿಯರ್' ಎಂದು ಹೆಸರಾದ ಪ್ರೊ. ಟಿ. ವೀರಭದ್ರುಡು ಅವರು ಶೇಕ್ಸ್‌ಪಿಯರ್ ಮಹಾಕವಿಯನ್ನು ಪುನರುಜ್ಜೀವನಗೊಳಿಸಿದರು. ಶ್ರೀ ರಾಜಪುರೋಹಿತರು ಎಲ್ಲ ಕಾರ್ಯಕ್ರಮಗಳನ್ನು ಸುಸಂಬದ್ಧವಾಗಿ, ಶಿಸ್ತಿನಿಂದ ನಡೆಸಿಕೊಡುತ್ತಿದ್ದರು. ಪಂಡಿತರಿಗೆ, ಸಾಹಿತ್ಯಾಭ್ಯಾಸಿಗಳಿಗೆ, ವಿದ್ಯಾರ್ಥಿಗಳಿಗೆ ಈ ಕಾರ್ಯಕ್ರಮಗಳು ವರದಾನವಾಗಿದ್ದವು. ವಿವಿಧ ಭಾಷೆಗಳ ಸಾಹಿತ್ಯ, ಸಂಸ್ಕೃತಿಗಳು ಹೊಸ ಮೆರಗು ಪಡೆದು ಪ್ರಕಾಶಮಾನವಾಗಿ ಪ್ರಚಾರವಾಗುತ್ತಿದ್ದವು.

ಶ್ರೀ ರಾಜಪುರೋಹಿತರು ಏರ್ಪಡಿಸಿದ ಇನ್ನೊಂದು ಕಾರ್ಯಕ್ರಮ ಅತ್ಯಂತ ರೋಮಾಂಚಕವಾಗಿತ್ತು. ಒಂದು ಆದಿತ್ಯವಾರ ಬೆಳಗಿನ 9 ಗಂಟೆಗೆ ಎಲ್ಲ ರಾಜಕೀಯ ಪಕ್ಷಗಳ ನಾಯಕರನ್ನು ಒಂದೇ ವೇದಿಕೆಯ ಮೇಲೆ ಅವರು ಸೇರಿಸಿದರು. 'ವಿಮೋಚನೆಯಾದ ಹೈದ್ರಾಬಾದ್‌ಗೆ ಎಂಥ ಸರ್ಕಾರ ಬೇಕು ?' ಇದು ಭಾಷಣದ ವಿಷಯ. ಕಾಂಗ್ರೆಸ್ ನಾಯಕರೂ, ಹೈದರಾಬಾದಿನ ಮುಖ್ಯ ಮಂತ್ರಿಗಳೂ ಆಗಿದ್ದ ಶ್ರೀ ಬುರಗುಲ ರಾಮಕೃಷ್ಣ ರಾಯರು ಕಾಂಗ್ರೆಸ್ಸಿನ ಪರವಾಗಿ, ಶ್ರೀಮತಿ ಸರೋಜಿನಿ ನಾಯಿಡು ಅವರ ಪುತ್ರ ಡಾ. ಎನ್. ಎಂ. ಜಯಸೂರ್ಯ ಅವರು ಕಮ್ಯೂನಿಸ್ಟ್ ಪಾರ್ಟಿಯ ಪರವಾಗಿ, ಶ್ರೀ ಬದರಿ ವಿಶಾಲಾ ಪಿಟ್ಟಿ ಮತ್ತು ಶ್ರೀ ವಾಯ್.ಶಿವರಾಮ ಶಾಸ್ತ್ರಿಯವರು ಸೋಸಿಯಲಿಸ್ಟ್ ಪಾರ್ಟಿ ಪರವಾಗಿ, ಶ್ರೀ ರಷೀದ ತರಾ ತುರಾಬ್ ಅವರು ಮುಸ್ಲಿಂ ಲೀಗ್ ಪರವಾಗಿ, ಪಂಡಿತ ನರೇಂದ್ರಜಿ ಅವರು ಹಿಂದು ಮಹಾ ಸಭಾ ಪರವಾಗಿ ಮಾತನಾಡಿದರು. ಸರ್ವರೂ ಭಿನ್ನಾಭಿಪ್ರಾಯಗಳನ್ನು ಹೇಳಿದರು. ಸಭೆಯಲ್ಲಿ ಸೌಹಾರ್ದತೆಯಿತ್ತು. ಹೈದ್ರಾಬಾದ್, ಸಿಕಂದ್ರಾಬಾದ್ ನಗರಗಳ ಸುಶಿಕ್ಷಿತ ವರ್ಗ ಈ ಕಾರ್ಯಕ್ರಮವನ್ನು ಬಹಳ ದಿನ ಮರೆಯಲಿಲ್ಲ. ಮರುದಿನ ಹಿಂದು ಪತ್ರಿಕೆಯಾದಿಯಾಗಿ ಎಲ್ಲ ಪತ್ರಿಕೆಗಳಲ್ಲಿ ವರದಿ ವಿವರವಾಗಿ ಪ್ರಕಟವಾಯಿತು.

ಈ ಮೂಲಕ ಕನ್ನಡಿಗರ ನಾಡಹಬ್ಬ ನಿಜವಾದ ರಾಷ್ಟ್ರೀಯ ಹಬ್ಬವಾಗಿಯೂ ಪ್ರಕಟವಾಯಿತು.

ಕನ್ನಡ ಸಂಸ್ಕೃತಿಯ ಅರಿವು ಅನ್ಯಭಾಷಾ ಬಾಂಧವರಿಗೂ ಮಾಡಿಕೊಡಬೇಕೆಂಬ ಉದ್ದೇಶದಿಂದ ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಶ್ರೀ ಅ. ನ. ಕೃಷ್ಣ ರಾಯರು, ಪ್ರೊ. ವಿ. ಕೆ. ಗೋಕಾಕ್, ಡಾ. ದ. ರಾ. ಬೇಂದ್ರೆ ಇವರಿಂದ ಕನ್ನಡ ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ಇಂಗ್ಲೀಷಿನಲ್ಲಿ ಭಾಷಣಗಳನ್ನು ಏರ್ಪಡಿಸಲಾಗಿತ್ತು. ಅಲ್ಲದೆ ಕನ್ನಡಿಗರಿಗಾಗಿ ಸುಪ್ರಸಿದ್ಧ ಸಾಹಿತಿಗಳಾದ ನಾ. ಕಸ್ತೂರಿ, ವಿ. ಸೀತಾ ರಾಮಯ್ಯ, ಬೀಚಿ, ಹೇಮಂತ ಕುಲಕರ್ಣಿ, ವಿ. ಎಂ. ಇನಾಂದಾರ್, ಬೆಟಗೇರಿ ಕೃಷ್ಣಶರ್ಮ, ನಿರಂಜನ, ತ. ರಾ. ಸು., ಜಿ. ಪಿ. ರಾಜರತ್ನಂ ಅಲ್ಲದೆ ಇನ್ನೂ ಅನೇಕಾನೇಕ ಸಾಹಿತಿಗಳಿಂದ ಪ್ರವಚನಗಳನ್ನು ಏರ್ಪಡಿಸಲಾಗುತ್ತಿತ್ತು.

ಇನ್ನು ಸಾಂಸ್ಕೃತಿಕ ಕಾರ್ಯಕ್ರಮಗಳ ವಿಷಯ. ಶ್ರೀ ರಾಜಪುರೋಹಿತರಿಗೆ ಇವುಗಳಲ್ಲಿ ವಿಶೇಷ ಆಸಕ್ತಿ. ಪ್ರತಿಯೊಂದು ಕಾರ್ಯಕ್ರಮ ಉನ್ನತ ಮಟ್ಟದ್ದಾಗಿರಬೇಕು. ನಮ್ಮ ಸಾಂಸ್ಕೃತಿಕ ಪರಂಪರೆಯನ್ನು ಅನ್ಯಭಾಷಾ ಬಂಧುಗಳಿಗೆ ಮೆಚ್ಚುಗೆಯಾಗುವಂತೆ ಪ್ರದರ್ಶನ ಮಾಡಬೇಕು. ಇದಕ್ಕಾಗಿ ಒಂದು ಪರಿಶೀಲನಾ ಸಮಿತಿ. ನೃಪತುಂಗ ಶಾಲೆ, ಶಾರದಾ ಕನ್ಯಾ ಶಾಲೆ, ನಿಜಾಮ್ ಕಾಲೇಜ್, ಚಾದರ ಘಾಟ್ ಕಾಲೇಜ್, ಸಿಟಿ ಕಾಲೇಜ್, ಬದ್ರೂಕಾ ಕಾಲೇಜ್, ಯೂನಿವರ್ಸಿಟಿ ಕಾಲೇಜ್ ಇವುಗಳ ಕನ್ನಡ ಸಂಘಗಳು ಅಲ್ಲದೆ ಕೊಪ್ಪಳ ಗೆಳೆಯರು ಮುಂತಾದ ವಿಲಾಸಿ ನಾಟಕ ಸಂಘಗಳು ಇವರ ನಡುವೆ ಒಂದು ರಚನಾತ್ಮಕವಾದ ಸ್ಪರ್ಧೆ ಏರ್ಪಟ್ಟಿತ್ತು. ಒಬ್ಬರಿಗಿಂತ ಮಿಗಿಲಾಗಿ ಇನ್ನೊಬ್ಬರು ನಾಟಕಗಳನ್ನು ಪ್ರದರ್ಶಿಸುತ್ತಿದ್ದರು. ಸುಮಾರಾಗಿ ಪ್ರತಿ ದಿನ 2, 3 ನಾಟಕಗಳು ನಡೆಯುತ್ತಿದ್ದವು. ಅಲ್ಲದೆ ದಿನಾಲು ಎರಡೋ ಮೂರೋ ಗುಂಪುಗಳಿಂದ ನೃತ್ಯ, ಲಘು ಸಂಗೀತ, ಕಾವ್ಯ ವಾಚನ ಮೊದಲಾದವು ಏರ್ಪಾಡಾಗುತ್ತಿದ್ದವು.

ಒಟ್ಟಿನಲ್ಲಿ ಅನಂತರದ ವರ್ಷಗಳಲ್ಲಿ ಜರುಗಿದ ನಾಡಹಬ್ಬಗಳಿಗೆ ರಾಜಪುರೋಹಿತರೂ ಹಾಗೂ ಅವರ ಮಿತ್ರರೆಲ್ಲ ಸಂಘಟಿಸಿದ 1949ರ ಬೃಹತ್ ಪ್ರಮಾಣದ ನಾಡಹಬ್ಬ ಒಂದು ಮಾದರಿಯಾಯಿತು.

# ಪುರುಷ 'ದಾದಿ' ಪುರೋಹಿತರು

**ರಾಮಪ್ರಸಾದ**
ಕನ್ನಡ ಪ್ರಭ

1956ರ ನವೆಂಬರ್ ಒಂದನೇ ದಿನ, 1973ರ ನವೆಂಬರ್ ಒಂದನೇ ದಿನ—ಕನ್ನಡನಾಡಿನ ಇತ್ತೀಚಿನ ಇತಿಹಾಸದಲ್ಲಿ ಮಹತ್ವದ ಮೈಲುಗಲ್ಲುಗಳು. ಒಂದು ಏಕೀಕೃತ ಕರ್ನಾಟಕ ಅವತರಿಸಿದ ದಿನ; ಮತ್ತೊಂದು ನಾಡಿನ ಹಿರಿಮೆಯನ್ನು ಎತ್ತಿ ಹಿಡಿವ ನಾಮಕರಣದ ದಿನ. ಈ ಮಹತ್ವದ ದಿನಗಳನ್ನು ಕಾಣಲು ಶ್ರಮಿಸಿದವರೆಷ್ಟು? ಅದೆಷ್ಟು ಮಂದಿ ಇವುಗಳಿಗಾಗಿ ತಪಸ್ಸು ನಡೆಸಿದರು? ಅವರೆಲ್ಲರೂ ನಾಡಿಗೆ, ನಾಡವರಿಗೆ ನಿತ್ಯ ಸ್ಮರಣೀಯರು.

1979ರ ನವೆಂಬರ್ ಒಂದನೇ ದಿನವೂ ಐತಿಹಾಸಿಕ ಪ್ರಾಮುಖ್ಯ ಪಡೆದಿದೆ. ಅಂದಿನಿಂದ ನಾಡಿನ ಜನಪದದ ಭಾಷೆಯೇ ಪ್ರಭುತ್ವದ ಭಾಷೆಯಾಯಿತು. ಈ ನಿರ್ಧಾರವೂ ನಿರಾಯಾಸವಾಗಿ ಆಗಲಿಲ್ಲ. ಇದಕ್ಕಾಗಿ ಶ್ರಮಿಸಿದವರು ಹಲವರು. ನಾಡಿನ ಭಾಷೆಯೇ ಸರ್ಕಾರದ ಭಾಷೆಯಾಗಲಿ ಎಂದು ಘೋಷಣೆ ಮಾಡಿದವರು, ಹುಯಿಲೆಬ್ಬಿಸಿದವರು ಎಲ್ಲರ ಕಣ್ಣಿಗೆ ಕಾಣಿಸಿದರು. ಆದರೆ ಕಣ್ಣಿಗೆ ಕಾಣಿಸದೆ ಧ್ಯೇಯ ಸಾಧನೆಗಾಗಿ ಶ್ರಮಿಸಿ ಅಗೋಚರರಾಗಿಯೇ ಉಳಿದವರು ಕೆಲವರು.

ಇದು ಜನತಂತ್ರ ಸರ್ಕಾರ. ಜನರೇ ನಮ್ಮ ನಿಜವಾದ ಅಧಿಪತಿಗಳು. ಅವರ ಕೆಲಸಗಳೆಲ್ಲ ಅವರಿಗೆ ತಿಳಿಯುವ ಭಾಷೆಯಲ್ಲೇ ಆಗಬೇಕು. ಹಾಗಾದರೆ ಮಾತ್ರ ಒಡೆಯರಿಗೆ ತಕ್ಕ ಗೌರವ ಸಂದಂತೆ. ನಾವು ಅಧಿಕಾರ ಸ್ಥಾನಗಳಲ್ಲಿ ಇದ್ದರೂ ಇದು ಜನತೆಯ ಅಪೇಕ್ಷೆಯ ಮೇಲೆ. ಅವರ ಅಪೇಕ್ಷೆಗೆ ವಿರುದ್ಧವಾಗಿ ನಡೆವರೆ ಅರೆ ಕ್ಷಣವೂ ಇಲ್ಲಿ ಉಳಿಯುವ ನೈತಿಕ ಹಕ್ಕು ನಮಗಿರುವುದಿಲ್ಲ—ಎಂದು ನಂಬಿ ನಡೆದವರು.

ಇಂಥದೊಂದು ಪರಂಪರೆಯೇ ಇದೆ. ಹಿಂದಿನ ಶತಮಾನದಲ್ಲೇ ನ್ಯಾಯಾಧೀಶರಾಗಿ ದುಡಿದು ಕೀರ್ತಿಶೇಷರಾದ ಶ್ರೀಕಂಠಗೌಡರು, ಇಂದಿಗೂ ನಮ್ಮನ್ನು ಹರಸುತ್ತಿರುವ ಆಚಾರ್ಯ ಮಾಸ್ತಿಯವರು, ದಿವಂಗತ ನವರತ್ನ ರಾಮರಾಯರು, ಹೆಚ್. ಎಲ್. ನಾಗೇಗೌಡರು, ಸಿದ್ಧಯ್ಯ ಪುರಾಣಿಕರು—ಈ ಎಲ್ಲರೂ ಕಾಲೇಜಿನಲ್ಲಿ

ಉನ್ನತ ವಿದ್ಯಾರ್ಹತೆ ಗಳಿಸಿದ್ದು ಇಂಗ್ಲೀಷಿನ ಮೂಲಕ. ಆಂಗ್ಲ ಪ್ರಾಧ್ಯಾಪಕರ ಪದತಳದಲ್ಲಿ ಕುಳಿತು ಕಲಿತು, ಆ ಭಾಷೆಯನ್ನು ಅರಗಿಸಿಕೊಂಡವರು. ಜ್ಞಾನಾರ್ಜನೆಯಾದ ಒಡನೆ ಜನಹಿತದ ಜಪಕ್ಕೆ ಇಳಿದವರು. ಇಂಗ್ಲೀಷ್‌ಮಯವಾದ ಆಡಳಿತದ ಕೀಲು-ಕೊಂಡಿಗಳಾಗಿ ಇದ್ದುಕೊಂಡೇ ಕನ್ನಡದ ಸಿರಿ-ಸಂಪದದ ಬೆಳಸಿಗೆ ಬೆವರಿಳಿಸಿದವರು.

ಇದೊಂದು ಅವಿಚ್ಛಿನ್ನ ಪರಂಪರೆ. ಈ ಪರಂಪರೆಗೆ ಸೇರಿದವರಲ್ಲಿ ಒಬ್ಬರು ನಮ್ಮ ರಾಜ್ಯದ ಐ. ಎ. ಎಸ್. ಅಧಿಕಾರಿ ಜಯತೀರ್ಥ ರಾಜಪುರೋಹಿತರು. ಅವರ ಮತ್ತು ಅವರ ಮನೋಧರ್ಮವನ್ನೇ ಹೊಂದಿರುವ ಅಧಿಕಾರಿಗಳ ಶ್ರಮ— 1979ರ ನವೆಂಬರ್ ಒಂದನೇ ದಿನಕ್ಕೆ ಇತಿಹಾಸದ ಸ್ಥಾನ ದೊರಕಿತು.

ಈ 'ಪುರೋಹಿತ'ರ ಪಾಡೂ ವಿಚಿತ್ರ. ಎಲ್ಲವೂ ಅಣಿಯಾದ ಮೇಲೆ ಆಢ್ಯತೆಯಿಂದ ಆಗಮಿಸುವ ಪುರೋಹಿತರಿಗೆ ಮಂಗಳವಚನ ಹೇಳುವುದಷ್ಟೇ ಕೆಲಸ. ತೋರಿಕೆಯ ಯಾಜಮಾನ್ಯವೆಲ್ಲ ಅವರದ್ದೇ. ಉತ್ಸವದ ಮುಖ್ಯ ಮೂರ್ತಿಯನ್ನು ಬಿಟ್ಟರೆ, ಎರಡನೇ ಪ್ರಾಧಾನ್ಯ ಸಿಗುವುದೆಲ್ಲ ಪುರೋಹಿತರಿಗೆ. ಅವರ ಆಜ್ಞೆ-ಆದೇಶಗಳೇ ಸರ್ವಮಾನ್ಯ. ಆದರೆ ನಮ್ಮ ಜಯತೀರ್ಥ ರಾಜ'ಪುರೋಹಿತ'ರು ಈ ಪ್ರಾಧಾನ್ಯ ಗಳಿಸಿಕೊಂಡಿದ್ದೇ ಇಲ್ಲ. ಅವರ ಸೇವೆಯು ಬಹುಪಾಲು 'ದಾದಿ'ಯ ಕರ್ತವ್ಯಕ್ಕೇ ಮೀಸಲಾದಂತಿದೆ. ಜನನಪೂರ್ವದ ಹೊಣೆ ನಿರ್ವಹಿಸುವ 'ದಾದಿ' ಯಂತೆಯೇ ಜಯತೀರ್ಥ ರಾಜಪುರೋಹಿತರು 'ಪುರುಷದಾದಿ'ಯಾಗಿಯೇ ಬೆಳೆದಿದ್ದಾರೆ. ಆಡಳಿತ ಭಾಷೆ ಕನ್ನಡಕ್ಕೂ ಈ ದಾದಿಯ ಪರಿಚರ್ಯೆ ದೊರೆತಿದೆ.

ಸೇವೆಯ ಆರಂಭದ ದಿನಗಳಲ್ಲೇ ವಿಶೇಷ ಭೂದಾಖಲೆ ಮತ್ತು ಬೇಸಾಯ ಅಂಕಿಅಂಶಗಳ ಸಂಗ್ರಹ ಕಾರ್ಯದ ಅಧಿಕಾರಿಯಾಗಿ ನೇಮಕ. ಕಛೇರಿಯೇ ಹೊಸದು. ಎಲ್ಲ ಆಗ ಹುಟ್ಟಿ ಬೆಳೆಯಬೇಕಾದ ಕೆಲಸ. ಹದಗೊಳಿಸಿಟ್ಟ ಜಾಡಿಲ್ಲ. ಕಛೇರಿಗೆ ಅಗತ್ಯವಾದ ಕುರ್ಚಿ-ಮೇಜುಗಳಿಂದ ಆರಂಭಿಸಿ ಎಲ್ಲವನ್ನೂ ಹೊಂದಿಸಿಕೊಳ್ಳಬೇಕು. 'ಇಷ್ಟಾಗಬೇಕು' ಎಂಬ ಸರ್ಕಾರಿ ಆದೇಶವೇನೋ ಇದೆ. ಆದರೆ ಹೇಗಾಗಬೇಕು, ಹೇಗೆ ಸಾಗಬೇಕೆಂಬುದಕ್ಕೆ ಮಾರ್ಗದರ್ಶನವಿಲ್ಲ. ಎಲ್ಲವನ್ನೂ ಕಲ್ಪಿಸಿಕೊಂಡು, ಕಾರ್ಯರೂಪಕ್ಕೆ ತರಬೇಕು. ಸರ್ಕಾರ ಇಟ್ಟ ನಂಬಿಕೆ ಸಾರ್ಥಕಗೊಳಿಸಬೇಕು.

ಸ್ವಲ್ಪ ಕಾಲದ ನಂತರ ಭೂಕಂದಾಯದ ಪುನರ್ವಿಮರ್ಶೆಯ ಅಧಿಕಾರಿಯಾಗಿ ನೇಮಕ. 30 ವರ್ಷಗಳ ಮೊದಲು ಭೂಮಿಯ ಗುಣ, ಒದಗಿದ್ದ ಸೌಕರ್ಯಗಳ ಆಧಾರದ ಮೇಲೆ ಮಾಡಿದ್ದ ಕಂದಾಯದ ಅಂದಾಜೆಲ್ಲ ಏರುಪೇರು. ಬದಲಾದ ಪರಿಸರಕ್ಕೆ, ಸೌಕರ್ಯಕ್ಕೆ ಹೊಂದಿಕೊಳ್ಳುವಂತೆ ಅಂದಾಜು ಕಟ್ಟಬೇಕು. ಸರ್ಕಾರಕ್ಕೆ ನಷ್ಟವಾಗಬಾರದು ; ಜನರಿಗೆ ಹೊರೆಯಾಗಬಾರದು ; ತಾರತಮ್ಯಕ್ಕೆ ಆಸ್ಪದವಿರ

ಬಾರದು. ಸೂಜಿ ಹಿಂಭಾರ–ಮುಂಭಾರದ ಸೂಕ್ಷ್ಮ ಕಾರ್ಯ. ಇದರಂತೆಯೇ ಸ್ಟ್ಯಾಂಪ್ ಇನ್ಸ್‌ಪೆಕ್ಟರ್ ಎಂಬ ಹೊಸ ಹುದ್ದೆ ಮತ್ತು ಕಛೇರಿಗಳ ಆರಂಭ.ನಿರ್ವಹಣೆ.

ಇನ್ನಷ್ಟು ಕಾಲದ ನಂತರ ಇನ್ನೊಂದು ಹೊಸ ಹುದ್ದೆ. ಸರ್ಕಾರ ತನ್ನ ಆದಾಯ ಭದ್ರಪಡಿಸಿಕೊಳ್ಳಲು ಕಂಡುಕೊಂಡ ಹೊಸಹಾದಿ ಅಭಿವೃದ್ಧಿ ತೆರಿಗೆ. ಇದರ ಕ್ಷೇತ್ರ–ಕಾರ್ಯದ ಹೊಣೆ ಹೆಗಲೇರಿತು. ಇದಾದನಂತರ ಕಾವೇರಿ ಕಣಿವೆ ನೀರಾವರಿಯ ಉಪ ಆಡಳಿತಾಧಿಕಾರಿಯ ಹುದ್ದೆ. ಹೀಗೇ ಒಂದಾದ ಮೇಲೊಂದು ಎಂಬಂತೆ ಹೊಸ ಹುದ್ದೆಗಳಲ್ಲಿ ತೊಡಗಿದ ರಾಜಪುರೋಹಿತರು ತಮ್ಮ ಜನಾನುರಾಗ, ಕರ್ತವ್ಯಪರತೆಗಳಿಗೆ ಒಮ್ಮೆಲೇ ಸಾಕ್ಷ್ಯ ನೀಡಬೇಕಾದ ಇಕ್ಕಟ್ಟಿನ ಹಾದಿಯಲ್ಲೇ ನಡೆದಿದ್ದಾರೆ.

ಬಹುಶಃ **'ಸವೆದ ದಾರಿಯನ್ನೇ ಸವೆಸುವ ಸಾಧಾರಣ ವ್ಯಕ್ತಿಯೂ ಈತನಲ್ಲ. ಹೊಸ ಹಾದಿಯನ್ನೂ ಹುಡುಕಬಲ್ಲ. ಅಡೆತಡೆಗಳನ್ನು ಹಾಯ್ದು ಬರಬಲ್ಲ. ಬೇಕಾದ ಸಂಕಲ್ಪಶಕ್ತಿ, ಧಾರಣಶಕ್ತಿ, ಕಾರ್ಯಶಕ್ತಿಗಳು ಈತನಿಗಿವೆ'** ಎಂಬುದನ್ನು ಮನಗಂಡೇ ಸರ್ಕಾರ ರಾಜಪುರೋಹಿತರಿಗೆ ಹೊಸ ಕಛೇರಿಗಳ ಹೊಣೆಯನ್ನೇ ವಹಿಸುತ್ತ ಬಂದಿರಬೇಕು.

ಜನರ ಭಾಷೆ ಕನ್ನಡವನ್ನೇ ಆಡಳಿತ ಭಾಷೆಯನ್ನಾಗಿ ಮಾಡಬೇಕಾದೀತೆಂಬ ಆಲೋಚನೆ ಸರ್ಕಾರಕ್ಕೆ ಬಂದೊಡನೆ ಕಣ್ಣಿಗೆ ಎದುರಾದವರು ಜಯತೀರ್ಥ ರಾಜಪುರೋಹಿತರೇ.

ಮೈಸೂರಿನಲ್ಲಿ ಆಡಳಿತ ತರಬೇತಿ ಕಾಲೇಜಿನಲ್ಲಿ ಅಧಿಕಾರಿಗಳಿಗೆ ನೀಡಲಾಗುತ್ತಿದ್ದ ತರಬೇತಿಯಲ್ಲಿ ಕನ್ನಡದ ಅಂಶವೇ ಇರದಿದ್ದಾಗ ಅದರ ಸೂಚನೆಯನ್ನಿಟ್ಟವರು ಕಾವೇರಿ ಕಣಿವೆ ಅಭಿವೃದ್ಧಿ ಆಡಳಿತಾಧಿಕಾರಿ ರಾಜಪುರೋಹಿತರು. ಅದಕ್ಕೆ ಅಗತ್ಯವಾದ ಪಠ್ಯಕ್ರಮ ರೂಪಿಸುವ ಹೊಣೆಯೂ ಅವರ ಹೆಗಲಿಗೇರಿತು. ಅದಕ್ಕಾಗಿ ಒಂದು ಉಪಸಮಿತಿಯ ರಚನೆ. ಪಠ್ಯಕ್ರಮ ಸಿದ್ಧವಾದ ಮೇಲೆ ಬೋಧನೆಗೂ ಇಳಿಯಬೇಕಾಯಿತು. ತಮ್ಮ ಈ ಸಾಧನೆಗೆ ನೆರವಾದ ಆಡಳಿತ ತರಬೇತಿ ಕಾಲೇಜಿನ ಅಂದಿನ ಪ್ರಾಚಾರ್ಯ ಎ. ಎಸ್. ಮೇಲುಕೋಟೆ ಮತ್ತು ಅಭಿವೃದ್ಧಿ ಕಮಿಷನರ್ ಜಿ. ವಿ. ಕೆ. ರಾವ್ ಅವರನ್ನು ಪುರೋಹಿತರು ಕೃತಜ್ಞತೆಯಿಂದ ಈಗಲೂ ಸ್ಮರಿಸುತ್ತಾರೆ.

ಆಡಳಿತದಲ್ಲಿ ಕನ್ನಡ ಬರಬೇಕಾದರೆ ಅದನ್ನು ಬಳಸಬೇಕಾದ ಅಧಿಕಾರಿಗಳಿಗೆ ತರಬೇತಿ ಅಗತ್ಯವೆಂಬುದನ್ನು ಮನಗಂಡು ಅದನ್ನು ಸರ್ಕಾರದ ಮುಂದಿಟ್ಟು, ಒಪ್ಪಿಗೆ ಪಡೆದು ಪಠ್ಯಕ್ರಮ ರೂಪಿಸಿ, ತಾವೇ ಬೋಧಕರಾಗಿ ನಿಂತು ನಡೆಸಿದ್ದು ಸರ್ಕಾರಕ್ಕೆ ಗೊತ್ತಿತ್ತು. ಆ ವೇಳೆಗೆ ರಾಜಪುರೋಹಿತರು ಚಿತ್ರದುರ್ಗ ಜಿಲ್ಲಾಧಿಕಾರಿ. ಆ ಹುದ್ದೆಯಲ್ಲೂ ತಮ್ಮ ಕಸುವಿಗೆ, ಕನ್ನಡ ನಿಷ್ಠೆಗೆ ಸಾಕ್ಷ್ಯವಿತ್ತಿದ್ದರು. ಜಿಲ್ಲಾನ್ಯಾಯಾ

ಧೀಶರಾಗಿ ತೀರ್ಪುಗಳನ್ನು ಕನ್ನಡದಲ್ಲಿ ಬರೆದು ಇತಿಹಾಸ ನಿರ್ಮಿಸಿದರು. ಬರೆದ ತೀರ್ಪುಗಳು ಉಳಿದವರಿಗೂ ಮಾರ್ಗದರ್ಶಕವಾಗಲಿ ಎಂದು ಅವುಗಳನ್ನು ಪ್ರಕಟಿಸಿದ್ದರು.

**'ಕನ್ನಡ ಮತ್ತು ಸಂಸ್ಕೃತಿ ಇಲಾಖೆ'** ಯನ್ನು ಹುಟ್ಟು ಹಾಕಿದಾಗ ಇದರ ನಿರ್ದೇಶನಕ್ಕೆ ತಕ್ಕ ವ್ಯಕ್ತಿಯ ಆಯ್ಕೆಯಲ್ಲಿ ಸರ್ಕಾರಕ್ಕೆ ಗೊಂದಲವೇನೂ ಕಾಣಲಿಲ್ಲ. ಇನ್ನೊಂದು ಹೊಸ ಇಲಾಖೆಯನ್ನು ಕಟ್ಟಿ ಬೆಳೆಸುವ ಹೊಣೆ ಹೊತ್ತರು. ಅದಕ್ಕೊಂದು ಆಕಾರವಿತ್ತರು. ಕನ್ನಡದ ಮುನ್ನಡೆಗೆ ಅಡಿಪಾಯ ಹಾಕಿದರು. ಮೈಸೂರು ವಿಶ್ವವಿದ್ಯಾನಿಲಯದ ಗೆಳೆಯರ ನೆರವಿನಿಂದ **'ಆಡಳಿತ ಕೈಪಿಡಿ'** ಯನ್ನು ರಚಿಸಿದ್ದು ನೆರವಿಗೆ ಬಂತು.

ಎಲ್ಲ ಹಂತದಲ್ಲೂ ಕನ್ನಡ ಆಡಳಿತ ಭಾಷೆಯಾಗಲು ಅಗತ್ಯವಾದ ಪೂರ್ವ ಸಿದ್ಧತೆ, ಟಿಪ್ಪಣಿಯ ರಚನೆ, ಪ್ರಾರಂಭಿಕ ಕಾರ್ಯ, ಮುಟ್ಟಬೇಕಾದ ಮಜಲುಗಳು ಎಲ್ಲವನ್ನೂ ಊಹಿಸಿಕೊಂಡು, ಅವುಗಳಿಗೆ ಆಕಾರ ನೀಡುವ ಕಾರ್ಯವನ್ನು ಆರಂಭಿಸಿದರು. ಅವರ ಸಾಧನೆಯ ಫಲ—ಈಗ ಕನ್ನಡ ಆಡಳಿತ ಭಾಷೆ.

**'ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ'** ವನ್ನು ಕಟ್ಟಿ ಬೆಳೆಸಿದ ಜಯತೀರ್ಥ ರಾಜಪುರೋಹಿತರಿಗೆ ಇನ್ನು ಉಳಿದಿರಬಹುದಾದ ಸೇವಾವಧಿ ಎರಡು ಮೂರು ವರ್ಷಗಳು. ಹೊಸಹುಟ್ಟಿಗೆ ಶ್ರಮಿಸುವ ಅವರ ಕಾಯಕ ಈಗಲೂ ಕೊನೆಗೊಂಡಿಲ್ಲ. ರಾಜ್ಯದ ಉತ್ತರ ಭಾಗದ ಶೈಕ್ಷಣಿಕ ಮುನ್ನಡೆಗಾಗಿ ಕಲ್ಬುರ್ಗಿಯಲ್ಲಿ ಹೊಸತೊಂದು ವಿಶ್ವವಿದ್ಯಾಲಯವನ್ನು ಹುಟ್ಟುಹಾಕುವ ಸರ್ಕಾರದ ನಿರ್ಧಾರವಾಗಿದೆ. ನಿರ್ಧಾರ ಕಾರ್ಯರೂಪಕ್ಕೆ ಇಳಿಸುವ ಹೊಣೆಯನ್ನು ಸರ್ಕಾರ ರಾಜಪುರೋಹಿತರ ಹೆಗಲಿಗೇರಿಸಿದೆ. ಹೊಸ ವಿಶ್ವವಿದ್ಯಾನಿಲಯದ ಸುಗಮ ಪ್ರಸೂತಿಗೆ ಅವರು ಈಗಾಗಲೇ ಸಿದ್ಧತೆ ಆರಂಭಿಸಿದ್ದಾರೆ. ಸೇವಾವಧಿಯ ಕೊನೆಯ ದಿನಗಳನ್ನು ಸಚಿವಾಲಯದಲ್ಲಿ ಕಳೆಯುವ ಭಾಗ್ಯ ವಂಚಿತವಾಗಿ ದೂರದ ಕಲ್ಬುರ್ಗಿಯಲ್ಲಿ ಠಿಕಾಣಿ ಹೂಡಿದ್ದಾರೆ.

ಹೊಸ ಕಛೇರಿ, ಹೊಸದಾದ ಹುದ್ದೆ, ಪೂರ್ವ ಸಂಪ್ರದಾಯ—ನಿದರ್ಶನಗಳಿಲ್ಲದ ವ್ಯವಹಾರಗಳನ್ನು ನಿಭಾಯಿಸುತ್ತ ಬಂದಿರುವ ರಾಜಪುರೋಹಿತರಿಗೆ ದೊರಕಿರುವ ಅನುಭವವೂ ವಿಶಿಷ್ಟ. ಪಟ್ಟಿರುವ ಕಷ್ಟವೂ ಹೆಚ್ಚು.

**'ಎಷ್ಟೋ ಬಾರಿ ನನ್ನ ಸಂಬಳ, ನನ್ನ ಸಹೋದ್ಯೋಗಿಗಳ ಸಂಬಳ, ಕುರ್ಚಿ-ಮೇಜುಗಳನ್ನು ಓರಣಗೊಳಿಸುವ ಚಿಂತೆ ಕಾಡಿದೆ.'** ಆದರೂ ಅವರ ಕಾರ್ಯೋತ್ಸಾಹ ಕುಗ್ಗಿಲ್ಲ.

**'ಕನ್ನಡ ಆಡಳಿತ ಭಾಷೆಯಾಗುವ ಮೊದಲು ಅದಕ್ಕೆ ಅಗತ್ಯವಾದ ವಾತಾವರಣವನ್ನು ನಿರ್ಮಿಸುವ ಕಾರ್ಯ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಲ್ಲಿ**

**ಸಿಕ್ಕಿತು. ಯೋಜನೆಗಳನ್ನು ರೂಪಿಸಬೇಕಾಗಿತ್ತು. ಸರ್ಕಾರ ಹಣಕ್ಕೆ ಕೈಹಿಡಿಯ ಲಿಲ್ಲ. ಆದ್ದರಿಂದ ಆಗ ದೊರಕಿದ ತೃಪ್ತಿ ಸ್ವಲ್ಪವಲ್ಲ.'**

ಆಡಳಿತ ಭಾಷೆಗೆ ಪೂರಕ ಸಾಹಿತ್ಯ ನಿರ್ಮಾಣ, ರಾಜ್ಯಾದ್ಯಂತ ವಿಚಾರ ಸಂಕಿರ ಣಗಳು, ಆಡಳಿತ ಭಾಷಾ ತರಬೇತಿ–ನಾನಾ ಹಂತಗಳಲ್ಲಿ, ಕನ್ನಡ ಬೆರಳಚ್ಚು ಕಲಿಯು ವವರಿಗೆ, ಕಲಿಸುವವರಿಗೆ ಉತ್ತೇಜನ, ನೇಮಕಗಳಲ್ಲಿ ಈ ಅರ್ಹತೆ ಪಡೆದವ ರಿಗೆ ರಿಯಾಯಿತಿ, ಸರ್ಕಾರಿ ಕಛೇರಿಗಳಿಗೆ ಬೆರಳಚ್ಚುಯಂತ್ರಗಳ ಪೂರೈಕೆ — ಇಂಥ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ 15 ಲಕ್ಷ ರೂಪಾಯಿ ಬೇಕೆಂದಾಗ, ಸರ್ಕಾರ ಚಕಾರವೆತ್ತದೆ ಹಣ ಒದಗಿಸಿದ್ದು ತಮಗೆ ಭೀಮಬಲ ದೊರಕಿದಂತೆ ಎಂದು ರಾಜಪುರೋಹಿತರು ನಂಬಿದ್ದಾರೆ.

ಆಡಳಿತಭಾಷೆ ಕನ್ನಡಕ್ಕೆ ಪ್ರಶಸ್ತ **'ವಾತಾವರಣ'** ರೂಪಿಸುವ ಅವರ ಅಪೇಕ್ಷೆ ಸುಗಮವಾಗಿ ಈಡೇರಲಿಲ್ಲ. ಈ ಆಂದೋಳನ ಹಲವರ ಹಣೆಯಲ್ಲಿ ಸುಕ್ಕುಗಟ್ಟಿಸಿದ್ದುಂಟು. ಕನ್ನಡಬಲ್ಲ ಉನ್ನತಾಧಿಕಾರಿಗಳೇ ಪ್ರತಿಯಾಗಿ ನಡೆದು ದುಂಟು. ಹೀನಾಯದ ಮಾತುಗಳನ್ನು ಆಡಿದ್ದುಂಟು. ಉತ್ಸಾಹ ತೋರಿ ಸಿದ ಕೈಕೆಳಗಿನ ಅಧಿಕಾರಿಗಳನ್ನು ವರ್ಗಮಾಡಿಸಿ ಕೈತೊಳೆದುಕೊಂಡ ಘಟನೆ ಗಳೂ ಇವೆ. **'ಪ್ರತಿಗಾಮಿ ಕ್ರಮ, ಅಸಂಬದ್ಧ,** ಸಿಲ್ಲಿ ಎಂಬೆಲ್ಲ ಗುಣವಾಚಕ ಗಳನ್ನು ಬಳಸಿದ್ದೂ ಉಂಟು.

"ಆದರೆ ತಮಾಷೆಯೆಂದರೆ, ಯಾವ ಅಧಿಕಾರಿಗಳು ಈ ರೀತಿ ಕಿರುಕುಳ ಕೊಟ್ಟರೋ, ಅವರೇ ಜಿಲ್ಲಾ ನ್ಯಾಯಾಧೀಶರಾಗಿ ಕನ್ನಡದಲ್ಲಿ ಬರೆವ ತೀರ್ಪು ಗಳಿಗಾಗಿ ಕೊಡುತ್ತಿದ್ದ ಬಹುಮಾನಕ್ಕೆ ತಾವು ಅರ್ಹರೆಂದು ಅಹವಾಲು ಸಲ್ಲಿ ಸಿದ್ದೂ ಉಂಟು."

ಇಂಥ ಹಲವಾರು ಗೋಮುಖವ್ಯಾಘ್ರಗಳ ಜತೆಗೆ ಸೆಣಸಲು ಅಗತ್ಯವಾದ ಗಡಸು ಮತ್ತು ಸಮಯೋಪಾಯಗಳೆರಡೂ ಪುರೋಹಿತರಿಗೆ ಮೈಗಂಟಿದ ಗುಣ. ಬಚಾವ್ ಆದರು, ಅಲ್ಲ; ಕನ್ನಡ **'ಬಚಾವ್'** ಆಯಿತು.

ಕನ್ನಡ ಅಭಿವೃದ್ಧಿ ನಿರ್ದೇಶಕರಿಗೆ ಜಿಲ್ಲಾಮಟ್ಟದಲ್ಲಿ ಕನ್ನಡದ ಬಳಕೆ ಕುರಿತು ಕಾಲಕಾಲಕ್ಕೆ ವರದಿ ಸಲ್ಲಿಸಬೇಕೆಂಬ ಸರ್ಕಾರಿ ಆದೇಶವೂ ಕಿರಿಕಿರಿಯುಂಟು ಮಾಡಿರಬೇಕು. ಹಲವು ಜಿಲ್ಲಾಧಿಕಾರಿಗಳು ಐ.ಎ.ಎಸ್. ದರ್ಜೆಗೆ ಸೇರಿದವರು. ನಿರ್ದೇಶಕರು ಅಲ್ಲ. ಐ.ಎ.ಎಸ್. ಅಧಿಕಾರಿ, ಅದಲ್ಲದ ಅಧಿಕಾರಿಗೆ ವರದಿ ಸಲ್ಲಿ ಸುವುದು ಎಷ್ಟು ಹೀನಾಯದ ಕೆಲಸ !

ಕನ್ನಡದ ಬಳಕೆ ಕುರಿತು ಜಿಲ್ಲೆಯ ಮಟ್ಟದಲ್ಲಿ ಸಮನ್ವಯ ಕಾರ್ಯ, ಮಾರ್ಗ ದರ್ಶನಗಳಿಗಾಗಿ ನಿರ್ದೇಶಕರು ಹೋದಾಗ ಅಲ್ಲಿಯೂ ತುಂಬಿದ ಸಭೆಯಲ್ಲಿ ಕಟುಟೀಕೆ ಎದುರಿಸಿದ ಸಂದರ್ಭಗಳು ಹಲವು. ಕನ್ನಡ, ಇಂಗ್ಲೀಷ್, ಉರ್ದು ಭಾಷೆಗಳಲ್ಲಿ

ಸಮುತೂಕದ ಪಾಂಡಿತ್ಯ ಪಡೆದಿರುವ ರಾಜಪುರೋಹಿತರು ಒಮ್ಮೆ ಹಿರಿಯ ಅಧಿಕಾರಿಯೊಬ್ಬರನ್ನು ಕುರಿತು, "ನಿಮಗೆ ತಿಳಿದಿರುವ ಇಂಗ್ಲೀಷಾದರೂ ಎಷ್ಟು 500-600 ಶಬ್ದಗಳ ಬಳಕೆಯನ್ನು ಮೀರಿದ್ದಲ್ಲ" ಎಂದು ಕಟೂಕ್ತಿಯಾಡಿ ಬಾಯಿ ಮುಚ್ಚಿಸಿದ್ದೂ ನಡೆದಿದೆ.

ಪ್ರದೇಶ ಭಾಷೆಗಳನ್ನು ಆಡಳಿತದಲ್ಲಿ ಬಳಸುವ ಕಾರ್ಯ ನೆರೆಯ ರಾಜ್ಯಗಳಲ್ಲಿ ಎಷ್ಟರಮಟ್ಟಿಗೆ ನಡೆದಿದೆ, ಕರ್ನಾಟಕದಲ್ಲಿ ಆಗಬೇಕಾದ್ದೇನು—ತಿಳಿಯಲು ಆ ರಾಜ್ಯಗಳಲ್ಲಿ ಪ್ರವಾಸ ಮಾಡಿ ಬಂದ ಪುರೋಹಿತರು ಕೈಗೊಂಡ ಕಾರ್ಯಕ್ಕೆ ರಾಷ್ಟ್ರ ಮನ್ನಣೆ ದೊರಕಿತು.

ದಕ್ಷಿಣ ರಾಜ್ಯಗಳ ಆಡಳಿತ ಭಾಷಾ ಸಮ್ಮೇಳನ ಜರುಗಿಸಿದರು. ವಿಷಯಕ್ಕೆ ಸಂಬಂಧಿಸಿದ 32 ಪ್ರಬಂಧಗಳ ಮಂಡನೆ—ಮಥನ ನಡೆದವು. ಎಲ್ಲ ರಾಜ್ಯಗಳಿಗೂ ಸರ್ವಸಮಾನವಾದ ಸಮಸ್ಯೆಗಳನ್ನು ಕುರಿತ ಪರಿಶೀಲನೆ ನಡೆಯಿತು. ರಾಷ್ಟ್ರೀಯ ಸಮ್ಮೇಳನ ಜರುಗಿಸಬೇಕೆಂಬ ಶಿಫಾರಸ್ಸನ್ನು ಈ ಸಮ್ಮೇಳನ ಮಾಡಿತು. ಕೇಂದ್ರ ಸರ್ಕಾರ ಸೂಚನೆಯನ್ನು ಮನ್ನಿಸಿ ರಾಷ್ಟ್ರೀಯ ಸಮ್ಮೇಳನ ಜರುಗಿಸಿದಾಗ ಕರ್ನಾಟಕದಲ್ಲಿ ನಡೆದ ಸಮ್ಮೇಳನ ನೀಡಿದ್ದ ಮಾರ್ಗದರ್ಶನವೇ ರಾಷ್ಟ್ರೀಯ ಸಮ್ಮೇಳನಕ್ಕೂ ಮಾರ್ಗದರ್ಶಿಕೆ ಆಯಿತು.

—ಇಂಥ ಆಂದೋಳನದ ಫಲ ರಾಜ್ಯದ ಲೋಕಸೇವಾ ಆಯೋಗ ತನ್ನ ಪರೀಕ್ಷೆಗಳನ್ನು ಕನ್ನಡದಲ್ಲೂ ನಡೆಸಬೇಕೆಂಬ ಒತ್ತಾಯಕ್ಕೆ—ತತ್ವಶಃ ಅಂಗೀಕಾರ ನೀಡಿತು. ಈ ಅಂಗೀಕಾರ 'ಕಾರ್ಯಗತ' ಆಗಲು ಮೂರು ವರ್ಷಗಳೇ ಹಿಡಿದವು.

ರಾಜ್ಯ ಲೋಕಸೇವಾ ಆಯೋಗದ ಜಿಗಟುತನಕ್ಕೆ ಒಂದು ನಿದರ್ಶನ—ಕೆಲವು ವರ್ಷಗಳ ಮೊದಲು 5,000 ಎರಡನೇ ದರ್ಜೆ ಗುಮಾಸ್ತರ ನೇಮಕಕ್ಕೆ ಪರೀಕ್ಷೆ ನಡೆಸಲು ಪ್ರಕಟನೆ ಹೊರಟಿತ್ತು. ಎಸ್.ಎಸ್.ಎಲ್.ಸಿ ಕನಿಷ್ಠ ವಿದ್ಯಾರ್ಹತೆಯುಳ್ಳ ಪರೀಕ್ಷಾರ್ಥಿಗಳು ಇಂಗ್ಲೀಷ್‌ನಲ್ಲಿ ಪ್ರಬಂಧ ಮತ್ತು ಸಾಮಾನ್ಯಜ್ಞಾನ ಪ್ರಶ್ನೆಪತ್ರಿಕೆ ಎದುರಿಸಬೇಕಾಗಿತ್ತು. ಅಂದರೆ, ಕನ್ನಡ ಮಾಧ್ಯಮದಲ್ಲಿ ಕಲಿತವರಿಗೆ ಅವಕಾಶದ ಸ್ಪಷ್ಟ ನಿರಾಕರಣೆ.

ಇಂಗ್ಲೀಷಿನ ಜತೆಗೆ ಕನ್ನಡದಲ್ಲೂ ಪ್ರಶ್ನೆಪತ್ರಿಕೆಗೆ ಉತ್ತರ ನೀಡಲು ಅವಕಾಶ ವಿರಬೇಕೆಂಬುದನ್ನು ಸಾಧಿಸಲು ಜಯತೀರ್ಥ ರಾಜಪುರೋಹಿತರು ಬತ್ತಳಿಕೆಯಲ್ಲಿದ್ದ ಬಾಣವೆಲ್ಲವನ್ನೂ ಬಳಸಿದರು. ಅಡಿಗಡಿಗೆ ಅಡ್ಡಿ, ಆಕ್ಷೇಪಗಳಿಂದ ಮೇಲಿಂದ ಮೇಲೆ ಸೋಲು. ಕೊನೆಗೂ ಅವರು 'ರಾಜಕೀಯ' ಮಾಡಿ ಕನ್ನಡದ ಗೆಲುವನ್ನು ಸಾಧಿಸಿದ್ದು ಕುತೂಹಲಕಾರಿ ಘಟನೆ. ಅದನ್ನು ವಿಸ್ತರಿಸಲು ಅವರು ಸಮ್ಮತಿಸಲಿಲ್ಲ.

ರಾಜ್ಯ ಮಟ್ಟದಲ್ಲಿ ಕನ್ನಡ ಆಡಳಿತ ಭಾಷೆಯಾಗಿ ಐದು ತಿಂಗಳೇ ಉರುಳಿವೆ. ದರ್ಶನೀಯವಾದ ಮಾರ್ಪಾಟೇನು ಕಾಣುತ್ತಿದೆ ಎಂಬ ಪ್ರಶ್ನೆಗೆ ಅವರ ಉತ್ತರ—

ಬಳಕೆಯ ವ್ಯಾಪ್ತಿ ಹೆಚ್ಚುತ್ತ ಹೋಗಬೇಕು, ಕಣ್ಣಿಗೆ ಕಟ್ಟುವ ಯಾವ ಕೆಲಸವೂ ಇನ್ನೂ ಆಗಿದ್ದಂತಿಲ್ಲ.

"ಕೇಂದ್ರ ಸರ್ಕಾರದಲ್ಲಿ ಒಂದು ಪರಿಪಾಠವಿದೆ. ಅಲ್ಲಿ ಯಾವ ಆಜ್ಞೆಯೇ ಆಗಲಿ, ಇಂಗ್ಲೀಷಿನಲ್ಲಿದ್ದರೆ ಅದರ ಹಿಂದಿ ಪಾಠದೊಂದಿಗೇ ಅದು ಪ್ರಕಟವಾಗಬೇಕು. ಇಂಥ ಏರ್ಪಾಟು ರಾಜ್ಯದಲ್ಲಿ ಆಗಬೇಕು. ಸರ್ಕಾರದ ಮಟ್ಟದಲ್ಲಿ ಒಂದು ಭಾಷಾಂತರ ವಿಭಾಗ ಈ ಕಾರ್ಯವನ್ನು ಸ್ವಲ್ಪ ಕಾಲ ಮಾಡುತ್ತಲೇ ಇರಬೇಕು. ಆಂಧ್ರ ಪ್ರದೇಶ ಸರ್ಕಾರ ತನ್ನ ಕಾನೂನು ಆಜ್ಞೆ–ಸುತ್ತೋಲೆ–ಪ್ರಕಟಣೆಗಳ ತೆಲುಗು ಅವತರಣಿಕೆಯೇ ಅಧಿಕೃತವೆಂದು ಸಾರಿದೆ. ಅದನ್ನು ಕರ್ನಾಟಕವೂ ಮಾಡಬೇಕು."

"ತಮಿಳುನಾಡಿನಲ್ಲಿ ನಿಶ್ಚಿತಕಾಲಾವಧಿಯಲ್ಲಿ ಇಂಗ್ಲೀಷ್ ಬೆರಳಚ್ಚು ಯಂತ್ರಗಳನ್ನು ಹಿಂತೆಗೆದುಕೊಳ್ಳಲಾಯಿತು. ಇಂಗ್ಲೀಷ್ ಬೆರಳಚ್ಚು ಯಂತ್ರಗಳೇ ಇಲ್ಲವಾದಾಗ ಕನ್ನಡಕ್ಕೆ ಶರಣು ಹೊಡೆಯುವುದು ಅನಿವಾರ್ಯವಾಗುತ್ತದೆ." ಇಂಥ ಕ್ರಮಗಳು ತುಂಬ ಪರಿಣಾಮಕಾರಿ, ಎಂದೆನ್ನುವಾಗ—ಕಡ್ಡಾಯ ಕನ್ನಡ ಬಳಕೆಯ ವಿಚಾರವೇ ಇನ್ನೂ ಹಲವರಿಗೆ (ಹಿರಿಯ ಅಧಿಕಾರಿಗಳು) ಅಪ್ರಿಯ ಅಂಶವೆಂಬುದನ್ನು ಅವರು ಗುರ್ತಿಸುತ್ತಾರೆ.

ಕನ್ನಡ ಬಾರದ ಅಧಿಕಾರಿಗಳಿಗೆ ಗೊತ್ತುಪಡಿಸಿರುವ ಪರೀಕ್ಷೆಯ ಮಟ್ಟ ತುಂಬ ಕಳಪೆ. ಆ ಮಟ್ಟದ ಕನ್ನಡ ಜ್ಞಾನದಿಂದ ಆಡಳಿತ ಸಾಗದು. ಕೇವಲ ಕನ್ನಡ ಕಲಿತ ಶಾಸ್ತ್ರಪಾಲನೆ ಸರಿಯಲ್ಲ. ಆದ್ದರಿಂದ ಮೊದಲ ಹಂತದ ಪರೀಕ್ಷೆಯಾದ ಮೇಲೆ ಇನ್ನೊಂದು ಮೇಲ್ಮಟ್ಟದ ಪರೀಕ್ಷೆ ನಡೆಸಲೇಬೇಕೆಂಬುದು ಪುರೋಹಿತರ ಸಲಹೆ.

ಇಂಗ್ಲೀಷನ್ನು ಆಡಳಿತ ಭಾಷೆಯ ಸ್ಥಾನದಿಂದ ಕದಲಿಸಿದರೆ, ಕೆಲಸಕಾರ್ಯ ವಿಳಂಬಗೊಳ್ಳುತ್ತದೆ ಎಂಬ ಅಭಿಪ್ರಾಯವೊಂದಿದೆ. 'ಅಂದರೆ ಇದುವರೆಗೆ ಎಲ್ಲ ವ್ಯವಹಾರಗಳೂ ತ್ವರೆಯಿಂದ ಸಾಗುತ್ತಿವೆ ಎಂಬ ತೃಪ್ತಿ ಜನರಲ್ಲಿ ಮೂಡಿದೆಯೇನು?' ಎಂದು ಪ್ರಶ್ನಿಸುವ ಪುರೋಹಿತರು ಕೊಡುವ ಉತ್ತರ—ವಿಳಂಬವೊಂದು ಜಾಡ್ಯ. ಕನ್ನಡದಿಂದಲೇ ವಿಳಂಬವಾಗುತ್ತದೆಂಬುದು ಒಂದು ರೀತಿಯ ಮನೋದಾಸ್ಯ.

ಇಂಗ್ಲೀಷ್ ಬೆರಳಚ್ಚು, ಶೀಘ್ರಲಿಪಿಗಳಿಂದ ನಿರ್ದಿಷ್ಟ ಲಾಭವಿದೆ ಎಂಬುದನ್ನು ಒಪ್ಪುವ ಅವರು "ನಮ್ಮ ಮನಸ್ಸಿನಲ್ಲಿ ವೇಗ ಇದ್ದರೆ ಇವುಗಳ ಅಭಾವ ಆ ವೇಗವನ್ನು ಮೊಟಕುಗೊಳಿಸುವುದಿಲ್ಲ" ಎಂದು ನಂಬಿದ್ದಾರೆ.

ಕನ್ನಡವನ್ನು ಆಡಳಿತದಲ್ಲಿ ಬಳಕೆ ಮಾಡಿದ್ದಕ್ಕೆ ಪುರಸ್ಕಾರ ಕೊಡಬೇಕೇ—ಅದೂ ಕನ್ನಡನಾಡಿನಲ್ಲಿ ? ಸಾಹಿತಿಯೊಬ್ಬರ ಅಭಿಪ್ರಾಯದಂತೆ ಈ ಮೂಲಕ 'ಹಣದ ಲೂಟಿ' ಆಗುತ್ತಿದೆಯೆಂಬ ತರ್ಕವನ್ನು ಅವರು ಕತ್ತರಿಸಿಹಾಕುವಾಗ ಪ್ರಕಟಗೊಳ್ಳುತ್ತದೆ ಅವರ ಚಿಕಿತ್ಸಕ ದೃಷ್ಟಿ.

"200 ವರ್ಷಗಳಿಂದ ಬಳಕೆ ತಪ್ಪಿದ ಭಾಷೆಯನ್ನು ಮತ್ತೆ ಅದರ ಸ್ಥಾನಕ್ಕೆ ತರುವಾಗ ಎದುರಾಗುವ ಸಮಸ್ಯೆಗಳನ್ನು ಬಗೆಹರಿಸುವ ಮೊದಲೇ ಜಾರಿಗೆ ತಂದಿದ್ದಾಯಿತು. ಆದರೆ ಈಗಲೂ ಕನ್ನಡದ ಬಳಕೆ ಕಡ್ಡಾಯವಲ್ಲ. ಬಳಸಲು ಬೇಕಾದ ಅನುಕೂಲಗಳಿಲ್ಲ. ಬರೆಯಲೇಬೇಕೆಂದು ನಿರ್ಧಾರ ಮಾಡಿದರೆ, ಕೆಲವೊಮ್ಮೆ ಕೈಬರಹವೇ ಗತಿ. ಬಳಕೆ ಮಾಡದಿದ್ದರೆ ಶಿಕ್ಷೆ ಇಲ್ಲ. ಕನ್ನಡ ವಿನಾ ಇಂಗ್ಲೀಷನ್ನು ಬಳಸಲೇಬಾರದೆಂಬ ನಿಷೇಧಾತ್ಮಕ ಆಜ್ಞೆ ಇಲ್ಲ. ಇಂಥ ಪ್ರತಿಕೂಲ ಸನ್ನಿವೇಶದಲ್ಲೂ ಕನ್ನಡದ ಬಳಕೆಯ ಸಾಧ್ಯತೆಯನ್ನು ಪ್ರದರ್ಶಿಸುವವರಿಗೆ ಉತ್ತೇಜನ ಬೇಡವೆನ್ನುತ್ತೀರಾ ? ಎಗ್ಸಿಕ್ಯೂಟಿವ್ ಇಂಜಿನಿಯರ್ ಕಛೇರಿಯೊಂದರಲ್ಲಿ ಮುಸಲ್ಮಾನ ಅಧಿಕಾರಿಯೊಬ್ಬರು ತಾಂತ್ರಿಕ ವರದಿಯನ್ನು ಕನ್ನಡದಲ್ಲಿ ಬರೆದು ದಾಖಲೆ ಸ್ಥಾಪಿಸಿದರು. ಹೊಸ ಸಾಧ್ಯತೆ ತೋರಿಸಿಕೊಟ್ಟರು. ಇಂಥವರನ್ನು ಪುರಸ್ಕರಿಸಬೇಡವೇ ? ಹಾಗಾದರೆ ಶೌರ್ಯ ಪ್ರದರ್ಶಿಸಿದ ಯೋಧರಿಗೆ ವೀರಚಕ್ರ ನೀಡುವುದೇತಕ್ಕೆ ? ಶೌರ್ಯ ಪ್ರದರ್ಶನವೇ ಅವರ ಕರ್ತವ್ಯ. ಮಾಡಿಕೊಳ್ಳಲಿ ಎಂದು ಸುಮ್ಮನಿದ್ದರಾದೀತೇ ? ಪೋಲಿಸ್ ಮೆಡಲ್ ಯಾಕೆ ಕೊಡುತ್ತಾರೆ ?"

ಅಕಾಟ್ಯವಾದ ಈ ಉತ್ತರ ಟೀಕಾಕಾರರನ್ನು ನಿರುತ್ತರರನ್ನಾಗಿ ಮಾಡುತ್ತದೆ. ಕೇವಲ ಮೆಚ್ಚುಗೆಗಾಗಿ ನೀಡುವ ಸಾಂಕೇತಿಕ ಪುರಸ್ಕಾರದ ಬಗೆಗೆ ಮನಃಸಂಕೋಚ ಬೇಡವೆನ್ನುವುದು ಅವರ ಅಭಿಮತ.

ಆಡಳಿತದಲ್ಲಿ ಕನ್ನಡದ ವಾತಾವರಣ ಮೂಡಬೇಕಾದರೆ ಏನೆಲ್ಲ ಮಾಡಬಹುದು ಎಂಬ ವಿಷಯಕ್ಕೆ ಬಂದಾಗ ರಾಜಪುರೋಹಿತರು ಜಂಗಮ ವಿಶ್ವಕೋಶವೆನಿಸುತ್ತಾರೆ.

ನಮ್ಮ ಶಾಸನಗಳು, ಅವುಗಳ ಕರಡು ಇಂಗ್ಲೀಷಿನಲ್ಲೇ ಸಿದ್ಧವಾಗುವ ಪರಿಪಾಠ ತಪ್ಪಬೇಕು. ಶಾಸನದ ಸ್ವರೂಪವನ್ನು ಕಲ್ಪಿಸಿಕೊಳ್ಳುವುದು, ಅದರ ಗುರಿ, ಸಾಧನೆಯ ಮಾರ್ಗ ಎಲ್ಲವೂ ಕನ್ನಡದಲ್ಲೇ ಆಗುವದರಿಂದ ಶಾಸನದ ಕರಡು, ತಿದ್ದುಪಡಿಗಳೆಲ್ಲ ಕನ್ನಡದಲ್ಲಿ ಆಗಬೇಕು. ವಿಧೇಯಕದ ಮಂಡನೆ ಕನ್ನಡದಲ್ಲೇ ಆಗಬೇಕು. ಹೀಗಾದಾಗ ಇದರ ಭಾಷಾಂತರ ಇಂಗ್ಲೀಷಿನಲ್ಲಿ ಮಾಡುವದರಿಂದ ನಿಖರತೆಯ ಸಮಸ್ಯೆ ಮಾಯವಾಗುತ್ತದೆ.

ರಾಜ್ಯ ಲೋಕಸೇವಾ ಆಯೋಗದ ಪರೀಕ್ಷೆ ಕನ್ನಡ ಮಾಧ್ಯಮದಲ್ಲಿ ನಡೆಯುವುದರ ಜೊತೆಗೆ ಕನ್ನಡನಾಡಿನಲ್ಲಿ ಬಳಕೆಯಲ್ಲಿರುವ ತಮಿಳು, ತೆಲುಗು, ಮರಾಠಿ, ಉರ್ದು ಮತ್ತು ಕನ್ನಡಗಳ ಪೈಕಿ ಒಂದು ಭಾಷಾ ಜ್ಞಾನವೂ ಕಡ್ಡಾಯವಾಗಬೇಕು. ಒಂದಕ್ಕಿಂತ ಹೆಚ್ಚು ಭಾಷೆ ತಿಳಿದವರನ್ನು ಎರಡೂ ಭಾಷೆಗಳು ಬಳಕೆಯಲ್ಲಿರುವ ಭಾಗದ ಸೇವೆಗೆ ತೊಡಗಿಸಲು ಅನುಕೂಲವೆನ್ನುವುದು ಅವರ ವ್ಯಾವಹಾರಿಕ ಸಲಹೆಗಳಲ್ಲಿ ಒಂದು.

ಭೂ ಸುಧಾರಣೆಯಂತಹ ವ್ಯಾಪಕ ಪರಿಣಾಮಕಾರಿ ಶಾಸನದ ಜಾರಿಗೆಂದೇ

ರಾಜ್ಯ ಸರ್ಕಾರ ಉನ್ನತಾಧಿಕಾರಿಯನ್ನು ಸರ್ಕಾರದ ಮಟ್ಟದಲ್ಲಿ ನೇಮಿಸಿದ್ದರಿಂದ ಆ ಕೆಲಸ ಹಗುರವೆನಿಸಿತು. ಕನ್ನಡ ಅಧಿಕೃತ ಭಾಷೆಯಾಗುವದು ಅದಕ್ಕೂ ಮಿಗಿಲಾದ ವ್ಯಾಪ್ತಿ ಹೊಂದಿರುವ ವಿಷಯ. ಈ ಕಾರ್ಯಸಾಧನೆಗೂ ಅಂಥ ಉನ್ನತಾಧಿಕಾರಿಯ ಅಗತ್ಯವಿದೆ.

ಆಡಳಿತ ಭಾಷಾ ನಿರ್ದೇಶನಾಲಯ ಅಥವಾ ಕನ್ನಡ ಅಭಿವೃದ್ಧಿ-ಸಂಸ್ಕೃತಿ ಖಾತೆ ಕಾನೂನು ಇಲಾಖೆಯ ಅಡಿಯಲ್ಲೋ, ಶಿಕ್ಷಣ ಖಾತೆಯ ವ್ಯಾಪ್ತಿಯಲ್ಲೋ ಇದ್ದರೆ ಸಾಲದು. (ಸರ್ಕಾರದ ಈ ಖಾತೆಗಳ ಸುತ್ತೋಲೆಗಳಿಗೆ ಜಿಲ್ಲಾಧಿಕಾರಿ ಮಟ್ಟದಲ್ಲಿ ಮಾನ್ಯತೆ ದೊರಕುವದು ಖಚಿತವಿಲ್ಲ) ವಿಶೇಷಾಧಿಕಾರಿಯ ನೇಮಕವಾಗ ದಿದ್ದರೆ, ಭಾಷೆಯ ಬಳಕೆಗೆ ಸಂಬಂಧಿಸಿದ ಆದೇಶಗಳೆಲ್ಲ ಮುಖ್ಯ ಕಾರ್ಯದರ್ಶಿ ಗಳಿಂದಲೇ ಪ್ರಕಟಗೊಳ್ಳಬೇಕೆಂಬ ಅವರ ಅಭಿಪ್ರಾಯದ ಹಿನ್ನೆಲೆಯಲ್ಲಿ ಅಡಗಿರು ವುದು ಆತಂಕ.

ಕನ್ನಡಿಗರೇ ಆಗಿದ್ದೂ, ಕನ್ನಡ ಬಲ್ಲವರೂ ಆಗಿದ್ದು, ಕನ್ನಡವನ್ನು ಬಳಸಲು ಮೈಗಳ್ಳತನ ಒಂದು ಕಡೆ, ಹೊರ ರಾಜ್ಯಗಳಿಂದ ಬಂದು ಕನ್ನಡ ಕಲಿತು, ಮಾತು ಕತೆಯ ಮಟ್ಟದಲ್ಲಿ ಕನ್ನಡ ಬಳಸಿ, ಆ ಮಿತಿಯಲ್ಲೇ ನಿಲ್ಲುವ ಅಸಹಾಯಕತೆ ಇನ್ನೊಂದು ಕಡೆ—ಇವೆರಡೂ ವ್ಯವಹಾರದಲ್ಲಿ ವಿರೋಧವೇ ಎಂಬುದು ಅವರ ಅನಿಸಿಕೆ. ಆದರೆ ಕಾಲಚಕ್ರದ ಉರುಳನ್ನು ಗುರ್ತಿಸಿಕೊಂಡು ಈಗ ಎಲ್ಲರೂ ಬದಲಾಗುತ್ತಿದ್ದಾರೆ. ಹೀಗಾಗಿ ಕನ್ನಡದ ಬಳಕೆಗೆ **'ಪೂರ್ಣ ವಿರೋಧಿಗಳು ಯಾರೂ ಈಗಿಲ್ಲ.'**

ಜನರಾಡುವ ಭಾಷೆಯನ್ನು ಆಡಳಿತದ ಮಟ್ಟದಲ್ಲಿ ಬಳಸುವದರಲ್ಲಿ ತಮಿಳು ನಾಡು, ಆಂಧ್ರಪ್ರದೇಶಗಳು ಮೊದಲಿನ ಎರಡು ಸ್ಥಾನಗಳನ್ನು ಪಡೆದಿವೆ. ಈ ದಿಸೆಯಲ್ಲಿ ಕನ್ನಡದ ಎಣಿಕೆ ಮೂರನೆಯದಾಗಬಾರದೆಂಬುದೇ ಜಯತೀರ್ಥ ರಾಜ-ಪುರೋಹಿತರ ಬಯಕೆ.

# ವಿಶೇಷ ರಾಜ್ಯ ಪ್ರಶಸ್ತಿ ವಿಜೇತ ಜಯತೀರ್ಥ ರಾಜಪುರೋಹಿತ

**ಪಿ. ಎಂ. ಗಲಗಲಿ**
ಕಲಬುರ್ಗಿ

ಅಂದು ಕನ್ನಡ ಅರಣೋದಯದ ಕಾಲದಲ್ಲಿ, ತಮ್ಮ ಓಜಸ್ವಿಯಾದ, ಸ್ಫೂರ್ತಿದಾಯಕವಾದ ಭಾಷಣ, ಲೇಖನಗಳಿಂದ ನಾಡಿನಾದ್ಯಂತ ಕನ್ನಡ ಡಿಂಡಿಮವನ್ನು ಬಾರಿಸಿ, ಜನತೆಯಲ್ಲಿ ನವ ಚೈತನ್ಯವನ್ನು ನಿರ್ಮಿಸಿ ಆಲೂರ ವೆಂಕಟರಾಯರು ಕರ್ನಾಟಕದ ಕುಲಪುರೋಹಿತರೆಂದು ಮಾನ್ಯರಾದರು.

ಅದರಂತೆ ಇಂದು ಕನ್ನಡಿಗರ ಬಹು ದಿನಗಳ ಕನಸು ನನಸುಗೊಂಡ, ಪ್ರತ್ಯೇಕ ಪ್ರಾಂತ್ಯವಾಗಿ ರೂಪಗೊಂಡ ಕನ್ನಡ ನಾಡಿನಲ್ಲಿ ಆಡಳಿತದ ಎಲ್ಲ ಹಂತಗಳಲ್ಲಿ ಕನ್ನಡದ ಬಳಕೆ ನಡೆಯಬೇಕೆಂಬ ಸರ್ಕಾರದ ಆಡಳಿತ ಭಾಷಾ ನೀತಿಯನ್ನು ಜಾರಿಗೆ ತರುವಲ್ಲಿ ಜಿಲ್ಲಾ ಮಟ್ಟದ ನ್ಯಾಯಾಧೀಶರಾಗಿ, ಪ್ರಪ್ರಥಮವಾಗಿ ಕನ್ನಡದಲ್ಲಿಯೇ ನೂರಕ್ಕೂ ಹೆಚ್ಚು ತೀರ್ಪುಗಳನ್ನು ಕೊಟ್ಟು ಚರಿತ್ರಾರ್ಹವಾದ ದಿಟ್ಟ ಹೆಜ್ಜೆಯನ್ನಿಟ್ಟು ಜಯತೀರ್ಥ ರಾಜಪುರೋಹಿತರು ಕನ್ನಡ ನಾಡಿನ 'ರಾಜಪುರೋಹಿತ'ರೆಂದು ಮಾನ್ಯರಾಗಿದ್ದಾರೆ, ಅಭಿನಂದನೀಯರಾಗಿದ್ದಾರೆ. ಜಯತೀರ್ಥರ ಪೂರ್ವಜರು ವಿಜಯನಗರದ ಮಾಂಡಲಿಕ ರಾಜರಿಗೆ ರಾಜಪುರೋಹಿತರಾಗಿದ್ದರೆಂಬ ಸಂಗತಿಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. 'ರಾಜಪುರೋಹಿತ' ಎಂಬ ಅಭಿದಾನ ಸಾರ್ಥಕಗೊಂಡಿತು.

'ಕನ್ನಡ ತೀರ್ಪುಗಳು' ಎಂಬ ಗ್ರಂಥವು ಭಾರತೀಯ ಇನ್ನಾವ ಭಾಷೆಯಲ್ಲಿಯೂ ಇಲ್ಲದ ಅದ್ವಿತೀಯ ಮೌಲಿಕ ಕೊಡುಗೆ ಎಂದು ಕೇಂದ್ರ ರಾಜ ಭಾಷಾ ಆಯೋಗದವರು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಇನ್ನು ಮುಂದೆ ನ್ಯಾಯಾಲಯಗಳಲ್ಲಿ ತೀರ್ಪುಗಳನ್ನು ಆದೇಶಗಳನ್ನು ಬರೆಯುವವರಿಗೆ ಒಂದು ಮಾರ್ಗದರ್ಶಕ ಉಲ್ಲೇಖ ಗ್ರಂಥವಾಗಿದೆ. 'ಕನ್ನಡ ತೀರ್ಪುಗಳು' ಗ್ರಂಥವನ್ನು ಓದಿದ ಮೇಲೆ "ಇಂಗ್ಲೀಷದಲ್ಲಿನ್ನೇನು" ಎಂದು ಯಾರಾದರೂ ಸಹಜವಾಗಿ ಉದ್ಗಾರ ತೆಗೆಯಬಹುದು.

ಕನ್ನಡದಲ್ಲಿ ತೀರ್ಪುಕೊಟ್ಟ ಪ್ರಥಮ ನ್ಯಾಯಾಧೀಶ, ಕಛೇರಿಯಲ್ಲಿ ಕನ್ನಡ ಬಳಸಿದ ಮೊದಲ ಅಧಿಕಾರಿ ಜಯತೀರ್ಥ ರಾಜಪುರೋಹಿತರನ್ನು ಅವರ ಈ ಅಪೂರ್ವ

ಕಾರ್ಯಕ್ಕೆ ವಿದ್ವತ್ ಪೂರ್ಣವಾದ, ಅತ್ಯುಪಯುಕ್ತವಾದ, ಹೊಸ ಭಾಷಾ ಪ್ರಯೋಗಗಳಿಂದ ಕೂಡಿದ ಕನ್ನಡದ ನ್ಯಾಯಾಂಗ ಬೆಳವಣಿಗೆಗೆ ಹೊಸ ತಿರುವುಕೊಟ್ಟ 'ಕನ್ನಡ ತೀರ್ಪುಗಳು' ಎಂಬ ಮೌಲಿಕ ಕೃತಿ ರಚನೆಗೆ ರಾಜ್ಯ ಸರ್ಕಾರದವರು ವಿಶೇಷ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿದ್ದು ಸ್ತುತ್ಯರ್ಹವಾಗಿದೆ. ಸರ್ಕಾರವು ಕನ್ನಡ ಕುಲಕೋಟಿಯ ಅಭಿನಂದನೆಗೆ ಪಾತ್ರವಾಗಿದೆ. ಜಯತೀರ್ಥ ರಾಜಪುರೋಹಿತರು ರಾಜ್ಯ ಪ್ರಶಸ್ತಿಯನ್ನು ಸ್ವೀಕರಿಸಿದರು. ಆದರೆ ಬಹುಮಾನದ ನಗದು ಹಣವನ್ನು ಸ್ವೀಕರಿಸಲಿಲ್ಲ ಎಂಬ ಸಂಗತಿ ಗಮನಾರ್ಹವಾಗಿದೆ. ಅವರ ನಿಸ್ವಾರ್ಥ ಹಾಗೂ ನಿರಪೇಕ್ಷ ಕರ್ತವ್ಯ ಪ್ರಜ್ಞೆಗೆ ಹಿಡಿದ ಕನ್ನಡಿಯಾಗಿದೆ. ಇದರಂತೆ, ರಾಜಪುರೋಹಿತರು ಇತರರೊಡನೆ ಸಂಪಾದಿಸಿದ 'ಕಛೇರಿ ಕೈಪಿಡಿ' ಮೊದಲಾದ ಅನೇಕ ಗ್ರಂಥಗಳು ಆಡಳಿತ ಸಾಹಿತ್ಯದಲ್ಲಿ ಇಂದು ಮೈಲುಗಲ್ಲುಗಳಾಗಿವೆ. ಕನ್ನಡ ಅಭಿವೃದ್ಧಿ ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ, ಕನ್ನಡವನ್ನು ಎಲ್ಲ ಹಂತಗಳಲ್ಲಿ ಆಡಳಿತ ಭಾಷೆಯನ್ನಾಗಿ ಮಾಡುವ ಕಾರ್ಯದಲ್ಲಿ ಅವರು ಎದುರಿಸಿದ ಸಮಸ್ಯೆಗಳು, ನಡೆಸಿದ ಹೋರಾಟ ತೋರಿದ ಎಂಟೆದೆಯ ಧೈರ್ಯದ ಸಮಗ್ರ ಕಥೆ ಇನ್ನೂ ಹೊರ ಬರಬೇಕಾಗಿದೆ.

**ಪ್ರಾರಂಭಿಕ ಜೀವನ**

ಜಯತೀರ್ಥರು ರಾಯಚೂರ ಜಿಲ್ಲೆಯ ಐತಿಹಾಸಿಕ ಸ್ಥಳವಾದ ಕನಕಗಿರಿಯ ಮಧ್ಯಮ ವರ್ಗದ ಪಂಡಿತ ಕುಟುಂಬದಲ್ಲಿ 1925ರಲ್ಲಿ ಜನಿಸಿದರು. ಪಾಂಡಿತ್ಯ ಇವರ ಮನೆತನದ ಪರಂಪರಾಗತವಾದ ಆಸ್ತಿ. ಉಳಿದ ಆಸ್ತಿ ಇವರಿಗೆ ನಾಸ್ತಿ. ಬಾಲಕ ಜಯತೀರ್ಥನು ತಂದೆಯವರಲ್ಲಿಯೇ ಸಂಸ್ಕೃತ ಕಾವ್ಯ ನಾಟಕಗಳ ಸಾದ್ಯಂತ ವ್ಯಾಸಂಗ ಮಾಡಿದನು. ಕಾವ್ಯ ವ್ಯಾಸಾಂಗ ಮಾಡುತ್ತಿರುವಾಗಲೇ ಪದ್ಯ ರಚಿಸುವ ಸಾಹಿತ್ಯಿಕ ಒಲವನ್ನು ಬಾಲಕ ಜಯತೀರ್ಥನು ಬೆಳೆಸಿಕೊಂಡು ಬಂದನು. ಅಷ್ಟಕ್ಕೇ ತೃಪ್ತಿ ಪಡೆಯದೆ ಪರಂಪರಾಗತವಾದ ರೀತಿಯಲ್ಲಿ ತರ್ಕ, ನ್ಯಾಯ, ಮತ್ತು ವ್ಯಾಕರಣಗಳ ಅಭ್ಯಾಸ ಮಾಡಿದನು.

ಮಗನ ವಿದ್ಯಾಭ್ಯಾಸದ ಪ್ರಗತಿಯನ್ನು ಕಂಡು ತಂದೆಯವರು, ಇನ್ನು ಮಗನು ಪ್ರಕಾಂಡ ಪಂಡಿತನಾಗಿ ಮನೆತನದ ಕೀರ್ತಿಯನ್ನು ಬೆಳಗುವನೆಂಬ ಸಮಾಧಾನ ಪಡೆಯುವಷ್ಟರಲ್ಲಿಯೇ ವಿದ್ಯಾರ್ಥಿ ಜಯತೀರ್ಥನು ಈ ಪರಂಪರಾಗತ ವಿದ್ಯಾಭ್ಯಾಸದಿಂದ ಸಿಡಿದು ಬಂದು ಇಂಗ್ಲೀಷ್ ಕಲಿಯಲು ಹೈದ್ರಾಬಾದಕ್ಕೆ ಹೋದನು. ಅಂದಿನ ವಾತಾವರಣದಲ್ಲಿ ಅದು ಕ್ರಾಂತಿಕಾರಿ ಹೆಜ್ಜೆಯಾಗಿತ್ತು.

ಸಾಂಪ್ರದಾಯಿಕ ವಾತಾವರಣದಲ್ಲಿ ಬೆಳೆದುಕೊಂಡು ಬಂದ, ವಿದ್ಯಾರ್ಥಿ ಜಯತೀರ್ಥನು ಭಾಗ್ಯ ನಗರದ (ಹೈದ್ರಾಬಾದ) ಹೊಸ ಪರಿಸರಕ್ಕೆ ಅಷ್ಟು ಬೇಗನೇ ಹೊಂದಿಕೊಂಡದ್ದು ಆಶ್ಚರ್ಯವೇ ಸರಿ. ಪ್ರತಿಭೆ ಪ್ರಯತ್ನದ ಸಾತತ್ಯ, ಕಾರ್ಯೋ

ತ್ಸಾಹದ ಗುಣಗಳಿಂದಾಗಿ ವಿದ್ಯಾಭ್ಯಾಸದಲ್ಲಿ ಬಹುಬೇಗ ಪ್ರಗತಿಯನ್ನು ಸಾಧಿಸಿದನು. ಇಂಗ್ಲೀಷ್, ಕನ್ನಡ ಸಂಸ್ಕೃತವನ್ನು ತೆಗೆದುಕೊಂಡು ಬಿ. ಎ. ಪರೀಕ್ಷೆಯಲ್ಲಿ ವಿಶ್ವ ವಿದ್ಯಾಲಯಕ್ಕೆ ಪ್ರಪ್ರಥಮವಾಗಿ ತೇರ್ಗಡೆಯಾದನು.

ಜಯತೀರ್ಥ ರಾಜಪುರೋಹಿತರು ವಿದ್ಯಾರ್ಥಿಯಾಗಿದ್ದಾಗ, ಹೈದ್ರಾಬಾದ ಸ್ವಾತಂತ್ರ್ಯ ಹೋರಾಟ ಸಿಡಿಯಿತು. ಆ ಸಂಗ್ರಾಮದಲ್ಲಿ ಧುಮುಕಿದರು. ಊರು–ಊರುಗಳನ್ನಲೆದು ಜನರನ್ನು ಸಂಘಟಿಸಿದರು. ಓಜಪೂರ್ಣವಾದ ಭಾಷಣಗಳಿಂದ ಜನ ಜಾಗ್ರತಿಯನ್ನು ಮಾಡಿದರು. ಕೆಲವು ಕಾಲ ಭೂಗತ ಕಾರ್ಯಕರ್ತರಾಗಿ ಕೆಲಸ ಮಾಡಿದರು. ಸತ್ಯಾಗ್ರಹದಲ್ಲಿ ಭಾಗವಹಿಸಿ ಸೆರೆಮನೆ ವಾಸವನ್ನು ಅನುಭವಿಸಿದರು.

**ಸರ್ಕಾರದ ಸೇವೆಯಲ್ಲಿ**

ಬಿ. ಎ. ಪರೀಕ್ಷೆಯಲ್ಲಿ ಇಡೀ ವಿಶ್ವವಿದ್ಯಾಲಯಕ್ಕೆ ಪ್ರಪ್ರಥಮರಾಗಿ ಪಾಸಾದ ಜಯತೀರ್ಥ ರಾಜಪುರೋಹಿತರಿಗೆ ಸರ್ಕಾರಿ ನೌಕರಿ ಸುಲಭವಾಗಿ ಸಿಕ್ಕಿತು. ನೇರ ವಾಗಿ ತಹಸೀಲ್ದಾರರಾಗಿ ನೇಮಕಗೊಂಡರು. ನಂತರ ಅಸಿಸ್ಟೆಂಟ್ ಕಮಿಷನರಾಗಿ, ಮುನಿಸಿಪಲ್ ಕಮಿಷನರಾಗಿ, ಮೈಸೂರ ವಿಶ್ವವಿದ್ಯಾನಿಲಯದ ಪರೀಕ್ಷಾ ನಿಯಂತ್ರ ಣಾಧಿಕಾರಿಗಳಾಗಿ, ವಿಶೇಷ ಜಿಲ್ಲಾಧಿಕಾರಿಗಳಾಗಿ, ಕನ್ನಡ ಅಭಿವೃದ್ಧಿ ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ ಗಣನೀಯವಾದ ಸೇವೆ ಸಲ್ಲಿಸಿ ದಕ್ಷ, ಸಮರ್ಥ, ಸಕ್ಷಮ ಅಧಿಕಾರಿಯೆಂದು ಹೆಸರಾದರು. ಯಾವ ಯಾವ ಹುದ್ದೆಗಳಲ್ಲಿ ನಿಂತು ರಾಜಪುರೋ ಹಿತರು ಕೆಲಸ ಮಾಡಿದರೊ, ಅಲ್ಲಿ ಅವರು ತಮ್ಮ ಹಿಂದೆ ಅಚ್ಚಳಿಯದ, ಮಾರ್ಗ ದರ್ಶಿಯಾದ ಹೆಜ್ಜೆಗಳನ್ನು ಬಿಟ್ಟು ಬಂದಿದ್ದಾರೆ. ಸಮರ್ಥ ಯಶಸ್ವಿ ಆಡಳಿತಗಾರ ನಲ್ಲಿರಬೇಕಾದ, ಸಮತೂಕದ ಮನಸ್ಸು, ಮಾನವೀಯ ದೃಷ್ಟಿ, ಅನುಕಂಪ, ಸಕಲ ರನ್ನೂ ಸೌಹಾರ್ದದಿಂದ ಕಾಣುವ ಸೌಜನ್ಯ, ಕಠಿಣ ಸಮಸ್ಯೆಗಳನ್ನು ಕೂಡ ಸಹನೆ ಯಿಂದ ಕೇಳಿಕೊಂಡು, ಶ್ರದ್ಧೆ ಸಹಾನುಭೂತಿಯಿಂದ ಕಾರ್ಯನಿರ್ವಹಿಸುವ ಶಕ್ತಿ ಸಾಮರ್ಥ್ಯಗಳನ್ನು ರಾಜಪುರೋಹಿತರು ಪಡೆದಿದ್ದಾರೆ. "ಆಡಳಿತವು ವಾರಾಂಗನೆ ಯಂತೆ ಬಹುರೂಪಿಯಾದುದು." ಆದರೆ ಜಯತೀರ್ಥ ರಾಜಪುರೋಹಿತರು ಈ ದೀರ್ಘಾವಧಿ ಸರ್ಕಾರಿ ಸೇವೆಯಲ್ಲಿ ನಿಷ್ಠೆಗೆ ಎರಡು ಬಗೆಯಲಿಲ್ಲ, ನಂಬಿಕೆಗೆ ಮೋಸ ಗೈಯಲಿಲ್ಲ, ಯಾವ ಆಶೆ–ಆಮಿಷಕ್ಕೂ ಮನಸೋಲಲಿಲ್ಲ. ಯಾವ ಒತ್ತಾಯಕ್ಕೂ ಮಣಿಯಲಿಲ್ಲ. ಅವರ ಆಡಳಿತಕ್ಕೆ ಎಂದೂ ಕುಂದು, ಕಲಂಕ ಸೋಂಕಲಿಲ್ಲ. ಅಷ್ಟು ಸ್ವಚ್ಛ, ವಿಶುದ್ಧ ಸ್ಫಟಿಕದಂತಹ ಚಾರಿತ್ರ್ಯ ಅವರದು.

**ಸಾಹಿತ್ಯ - ಸಂಪದ**

ನಿತ್ಯವೂ ಎಡಬಿಡದ, ವಿಪುಲ ಕಾರ್ಯಬಾಹುಲ್ಯದೊಂದಿಗೆ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸುತ್ತಲೇ ಕೆಲಸದ ಬದಲಾವಣೆಯ ವಿರಾಮ (ಚೇಂಜ್

ಆಫ್ ವರ್ಕ್ ಈಜ್ ರೆಸ್ಟ್) ಎನ್ನುವ ತತ್ವವನ್ನನುಸರಿಸಿದ ರಾಜಪುರೋಹಿತರು ಸಾರಸ್ವತ ಲೋಕಕ್ಕೆ ಹಲವಾರು ಮೌಲಿಕ ಕೊಡುಗೆಗಳನ್ನು ಕೊಟ್ಟಿದ್ದಾರೆ. ಅವರ ರಸಸ್ಯಂದಿನಿಯಾದ ಲೇಖನಿಯಿಂದ ಇಲ್ಲಿಯವರೆಗೆ ಮೂರು ಕಾದಂಬರಿಗಳು, ನಾಲ್ಕು ಕಥಾ ಸಂಗ್ರಹಗಳು, ಮೂರು ನಾಟಕಗಳು, ಆರು ಜೀವನ ಚರಿತ್ರೆಗಳು, ಏಳು ಸಂಪಾದಿತ ಕೃತಿಗಳು, ಇತಿಹಾಸವನ್ನೇ ನಿರ್ಮಿಸಿದ 'ಕನ್ನಡ ತೀರ್ಪುಗಳು'— ಹೀಗೆ ಇಪತ್ತುನಾಲ್ಕು ಕೃತಿಗಳು ಹೊರಬಂದಿವೆ. ಕಾಲ ಕಾಲಕ್ಕೆ ಬರೆದ ಬಿಡಿ ಪ್ರಬಂಧ ಲೇಖನಗಳಿಗೆ ಲೆಕ್ಕವಿಲ್ಲ.

ಇವರ 'ಶಿಥಿಲ ಶಿಲೆ' ಎಂಬ ಕಥಾ ಸಂಗ್ರಹವು ಕರ್ನಾಟಕ ವಿಶ್ವವಿದ್ಯಾಲಯದ ಎಂ. ಎ. (ಕನ್ನಡ) ವರ್ಗಕ್ಕೆ ಪಠ್ಯಪುಸ್ತಕವಾಗಿದೆ. ಕಾದಂಬರಿ 'ಜೇನುಸುಳಿ' ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯಗಳ ಬಿ.ಎ., ಬಿ. ಎಸ್‌ಸಿ., ವರ್ಗಗಳಿಗೆ ಪಠ್ಯವಾಗಿತ್ತು.

ಹೈದ್ರಾಬಾದ ಕರ್ನಾಟಕದ, ವಿಶೇಷವಾಗಿ ರಾಯಚೂರ ಜಿಲ್ಲೆಯ, ಹಿಂದಿನ ತಲೆಮಾರಿನ ಜನಜೀವನದ ಹಂದರದ ಮೇಲೆ, ಇವರ ಕಾದಂಬರಿ, ಸಣ್ಣ ಕಥೆಗಳ ಕಥಾವಲ್ಲರಿ ಹಬ್ಬಿಕೊಂಡು ಬಂದಿದೆ. ಆದ್ದರಿಂದ ವಾಸ್ತವಿಕತೆ, ಸಹಜತೆ, ಅಕೃತ್ರಿಮತೆ ಈ ಕೃತಿಗಳ ಜೀವಾಳವಾಗಿದೆ. ತಾನಾಗಿಯೇ ಓದಿಸಿಕೊಂಡು ಹೋಗುವ, ಓಜಪೂರ್ಣವಾದ, ಪ್ರವಾಹಿ, ಪ್ರಾಸಾದಿಕ ಶೈಲಿಯಿಂದಾಗಿ ಇವರ ಕಥೆ–ಕಾದಂಬರಿಗಳು ಜನಪ್ರಿಯವಾಗಿವೆ.

**ವಾಕ್ಪಟುತ್ವ**

ಜಯತೀರ್ಥ ರಾಜಪುರೋಹಿತರು ಬರಹ ಮತ್ತು ಭಾಷಣ ಎರಡೂ ಕಲೆಗಳನ್ನು ಸವ್ಯಸಾಚಿಯಾಗಿ ಕರತಲಾಮಲಕ ಮಾಡಿಕೊಂಡಿದ್ದಾರೆ. ಎಷ್ಟು ಸಮರ್ಥವಾಗಿ, ಸಂವೇದನಾ ಪೂರ್ಣವಾಗಿ ಬರೆಯಬಲ್ಲರೋ ಅಷ್ಟೇ ಪ್ರಭಾವಿಯಾಗಿ, ನಿರರ್ಗಳವಾಗಿ ಮಾತಾಡಬಲ್ಲರು. ಶ್ರೋತೃಗಳ ಹೃದಯವನ್ನು ಸೂರೆಗೊಳ್ಳಬಲ್ಲರು. ಅವರ ಮಾತಿನಲ್ಲಿ ಆರ್ದ್ರತೆಯಿದೆ, ನಿರ್ಧಾರದ ಕೆಚ್ಚಿದೆ, ಸ್ಪಷ್ಟತೆಯಿದೆ.

ಇವರ ಭಾಷಣವನ್ನು ಕೇಳಿದಾಗ, ರಾಮಾಯಣದಲ್ಲಿ ಹನುಮಂತನ ವಾಕ್ಪಟುತ್ವದ ಈ ವರ್ಣನೆ ನೆನಪಿಗೆ ಬರುತ್ತದೆ.

ಸಂಸ್ಕಾರ ಕ್ರಮಸಂಪನ್ನಾಂ ಅದ್ರುತಾಂ ಅವಿಲಂಬಿತಾಂ ।
ಉಚ್ಚಾರಯತಿ ಕಲ್ಯಾಣೀಂ ವಾಚಂ ಹೃದಯ ಹಾರಿಣೀಂ ॥

(ತೀರ ನಿಧಾನವಲ್ಲದ, ಅಷ್ಟು ಅವಸರವಲ್ಲದ, ಸಂಸ್ಕಾರ ಕ್ಷಮತೆಯುಳ್ಳ, ಹೃದಯವನ್ನೇ ಸೂರೆಗೊಳ್ಳಬಲ್ಲ, ಕಲ್ಯಾಣಕರವಾದ ವಾಣಿ ಹನುಮಂತನದು.)

ಶ್ರೀಯುತರದು ಬಹು ಭಾಷಾ ಪಾಂಡಿತ್ಯ. ಇಂಗ್ಲೀಷ್, ಹಿಂದಿ, ಕನ್ನಡ ಹೀಗೆ ಮೂರು ಭಾಷೆಗಳಲ್ಲಿ ಅಷ್ಟೇ ಅಧಿಕಾರ ವಾಣಿಯಿಂದ, ಸಮರ್ಥವಾಗಿ ಧಾರಾಕಾರ

ವಾಗಿ ಮಾತಾಡಬಲ್ಲರು. ಇವರ ಭಾಷಣವನ್ನು ಕೇಳಲು ಬಂದ ವ್ಯಕ್ತಿ, ಭಾಷಣ ಮುಗಿಯುವವರೆಗೂ, ಮೊಳೆ ಹೊಡೆದಂತೆ ತನ್ಮಯ ತಲ್ಲೀನನಾಗಿ ಕೇಳುತ್ತ ಕೂಡುತ್ತಾನೆ. ಆ ಮಾತಿನ ಮೋಡಿ ಅಂಥದು.

ಆಡಳಿತದ ಎಲ್ಲ ಹಂತಗಳಲ್ಲಿ ಕನ್ನಡ ಬಳಕೆಯ ಗುರಿಯನ್ನು ತಲುಪಲು ಇನ್ನೂ ಬಹಳಷ್ಟು ದಾರಿಯನ್ನು ಕ್ರಮಿಸಬೇಕಾಗಿದೆ. ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಇಂಗ್ಲೀಷಿನ ಹುಚ್ಚು ಹವ್ಯಾಸ, ವ್ಯಾಮೋಹ, ಇನ್ನೂ ನಮ್ಮಿಂದ ತೊಲಗಿಲ್ಲ. ಪಟ್ಟಭದ್ರರ ಹಿತಾಸಕ್ತಿಗಳು ಅದಕ್ಕೆ ಪುಟ ಕೊಡುತ್ತಿವೆ. ಈ ಸಂಕ್ರಮಣ ಕಾಲದಲ್ಲಿ ಕನ್ನಡ ಜನತೆ, ಹೋರಾಟಗಾರರೂ, ಸಮರ್ಥ ಲೇಖಕರೂ, ಕ್ರಿಯಾಶೀಲರೂ ಆದ ಶ್ರೀ ಜಯತೀರ್ಥ ರಾಜಪುರೋಹಿತರಿಂದ ಬಹಳಷ್ಟು ಅಪೇಕ್ಷೆಯನ್ನು ಇಟ್ಟುಕೊಂಡಿದೆ.

"ಕನ್ನಡದಲ್ಲಿ ಕವಿರಾಜಮಾರ್ಗ ಮತ್ತು ಪಂಪ ಭಾರತಗಳು ರಚಿತವಾದಾಗ ಇಂಗ್ಲೀಷ್ ಭಾಷೆಯಲ್ಲಿ ಅಂಧಕಾರ ಯುಗವಿತ್ತು. ಸಾಹಿತ್ಯರಚನೆಗಾಗಿ ಆ ಭಾಷೆಯೇ ರೂಪುಗೊಂಡಿರಲಿಲ್ಲ."

"ಇಂಗ್ಲೀಷ್‌ಗೂ ನಮಗೂ ಜನ್ಮಜನ್ಮಾಂತರದ ಸಂಬಂಧವೇನೂ ಇಲ್ಲ. ಕನ್ನಡಕ್ಕೂ ನಮ್ಮ ಜನತೆಗೂ ಕನಿಷ್ಠ ಸಾವಿರಾರು ವರ್ಷಗಳ ಸಂಬಂಧವಾದರೂ ಇದೆ."

# ನಮ್ಮ ಜಯಣ್ಣ

**ಬಿ. ಮರಿಯಪ್ಪ**
**ಕನಕಗಿರಿ**

ಕನಕಗಿರಿ ರಾಯಚೂರು ಜಿಲ್ಲೆಯ ಒಂದು ಸಾಮಾನ್ಯ ಪಟ್ಟಣ. ಐತಿಹಾಸಿಕ ಪ್ರಸಿದ್ಧಿಯ ನಮ್ಮೂರಿಗೆ ವರ್ತಮಾನ ಪ್ರಸಿದ್ಧಿ ತಂದವರು ನಮ್ಮ ಜಯಣ್ಣ. ಹೊರ ನಾಡಿಗೆಲ್ಲ ಜಯತೀರ್ಥ ರಾಜಪುರೋಹಿತರು ; ಕನಕಗಿರಿಗೆ ಬರಿ 'ಜಯಣ್ಣ'. ಇದು ನಮ್ಮ ಪ್ರೀತಿಯ ಕೂಗು, ವಾತ್ಸಲ್ಯದ ದನಿ. ಕನಕಗಿರಿಯ ಅಂಗಳದಲ್ಲಿ ಆಡಿ ಬೆಳೆದ ಈ ಜೀವ ಕನ್ನಡ ನಾಡಿನ ಉದ್ದಗಲಕ್ಕೂ ಬೆಳೆದು ನಿಂತಿದೆ. ಕನಕಗಿರಿಯಲ್ಲಿ ಜನ್ಮ ತಳೆದ ಬಿಂದು, ಸಿಂಧು ರೂಪತಾಳಿದೆ. ಒಂದು ಕಾಲಕ್ಕೆ ಕನಕಗಿರಿಯವರೆಂದು ಪರಿಚಯಿಸಿಕೊಳ್ಳಬೇಕಾದ ಜಯಣ್ಣ, ಇಂದು ತಮ್ಮಿಂದ ಕನಕಗಿರಿಯನ್ನು ಪರಿಚ ಯಿಸಬೇಕಾಗಿದೆ, ಕನಕಗಿರಿ ಜಯಣ್ಣನವರದೆಂದು ಗುರುತಿಸಬೇಕಾಗಿದೆ. ಇದು ನಮ್ಮವರ, ನಮ್ಮೂರ ಭಾಗ್ಯ. ಅಂತೆಯೇ ಅಭಿಮಾನ ಎಂಬುದಕ್ಕೆ ಎರಡನೆಯ ಹೆಸರೇ ಇಲ್ಲಿ ಜಯಣ್ಣ.

ವ್ಯಕ್ತಿಯ ಜೀವನ ಚರಿತ್ರೆಯೆಂದರೆ ಹುಟ್ಟು, ಬೆಳವಣಿಗೆ, ಮದುವೆ, ಮಕ್ಕಳು ಮುಂತಾದ ದಾಖಲೆಯಲ್ಲ ; ಅವನ ಕೃತಿಗಳು, ಸಾಧನೆಗಳು. ಜಯಣ್ಣನವರು ಕ್ರಿಯಾಶೀಲರು, ಚೈತನ್ಯಶೀಲರು. ತಹಸೀಲ್ದಾರ ಹುದ್ದೆಯಿಂದ ಆರಂಭಿಸಿದ ಜೀವನ ಐ. ಎ. ಎಸ್. ಅಧಿಕಾರಿಯಾಗುವವರೆಗೆ ಬೆಳೆದಿದ್ದೇ ಇದಕ್ಕೆ ಸಾಕ್ಷಿ. ಈ ಉತ್ಕರ್ಷ ಅವರ ಶ್ರಮ, ಶ್ರದ್ಧೆಗಳ ಸಂಕೇತ. ತಹಸೀಲ್ದಾರ, ಅಸಿಸ್ಟೆಂಟ ಕಮೀಷನರ್, ಜಿಲ್ಲಾಧಿ ಕಾರಿ, ಕನ್ನಡ ಭಾಷಾಭಿವೃದ್ಧಿ ಸಂಸ್ಥೆಯ ನಿರ್ದೇಶಕರು, ಶಿಕ್ಷಣ ಇಲಾಖೆಯ ಉಪ ಕಾರ್ಯದರ್ಶಿ-ಹೀಗೆ ಹತ್ತಾರು ಹುದ್ದೆಗಳನ್ನು ನಿರ್ವಹಿಸಿದವರು, ಅನೇಕ ಮಜಲು ಗಳನ್ನು ಕಂಡ ವರು. ಶಕ್ತರಾದವರಿಗೆ ಅಧಿಕಾರಗಳು ಸಾಲು ಹಿಡಿದು ನಿಲ್ಲುತ್ತವೆ. ಇವರ ಕರ್ತೃತ್ವ ಶಕ್ತಿ ಎಲ್ಲವನ್ನೂ ನಿರಾಯಾಸವಾಗಿ ನಿರ್ವಹಿಸಿದೆ, ನಿರ್ವಹಿಸುತ್ತಿದೆ. ಅಂತೆಯೇ ಈಗ, ನಿಯೋಜಿತ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ವಿಶೇಷ ಅಧಿಕಾರಿ ಇವರು.

ಜಯಣ್ಣ ಕನ್ನಡ ನಾಡಿನ ಸೃಜನಶೀಲ ಸಾಹಿತಿಗಳಲ್ಲಿ ಒಬ್ಬರು. ಅಧಿಕಾರಿಗಳಾಗಿ ನಾಡವರ ಸೇವೆ ಮಾಡಿದ ಇವರ ಇನ್ನೊಂದು ಮುಖ ಸಾಹಿತಿಯಾಗಿ ನುಡಿಯ ಸೇವೆ ಮಾಡಿದೆ. ಸಾಹಿತಿಯಾಗಿ ಇವರ ಸ್ಥಾನ ಯಾವದೆನ್ನುವದನ್ನು ಕನ್ನಡ ಸಹೃದಯರು ಕಂಡಿದ್ದಾರೆ. 'ಸುಳಿಗಾಳಿ', 'ಹಾಲು ಜೇನು'. 'ಪಾರವ್ವನ ಪಂಚಾಯಿತಿ' ಮುಂತಾದವು ಇವರ ಸಾಹಿತ್ಯಿಕ ಕೃತಿಗಳು. ಕನ್ನಡವಲ್ಲದೆ ಉರ್ದು ಇಂಗ್ಲೀಷ್, ಸಂಸ್ಕೃತಗಳಲ್ಲೂ ಪರಿಣತರು. ಇವರ ಕೃತಿಗಳಿಗೆ ಹಲವಾರು ಬಹುಮಾನಗಳು ಸಂದಿವೆ. ರಾಜ್ಯ ಸಾಹಿತ್ಯ ಅಕಾಡೆಮಿಯೂ ಇವರ ಸಾಹಿತ್ಯ ಕೃಷಿಯನ್ನು ಗುರುತಿಸಿದೆ, ಗೌರವಿಸಿದೆ. ಅದಕ್ಕೆಂದೇ 1978ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

ಕನ್ನಡ ಜನ ಜಯಣ್ಣನವರಿಗೆ ಋಣಿಯಾಗಿರಬೇಕಾದದು ಸಾಹಿತ್ಯ ಸೇವೆಗಿಂತಲೂ ಹೆಚ್ಚಾಗಿ ಕನ್ನಡ ಆಡಳಿತ ಭಾಷೆಯಾಗಬೇಕೆಂಬ ಅವರ ಕಾಳಜಿಗಾಗಿ. ಕನ್ನಡ ನಾಡಿನಲ್ಲಿ ಕನ್ನಡ ನುಡಿಯೇ ಪರದೇಶಿಯಾಗಿದ್ದುದು ನಮ್ಮ ದೌರ್ಭಾಗ್ಯ. ಸರ್ಕಾರ, ಆಡಳಿತ ಎಲ್ಲದಕ್ಕೂ ಮೂಲ ಶ್ರೀ ಸಾಮಾನ್ಯ. ಅವನಿಂದ ರಚಿತವಾದ ಆಡಳಿತ ಸಂಸ್ಥೆ ಅವನಿಗೇ ಅರ್ಥವಾಗದ ಭಾಷೆಯಲ್ಲಿ ಆಡಳಿತ ನಿರ್ವಹಿಸುವುದು ಎಂಥ ವಿಪರ್ಯಾಸ! ಇದರಿಂದ ಸಾಮಾನ್ಯನಿಗಾಗುವ ಹಾನಿಯನ್ನು ಅನುಭವದಿಂದ ಮನಗಂಡವರು ಇವರು. ಆದುದರಿಂದ ಕನ್ನಡವೇ ಆಡಳಿತ ಭಾಷೆಯಾಗಬೇಕೆಂದು ಪಟ್ಟುಹಿಡಿದವರಲ್ಲಿ ಜಯಣ್ಣನವರೂ ಒಬ್ಬರು. ಅದಕ್ಕಾಗಿ ಶ್ರಮಿಸಿದವರಲ್ಲಿ ಪ್ರಮುಖರು. ಈ ದಿಕ್ಕಿನಲ್ಲಿ ಕನ್ನಡಕ್ಕಾಗಿ ಕೈ ಎತ್ತಿದರು, ಕೊರಳೆತ್ತಿದರು. ಚಿತ್ರದುರ್ಗ ಜಿಲ್ಲಾಧಿಕಾರಿಯಾದಾಗ ಕನ್ನಡದಲ್ಲೇ ಕೊಟ್ಟ ತೀರ್ಪು "ಕನ್ನಡಕ್ಕೆ ಆಡಳಿತ ಭಾಷೆಯಾಗುವ ಸಾಮರ್ಥ್ಯವಿಲ್ಲ" ಎಂಬ ಅಪಸ್ವರಕ್ಕೆ ತಕ್ಕ ಉತ್ತರ. ಕನ್ನಡಕ್ಕೆ ಯಾವ ವಿಷಯವನ್ನಾದರೂ ಸಂವಹನಿಸುವ ಸತ್ವ, ಸ್ವತ್ತು ಇದೆ ಎನ್ನುವುದನ್ನು 'ಕನ್ನಡ ತೀರ್ಪುಗಳು' ಪುಸ್ತಕ ರಚಿಸುವುದರ ಮೂಲಕ ತೋರಿಸಿಕೊಟ್ಟರು.

"ವ್ಯಕ್ತಿಯ ಜೀವನದಲ್ಲಿ ಕೊಂಡುದಕ್ಕಿಂತಲೂ ಕೊಟ್ಟದು ಹೆಚ್ಚಾಗಿರಬೇಕೆಂಬ" ಕಾರಂತರ ಮಾತಿನಂತೆ ಹುಟ್ಟಿದ ನೆಲಕ್ಕೆ, ಬೆಳೆದ ನಾಡಿಗೆ ಪಡೆದುದಕ್ಕಿಂತಲೂ ಹೆಚ್ಚಿಗೆ ಮರಳಿಸಿದ್ದಾರೆ. ಇವರ ಶ್ರಮದಿಂದಲೇ ನಮ್ಮೂರಿಗೆ ಈ ವರ್ಷ ಲಭ್ಯವಾದ ಕಿರಿಯ ಮಹಾ ವಿದ್ಯಾಲಯ ಈ ಮಾತಿಗೆ ಸಾಕ್ಷಿ. ಊರವರ, ನಾಡವರ ಏಳ್ಗೆಯ ಕಳಕಳಿ ಯಾವಾಗಲೂ ಮನದಲ್ಲಿರುತ್ತದೆ. ಊರ ಹಿತವನ್ನು ಬಯಸುವ ಪುರೋಹಿತ. ಪುರೋಹಿತರ ಮನೆಯಲ್ಲಿ ಹುಟ್ಟಿದ್ದ ಜಯಣ್ಣ ಈ ಮಾತನ್ನು ಸಾರ್ಥಕಗೊಳಿಸಿದ್ದಾರೆ. ಜಯಣ್ಣನವರು ದೊಡ್ಡವರಿದ್ದಾಗಲೂ ನಮ್ಮೊಡನೆ ಪ್ರೀತಿಯಿಂದ ಬೆರೆಯುವುದು ಅವರ ಸೌಜನ್ಯ. ನಮ್ಮೂರಿನ ಬಡ ರೈತನೂ ಜಯಣ್ಣನವರ ಸ್ನೇಹಿತ. ದೊಡ್ಡವರಿಗೆಲ್ಲವೂ ದೊಡ್ಡವು. ಸಣ್ಣದು–ದೊಡ್ಡದು

ಎಂಬ ಸಣ್ಣ ವಿಚಾರ ಬರದು. ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದರೂ ತುಂಬ ಪ್ರಗತಿಶೀಲರು, ಆಧುನಿಕರು. ಮಾನವೀಯ ಭಾವನೆಗಳೇ ಅವರ ಧರ್ಮ, ದೇವರು.

ಜಯಣ್ಣ ನಮಗೆಲ್ಲ ದೊಡ್ಡ ಸಂಪತ್ತು, ಎಲ್ಲಿಲ್ಲದ ತಾಕತ್ತು. ಅವರ ಜೀವನ ನಮಗೊಂದು ಆದರ್ಶ, ಆದೇಶ. ಈ ಜೀವ ನೂರು ವರ್ಷ ಬಾಳಲಿ, ಮುಗಿಲೆತ್ತರಕ್ಕೂ ಬೆಳೆಯಲಿ ಎನ್ನುವುದು ಹೆತ್ತಂಗಳದ ಹಾರೈಕೆ, ನಮ್ಮೆಲ್ಲರ ಬಯಕೆ. ಅಂತೆಯೇ ನಾವೆಲ್ಲ ಒಕ್ಕೊರಲಿನಿಂದ 'ಜೈಯಣ್ಣ'-ಅನ್ನುತ್ತೇವೆ.

"ಭಾಷೆ ತಯಾರಾಗಿಲ್ಲ ಎಂದರೆ ಭಾಷೆ ಬಳಸುವವರು ತಯಾರಾಗಿಲ್ಲವೆಂದೇ ಅರ್ಥ. ಬಳಸಿದಂತೆ ಭಾಷೆ ತಯಾರಾಗುತ್ತದೆ."

"ಆಡಳಿತ ಭಾಷೆಯ ಸಮಸ್ಯೆಯೊಂದು ಸಮಸ್ಯೆಯೇ ಅಲ್ಲ. ಇದು ನಾವಾಗಿ ಅಂದರೆ ಇಂಗ್ಲೀಷ್ ಮೂಲಕ ಲಾಭಸ್ಥಾನಗಳಲ್ಲಿ ಕುಳಿತಿರುವ ಕೆಲವೇ ಜನರು ಮತ್ತು ಕನ್ನಡದ ಹಿನ್ನೆಲೆ ಹಾಗೂ ಸಾಧ್ಯತೆಗಳನ್ನು ತಿಳಿಯದ ಜನರು ಹುಟ್ಟಿಸಿಕೊಂಡ ಸಮಸ್ಯೆಯಾಗಿದೆ."

# ಸೀಮಾಪುರುಷ
# ಶ್ರೀ ಜಯತೀರ್ಥ ರಾಜಪುರೋಹಿತರನ್ನು ನಾನು ಕಂಡಂತೆ

ವೈ. ಯಂ. ಪಿ. ಶರ್ಮ
ಅಧ್ಯಕ್ಷ
ರಾಜ ಭಾಷಾ (ವಿಧಾಯಿ) ಆಯೋಗ
ಬೆಂಗಳೂರು

ನನ್ನ ಮಾನ್ಯ ಮಿತ್ರರಾದ ಶ್ರೀ ಜಯತೀರ್ಥ ರಾಜಪುರೋಹಿತ ಅವರ ವಿಚಾರದಲ್ಲಿ ಎರಡು ಮಾತು ಬರೆಯಲು ನನಗೆ ಸಂತೋಷವೆನಿಸುತ್ತದೆ. ಈ ಚಿಕ್ಕ ಲೇಖನದಲ್ಲಿ ನಾನು ಅವರು ರಚಿಸಿರುವ ಕನ್ನಡ ಸಾಹಿತ್ಯ ಕೃತಿಗಳ ಬಗ್ಗೆ ಆಗಲೀ ಅವರಿಗೆ ಸಾಹಿತ್ಯ ರಚನೆಯಲ್ಲಿರುವ ಅಭಿರುಚಿ, ಆಳ, ಪಾಂಡಿತ್ಯ ಮತ್ತು ಶೈಲಿಯ ಬಗ್ಗೆಯಾಗಲಿ ಮೌಲ್ಯಮಾಪನ ಮಾಡಲು ಹೋಗುವುದಿಲ್ಲ. ಹಾಗೆ ಮಾಡಲು ನನಗೆ ಯೋಗ್ಯತೆಯೂ ಇಲ್ಲ. ಆದರೆ ಅವರನ್ನು ನಾನು ಕಂಡಂತೆ, ಅವರನ್ನು ನಾನು ತಿಳಿದುಕೊಂಡಂತೆ ಕೆಲವು ಸಂಗತಿಗಳನ್ನು ಹೇಳಲು ಬಯಸುತ್ತೇನೆ.

1972ನೇ ಇಸವಿಗೆ ಮೊದಲು ನಾನು ಅವರನ್ನು ನೋಡಿರಲಿಲ್ಲ. ನಾನು ಈಗ ಎಂಟು ವರ್ಷದ ಹಿಂದೆ ರಾಯಚೂರು ಜಿಲ್ಲಾ ನ್ಯಾಯಾಧೀಶನಾಗಿ ಕೆಲಸ ಮಾಡುತ್ತಿದ್ದೆ. ಒಮ್ಮೆ ಗಂಗಾವತಿಯಿಂದ ರಾಯಚೂರಿಗೆ ಬರುವಾಗ ನನ್ನ ಜೊತೆಯಲ್ಲಿದ್ದವರು ಕನಕಗಿರಿ ಇದೇ ಕಡೇ ಇದೆ, ಅದು ಸುಪ್ರಸಿದ್ಧವಾದ ಶ್ರೀ ನೃಸಿಂಹ ಸ್ವಾಮಿಯವರ ಪವಿತ್ರ ಸ್ಥಳ ಹಾಗೂ ಶ್ರೀ ಜಯತೀರ್ಥ ರಾಜಪುರೋಹಿತರು ಹುಟ್ಟಿ ಬೆಳೆದ ಊರು ಎಂದು ಹೇಳಿದರು. ನನ್ನ ಕುತೂಹಲ ಕೆರಳಿತು. ಕೆಲವು ಸಮಯದ ನಂತರ ನನ್ನ ನ್ಯಾಯಾಲಯದಲ್ಲಿ ರಾಯಚೂರು ಮುನಿಸಿಪಾಲಿಟಿಗೆ ಸಂಬಂಧಿಸಿದಂತೆ ಮೂರು ನಾಲ್ಕು ಹಣದುರುಪಯೋಗ ಮಾಡಿದ ಮತ್ತು ಖೋಟ ದಾಖಲೆಗಳನ್ನು ತಯಾರು ಮಾಡಲಾಗಿದೆಯೆಂದು ಹೇಳಲಾದ ಮೊಕದ್ದಮೆಗಳು ವಿಚಾರಣೆಗೆ ಬಂದುವು. ಸಾಕ್ಷಿದಾರರ ಪಟ್ಟಿಯ ಅಗ್ರಸ್ಥಾನದಲ್ಲಿ ಶ್ರೀ ಜಯತೀರ್ಥ ರಾಜಪುರೋಹಿತರ ಹೆಸರಿದ್ದಿತು. ಏಕೆಂದರೆ ಸಂಬಂಧಿಸಿದ ಸಮಯದಲ್ಲಿ ಅವರು

ರಾಯಚೂರು ಮುನಿಸಿಪಲ್ ಕಮಿಷನರ್ ಆಗಿದ್ದರು. ಮೊಕದ್ದಮೆಗಳನ್ನು ವಿಚಾರಣೆಗೆ ತೆಗೆದುಕೊಂಡಾಗ ಶ್ರೀ ರಾಜಪುರೋಹಿತರು ಮೈಸೂರು ವಿಶ್ವವಿದ್ಯಾನಿಲಯದ ಪರೀಕ್ಷಾ ನಿಯಂತ್ರಣಾಧಿಕಾರಿಗಳಾಗಿದ್ದರು. ಖಟ್ಲೆ ಬಹಳ ಹಳೆಯದಾಗಿದ್ದವು ಹಾಗೂ ದಿನನಿತ್ಯವೂ ನಡೆಸಿ ಮುಗಿಸಬೇಕಾದ್ದರಿಂದ ಶ್ರೀ ರಾಜಪುರೋಹಿತರಿಗೆ ಕೋರ್ಟಿಗೆ ಬಂದು ಸಾಕ್ಷ್ಯನುಡಿದು ಹೋಗಬೇಕೆಂದು ಕೋರಿ ಕಾಗದ ಬರೆದು ಸಮನ್ಸು ಸಹ ಕಳುಹಿಸಲಾಯಿತು. ಅವರು ಬಹಳ ಕಾರ್ಯಗಳಿದ್ದರೂ ನನಗೆ ನೆನಪಿರುವಂತೆ ಅವ್ಯಾಹತವಾಗಿ 15–20 ದಿನ ಸಾಕ್ಷ್ಯವನ್ನು ನುಡಿದು ಹೋದರು. ನ್ಯಾಯಾಲಯಕ್ಕೆ ಸಕಾಲಕ್ಕೆ ಬಂದು, ಸಾಕ್ಷಿ ಪೆಟ್ಟಿಗೆಯಲ್ಲಿ ನಿಂತು, ಸವಾಲು, ಪಾಟಿಸವಾಲುಗಳನ್ನು ಎದುರಿಸಿ, ಶಾಂತಚಿತ್ತರಾಗಿ ತಿಳಿದಿದ್ದನ್ನು ಖಚಿತವಾಗಿ ನುಡಿದು ಹೊರಟುಹೋದರು. ಒಮ್ಮೆಯಾದರೂ ನೆನಪಿನ ಟಿಪ್ಪಣಿಯನ್ನಾಗಲೀ, ಯಾವದೇ ದಾಖಲೆಗಳನ್ನಾಗಲೀ ಅವರು ನೋಡಬಯಸಲಿಲ್ಲ. ಇದೇ ನನಗೂ ಅವರಿಗೂ ಆದ ಪ್ರಥಮ ಸಮಾಗಮ. ಅದು ಅಚ್ಚಳಿಯದೆ ಇನ್ನೂ ಮನಸ್ಸಿನಲ್ಲಿ ನಿಂತಿದೆ. ಇದನ್ನು ವಿಶದವಾಗಿ ಹೇಳಬೇಕಾದ ಪ್ರಮೇಯವಿಷ್ಟೆ. ನಾನು ಬಹಳ ಜನ ಅಧಿಕಾರಿಗಳ ಸಾಕ್ಷ್ಯವನ್ನು ಬರೆದುಕೊಂಡಿದ್ದೇನೆ. ಆದರೆ ಬಹಳ ಜನ ತಾಳ್ಮೆಯನ್ನು ಕಳೆದುಕೊಂಡೊ, ಸಹನೆಯಿಲ್ಲದೆಯೋ ಅಥವಾ ಇತರೇ ಯಾವದೋ ಮನೋವಿಕಾಶಕ್ಕೆ ಒಳಪಟ್ಟು ಅವರ ಸಮತೋಲನವನ್ನು ಕಳೆದುಕೊಂಡಿದ್ದಾರೆ. ಆದರೆ, ನಾನು ಶ್ರೀ ರಾಜಪುರೋಹಿತರಲ್ಲಿ ಗಮನಿಸಿದ್ದು ತೀಕ್ಷ್ಣವಾದ ಸ್ಮರಣಶಕ್ತಿ, ಗ್ರಹಣಶಕ್ತಿ, ಖಚಿತತೆ ಹಾಗೂ ವಿಷಯದ ಬಗೆಗಿನ ಪ್ರಭುತ್ವ ಮತ್ತು ಸೌಜನ್ಯ—ಈ ಎಲ್ಲ ಗುಣಗಳು ಮುಪ್ಪುರಿಗೊಂಡಿರುವುದು ಬಹಳ ವಿರಳ.

ಶ್ರೀ ರಾಜಪುರೋಹಿತರು ಕನ್ನಡದ ಅಭಿಮಾನಿಗಳು ಮತ್ತು ಸ್ವತಃ ಕನ್ನಡದಲ್ಲೇ ಅನೇಕ ಪ್ರಕಾರಗಳಲ್ಲಿ ಕೃತಿರಚನೆ ಮಾಡಿರುತ್ತಾರೆಂದು ಕೇಳಿದ್ದೆ. ಅವರು ಚಿತ್ರದುರ್ಗ ಜಿಲ್ಲೆಯ ವಿಶೇಷ ಜಿಲ್ಲಾಧಿಕಾರಿಗಳಾಗಿದ್ದಾಗ (1974ರಲ್ಲಿ) ತೀರ್ಪುಗಳನ್ನು ಅಚ್ಚಕನ್ನಡದಲ್ಲಿ ಬರೆದು ಒಂದು ಒಳ್ಳೆಯ ಮೇಲ್ಪಂಕ್ತಿಯನ್ನು ಎಲ್ಲ ನ್ಯಾಯಾಧೀಶರಿಗೂ ಹಾಕಿಕೊಟ್ಟರು. ಆಗ ಕನ್ನಡದಲ್ಲಿ ತೀರ್ಪು ಬರೆಯುವವರಿಗೆ ಬಹುಮಾನಗಳೇನೂ ಇರಲಿಲ್ಲ. ಇದು ಅವರ ಕನ್ನಡದ ಅಭಿಮಾನಕ್ಕೆ ಒಳ್ಳೆಯ ನಿದರ್ಶನ.

ಅವರು ಬೆಂಗಳೂರಿನಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರಾಗಿದ್ದಾಗ ಹಲವಾರು ಸಾರಿ ಅವರೊಡನೆ ಸಭೆ, ಸಮಾರಂಭ, ವಿಚಾರಗೋಷ್ಠಿಗಳು ಮತ್ತು ಇತರ ವಿಚಾರ ಸಂಕಿರಣಗಳಲ್ಲಿ ಭಾಗವಹಿಸುವ ಸುಯೋಗವು ನನ್ನದಾಗಿತ್ತು. ನಾನೂ, ಅವರೂ, ಶ್ರೀ ಕಂಠೀರಾಯರೂ (ಭಾಷಾಂತರ ನಿರ್ದೇಶನಾಲಯದ ನಿರ್ದೇಶಕರು) ಮತ್ತು ವಿದ್ಯಾ ಇಲಾಖೆಯ ಕಮಿಷನರ್ ಶ್ರೀ ಡಿ. ಮೆಲ್ಲೋ

ಅವರೂ 1978ನೇ ಮಾರ್ಚಿ ಮೊದಲನೆ ವಾರದಲ್ಲಿ ದೆಹಲಿಗೆ ಅಖಿಲ ಭಾರತ ರಾಜಭಾಷಾ ಸಮ್ಮೇಳನದಲ್ಲಿ ಭಾಗವಹಿಸಲು ಹೋಗಿದ್ದೆವು. ಅದೊಂದು ಚಿರಸ್ಮರಣೀಯವಾದ ಅನುಭವ. ಉತ್ತರ ಭಾರತದ ನಾನಾ ರಾಜ್ಯಗಳಿಂದ ಮಹಾನ್ ವ್ಯಕ್ತಿಗಳು ಆಗಮಿಸಿದ್ದರು. ರಾಜ್ಯದ ಆಡಳಿತ ಭಾಷೆ, ಹಿಂದಿ ಮತ್ತು ಇತರ ವಿಷಯಗಳ ಬಗ್ಗೆ ಬಹಳ ಕ್ಲಿಷ್ಟವೂ, ಸೂಕ್ಷ್ಮವೂ ಮತ್ತು ಶೀಘ್ರಗ್ರಾಹಿ ಪರಿಸ್ಥಿತಿಗಳು ಚರ್ಚೆಯಲ್ಲಿ ಉದ್ಭವಿಸಿದವು. ಎಲ್ಲಾ ಭಾಷಣಗಳು ಹಿಂದಿ ಮತ್ತು ಉರ್ದು ಭಾಷೆಗಳಲ್ಲಿ ನಡೆದವು. ಶ್ರೀ ರಾಜಪುರೋಹಿತರು ಅದರಲ್ಲಿ ವಹಿಸಿದ ಭಾಗ ರೋಮಾಂಚಕಾರಿಯಾಗಿತ್ತು. ಅವರ ಪಾತ್ರ ಟೆನ್ನಿಸ್ ಆಟದಲ್ಲಿ ಉಭಯಹಸ್ತ ಕುಶಲತೆಯ ಪ್ರಯೋಗದಂತಿತ್ತು. ಇಂಗ್ಲೀಷ್, ಹಿಂದಿ, ಉರ್ದು ಭಾಷೆಗಳಲ್ಲಿ ಖಂಡತುಂಡವಾಗಿ, ನಿರ್ದಿಷ್ಟವಾದ, ವಾದ ಸರಣಿಯಿಂದ ಸಕಲರ ಮನವನ್ನು ಸೆಳೆದು ಅವರ ವಿಚಾರಧಾರೆಯ ಪರಿಪಕ್ವತೆಯನ್ನು ಸಾರಿ ಕರ್ನಾಟಕದ ಧ್ವಜವನ್ನು ಎತ್ತಿ ಹಿಡಿದರು. ವಿಷಯ ಪ್ರತಿಪಾದನೆ, ಸಂಗತಿಗಳ ಜೋಡಣೆ ಮತ್ತು ಅವುಗಳ ನಿರೂಪಣೆಯನ್ನು ವಾಕ್ಪಟುತ್ವದೊಂದಿಗೆ ಅಭಿವ್ಯಕ್ತಿಸುವುದು ಒಂದು ಸೌಭಾಗ್ಯವೇ ಸರಿ.

ಶ್ರೀ ರಾಜಪುರೋಹಿತರು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ ಮಾಡಿದ ಕೆಲಸ ಚಿರಕಾಲ ಉಳಿಯತಕ್ಕುದ್ದು ಮತ್ತು ಕನ್ನಡ ಜನ ನೆನಸಬೇಕಾದುದು. ಈ ಕಾರ್ಯದಲ್ಲಿ ಅವರು ಬಾಳಿನ ಒಂದು ಹೊಸ ಸಾರ್ಥಕತೆಯನ್ನು ಬೆಳೆಸಿಕೊಂಡರೆಂದು ನಾನು ಭಾವಿಸಿದ್ದೇನೆ. ಹನ್ನೆರಡು ವರುಷದ ಹಿಂದೆ ಶ್ರೀ ಜಿ. ಪಿ. ರಾಜರತ್ನಂ ಅವರು 'ವಿಚಾರ ರಶ್ಮಿ'ಯಲ್ಲಿ 'ದರಿದ್ರ ಕನ್ನಡ' ಎಂಬ ಶೀರ್ಷಿಕೆಯಲ್ಲಿ ಬರೆಯುತ್ತಾ ಹೀಗೆಂದಿದ್ದರು. "ಬಿಲ್ಲಿನ ಕಂಬಿಗೆ ಬಲ ಬೇಕಾದ ಹಾಗೆ ಇದೆ, ಅದನ್ನು ಬಗ್ಗಿಸುವ ತೋಳಿಗೆ ಬಲ ಬರಬೇಕು ; ಬಿಡುವ ಬಾಣ ನೇರವಾಗಿದೆ ; ಬಿಡುವವನ ಗುರಿ ನೇರವಾಗಿರಬೇಕು. ಬಲಹೀನನಾದವನ ಕೈಯಲ್ಲಿ ಎಂಥ ಸಮರ್ಥವಾದ ಶಸ್ತ್ರಾಸ್ತ್ರ ದೊರಕಿದರೂ ಅವನ ಅಸಾಮರ್ಥ್ಯದಿಂದ ಅವುಗಳ ಸಾಮರ್ಥ್ಯ ಪ್ರಕಾಶಕ್ಕೆ ಬಾರದೆ ಹೋಗುತ್ತದೆ. ಅರಿತವರ ಕೈಯಲ್ಲಿ ಕನ್ನಡ ಸಂಪನ್ನ, ಅರಿಯದವರ ಕೈಯಲ್ಲಿ ಅದು ದರಿದ್ರ" ಶ್ರೀ ರಾಜಪುರೋಹಿತರ ಕಾರ್ಯ ನಿರ್ವಹಣೆಯಲ್ಲಿ ಕನ್ನಡ ಆಡಳಿತ ಭಾಷೆಯಾಗಿ ಬಹಳ ಸೊಂಪಾಗಿ, ಚೆನ್ನಾಗಿ ಅಭಿವೃದ್ಧಿ ಆಯಿತು. ಅವರ ಚೈತನ್ಯದಾಯಕವಾದ ಕಾರ್ಯತತ್ಪರತೆಯಿಂದ, ಹುರುಪಿನ ಪ್ರಸ್ಥಾನದಿಂದ ಕನ್ನಡ ನಿಜಕ್ಕೂ ಸಂಪನ್ನವಾಯಿತು.

ಉತ್ತರ ಕರ್ನಾಟಕ ಮತ್ತು ಹೈದ್ರಾಬಾದು ಕರ್ನಾಟಕ ಕನ್ನಡ ನಾಡಿಗೆ ವಿಶಿಷ್ಟವಾದ ಸಂಸ್ಕೃತಿಯ ಕೊಡುಗೆಯನ್ನು ಎಲ್ಲ ನಿಟ್ಟಿನಲ್ಲೂ ಮುಕ್ತಹಸ್ತದಿಂದ ಕೊಟ್ಟಿದೆ. ಈ ಸಂಸ್ಕೃತಿಯ ಪ್ರತೀಕವಾಗಿ ಜೀವನದ ನಾನಾ ರಂಗಗಳಲ್ಲಿ ಅಲ್ಲಿಯ ಮಹಾನ್ ವ್ಯಕ್ತಿಗಳು ಶೋಭಿಸಿದ್ದಾರೆ. ಈ ಭಾಗಗಳಲ್ಲಿ ಸೇವಾನಿರತನಾಗಿದ್ದಾಗ ನನಗೆ ಬಹಳ

ಜನರ ಸ್ನೇಹ ಒದಗಿ ಬಂದಿದೆ. ಇವರಲ್ಲಿ ಕೆಲವರು ದುಡಿಮೆಯಲ್ಲಿ ಹಿರಿಯರು. ಕೆಲವರು ವಿದ್ಯಾವಿದರು ; ಮತ್ತೆ ಕೆಲವರು ದಾನಿಗಳು ; ಹಲವರು ಸಂಸ್ಕೃತಿ ಸಂಪನ್ನರು ಮತ್ತು ಭಾಷಾವಿಶಾರದರು. ಇಂಥವರ ಸ್ನೇಹವು ಬಹಳ ಅಮೂಲ್ಯವಾದದ್ದು. ಸ್ನೇಹವು ತಾಪವನ್ನು ಹೋಗಲಾಡಿಸುತ್ತದೆ. "ಮೇದ್ಯತಿ ಎಂದರೆ ಸ್ನಿಹ್ಯತಿ ಇತಿ ಮಿತ್ರಂ" ಎನ್ನುತ್ತಾರೆ. ಸ್ನೇಹದ ಪುಣ್ಯ ದೊಡ್ಡ ಪುಣ್ಯ. ಶ್ರೀ ರಾಜಪುರೋಹಿತರು "ಸೀಮಾ ಪುರುಷರು" ಒಳ್ಳೆಯ ಮಿತ್ರರು. ಅವರ ಬಾಳ್ವೆಯಲ್ಲಿ ಸಂಕುಚಿತ ದಿಗಂತಗಳು ಇಲ್ಲ. ಬರವಣಿಗೆಯಲ್ಲೂ ವಿವಿಧ ಪ್ರಕಾರಗಳಲ್ಲಿ ಅಷ್ಟಿಷ್ಟು ಕೈಯಾಡಿಸಿ ತಮ್ಮ ವೈವಿಧ್ಯತೆಯನ್ನು ಪ್ರದರ್ಶಿಸಿ ಕನ್ನಡಕ್ಕೆ ಮೆರಗು ಕೊಟ್ಟು ಪ್ರಶಸ್ತಿ ಗಳಿಸಿದ್ದಾರೆ. ಪ್ರಾವೀಣ್ಯತೆ ಹೊಂದಿದ್ದಾರೆ. ಅವರ ಜೀವನ ನಿರ್ಮಲ ಅಭಿರುಚಿಗಳ ಸಂಗಮಸ್ಥಾನ. ಚಿಕ್ಕಂದಿನಿಂದ ಕಷ್ಟದಲ್ಲಿ ಬೆಳೆದು, ಓದಿ, ಅಧ್ಯಯನ ಮಾಡಿ, ಅಭಿರುಚಿಗಳನ್ನು ಬೆಳೆಸಿಕೊಂಡು ವಿವಿಧ ಕಾರ್ಯಕ್ಷೇತ್ರಗಳಲ್ಲಿ ಶಕ್ತಿಶಾಲಿ ನೇತಾರರಾದ ವ್ಯಕ್ತಿ. ಈ 'ಜಯತೀರ್ಥ' ಜೀವವಾಹಿನಿ ಪುಣ್ಯ ಕನಕಗಿರಿಯಲ್ಲಿ ಹುಟ್ಟಿ ಹರಿದು ಕರ್ನಾಟಕದಲ್ಲಿ ವಿರಾಜಿಸಿರುವುದು ನಮ್ಮ ಪುಣ್ಯ. ಪ್ರಹ್ಲಾದ ನಾರದ, ಪರಾಶರ, ಪುಂಡರೀಕ, ವ್ಯಾಸ ಮೊದಲಾದ ಭಾಗವತೋತ್ತಮರ ಹೃದಯದಲ್ಲಿ ವಾಸಿಸುವನೂ, ಅನುರಾಗಯುಕ್ತರಾದ ಭಕ್ತರನ್ನು ಕಾಪಾಡುವುದರಲ್ಲಿ ಕಲ್ಪವೃಕ್ಷದಂತೆ ಇರುವವನೂ ಆದ ಶ್ರೀ ಲಕ್ಷ್ಮೀನೃಸಿಂಹನು ಇವರಿಗೆ ಮಂಗಳವನ್ನುಂಟುಮಾಡಲಿ.

"ಇತರ ಭಾಷಿಗರಿಗೆ ತೊಂದರೆಯಾಗಬಾರದೆನ್ನುವಾಗ ಇಲ್ಲಿಯ ಜನರಿಗೂ ಹಾಗೂ ಜನರ ನುಡಿ ಮತ್ತು ರಾಜಭಾಷೆಯಾದ ಕನ್ನಡಕ್ಕೂ ತೊಂದರೆಯಾಗಿರಬಾರದೆಂಬುದನ್ನು ಸಹ ಗಮನದಲ್ಲಿಡಬೇಕು."

# ಷಾಹಿಮುಂಲ್ಲಾ-ಯಾನೆ-ರಾಜಪುರೋಹಿತ

**ನರಸಿಂಹ ಕಠಾವಿ, ಐ.ಎ.ಎಸ್.**

ನನ್ನ ಮತ್ತು ಜಯತೀರ್ಥ ರಾಜಪುರೋಹಿತರ ಪರಿಚಯುವಾದದ್ದು 1941-42ರಲ್ಲಿ. ಅದೇ ಅವರು ಸಹಕುಟುಂಬ ಹೈದ್ರಾಬಾದಿಗೆ ವಿಶೇಷ ಅಭ್ಯಾಸಕ್ಕಾಗಿ ಬಂದಿದ್ದರು. ಹೈಸ್ಕೂಲ್‌ಮುಟ್ಟದ ಅಭ್ಯಾಸಕ್ಕಾಗಿ ಹಾತೊರೆದು ಪಟ್ಟಣಕ್ಕೆ ಬಂದ ಮಿತ್ರರಲ್ಲಿ ವಿವಾಹಿತರಾಗಿದ್ದವರು ಇವರೊಬ್ಬರೇ. ದಿವಂಗತ ಪ್ರೊ. ಪಟ್ವಾರಿ ರಾಮಚಂದ್ರರಾಯರು ತಮ್ಮ ಜ್ಯೇಷ್ಠ ಪುತ್ರಿಗೆ, ಕನಕಗಿರಿಯ ಪ್ರಕಾಂಡ ಪಂಡಿತ ಶೇಷಾಚಾರ್ಯ ರಾಜಪುರೋಹಿತರ ಜೇಷ್ಠ ಪುತ್ರ ಜಯತೀರ್ಥರನ್ನು ವರನನ್ನಾಗಿ ಆರಿಸಿದ್ದು ಉಲ್ಲೇಖಾರ್ಹ.

ಆಗ ಜಯತೀರ್ಥ ಮಿಡ್ಲಸ್ಕೂಲ್‌ವರೆಗೆ ಅಭ್ಯಾಸ ಮಾಡಿದ್ದ. ವೈದಿಕರಾದ ತಂದೆಯ ಆಗ್ರಹದಿಂದ ಪಂಡಿತ ಹುಲಗಿ ಹುಚ್ಚಾಚಾರ್ಯರಲ್ಲಿಯೂ ಆಮೇಲೆ ಶ್ರೀಮದುತ್ತರಾದಿ ಮಠದಲ್ಲಿಯೂ ಸಂಸ್ಕೃತ ವಿದ್ಯೆಗಾಗಿ ಈ ವರಶ್ರೇಷ್ಠ ಸೇರಿದ್ದಾಗಿತ್ತು. ಪ್ರೌಢಶಾಲೆಯಲ್ಲಿ ಆಗ ಶಿಕ್ಷಕರಾಗಿದ್ದ ರಾಮಚಂದ್ರರಾಯರಿಗೆ, ಇನಾಮು ಜಮೀನುಗಳ ಆಸ್ತಿಯಿದ್ದ ಕನಕಗಿರಿಯ ಈ ಕುವರ ಆಕರ್ಷಿಸಿದ್ದು ಸಹಜ. ಆಗಿನ ಕಾಲದಲ್ಲಿ 'ಇಂಗ್ಲೀಷ್ ಎಜುಕೇಶನ್'ಗೆ ಲೌಕಿಕವಿದ್ಯೆ ಹಾಗು ಸಂಸ್ಕೃತ ಅಭ್ಯಾಸಕ್ಕೆ ಸನಾತನವಿದ್ಯೆ – ಅರ್ಥಾತ್ ಮೂಗು ಹಿಡಿದುಕೊಂಡು ಕೂಡುವ ವಿದ್ಯೆಯೆನ್ನುತ್ತಿದ್ದರು. ಸ್ವತಃ ಪದವೀಧರರಾಗಿದ್ದ ರಾಮಚಂದ್ರರಾಯರು 'ಮೂಗುಹಿಡಿದುಕೊಂಡು ಕೂಡುವ' ವೈದಿಕ ಬ್ರಾಹ್ಮಣನನ್ನು ತಮ್ಮ ಹಿರಿಯ ಅಳಿಯುನನ್ನಾಗಿ ಆರಿಸಿದ್ದು ಅವರ ಬಳಗದವರಿಗೆ ಆಡಿಕೊಳ್ಳುವ ಮಾತೇ ಆಗಿತ್ತು.

ವೈದಿಕ ವಿದ್ಯೆ ಸರ್ಕಾರಿ ಕೆಲಸವನ್ನು ಗಳಿಸಿಕೊಡಲಾರದೆಂದು ತಿಳಿದ ರಾಮಚಂದ್ರರಾಯರೇ ಲೌಕಿಕ ವಿದ್ಯಾಭ್ಯಾಸಕ್ಕಾಗಿ ತಮ್ಮ ಅಳಿಯುನನ್ನು ಹೈದ್ರಾಬಾದಿಗೆ ಆಹ್ವಾನಿಸಿದರು. ಆಗಲೇ ಅವರು ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ನೇಮಕಗೊಂಡದ್ದು, ಅಳಿಯನ ಉದಯೋನ್ಮುಖ ಜೀವನಕ್ಕೆ ಸದವಕಾಶವನ್ನು ಕಲ್ಪಿಸಿತ್ತು.

ಜಯತೀರ್ಥ ಯಾವ ಹೈಸ್ಕೂಲನ್ನೂ ಸೇರಲಿಲ್ಲ. ಬನಾರಸ್ ಹಿಂದೂ ವಿಶ್ವ ವಿದ್ಯಾಲಯದ ಪ್ರವೇಶ (ಅಡ್ಮಿಷನ್) ಪರೀಕ್ಷೆಗಾಗಿ ಹೈದ್ರಾಬಾದಿನಲ್ಲಿ ಖಾಸಗಿ ಪಾಠ ಕ್ರಮಗಳ ಏರ್ಪಾಡಿದೆ. ಜಯತೀರ್ಥ ಆ ಬನಾರಸ್ ಮೆಟ್ರಿಕ್ ಪಾಸಾದದ್ದು. ಪ್ರಯತ್ನ ಅಲ್ಲಿಗೇ ನಿಲ್ಲಲಿಲ್ಲ. ಹೀಗೆಯೇ ಖಾಸಗಿಯಾಗಿ ಓದಿ ಇಂದೂರವರೆಗೆ ಹೋಗಿ ಪರೀಕ್ಷೆ ಬರೆದು 'ಅಜಮೀರ ಇಂಟರ್' ಪಾಸುಮಾಡಿದ್ದಾಯಿತು. ಆ ಮೇಲೆ ಜಯತೀರ್ಥ ವಿದ್ಯಾಜೀವನದಲ್ಲಿ ಪ್ರಥಮವಾಗಿ ವಿಶ್ವವಿದ್ಯಾಲಯದ ಕಟ್ಟೆಯನ್ನು ಹತ್ತಿದ್ದು ಪ್ರಶಂಸನೀಯ ಸಾಹಸವೇ ಸರಿ.

ಬಿ. ಎ. ಪದವೀಧರರಾಗಿ ಉದ್ಯೋಗಕ್ಕಾಗಿ ಅಲೆಯಬೇಕಾಗಲಿಲ್ಲ. ಆಗಿನ ಹೈದ್ರಾಬಾದ್ ಪ್ರಭುತ್ವ ಆಡಳಿತ ವ್ಯವಸ್ಥೆಗಾಗಿ ಲೋಕಸೇವಾ ಆಯೋಗದ ಮೂಲಕ ಮೊದಲಸಲ ಅಧಿಕಾರಿಗಳ ಆಯ್ಕೆ ಮಾಡಿತು. ಹೀಗೆ ನೇಮಕಗೊಂಡ ನಲವತ್ತು ಜನ ಅಧಿಕಾರಿಗಳಲ್ಲಿ ಒಂದೇ ಓಣಿಯಲ್ಲಿ ವಾಸಿಸುತ್ತಿದ್ದ ನಾನೂ ಮತ್ತು ಜಯತೀರ್ಥ ಆರಿಸಿಬಂದುದು ಒಂದು ಯೋಗಾಯೋಗವೇ. ಆದರೂ ನಮ್ಮ ಸ್ನೇಹಕ್ಕೆ ಅದೇ ನಾಂದಿಯೇನೂ ಆಗಿರಲಿಲ್ಲ. ನಮ್ಮ ಸಾಂಸ್ಕೃತಿಕ ಚಟುವಟಿಕೆಗಳ ಒಲವು ನಮ್ಮಿಬ್ಬರನ್ನು ರಂಗಭೂಮಿಯ ಮೇಲೆ ಒಂದು ಗೂಡಿಸಿ ಹಲವಾರು ವರ್ಷಗಳ ಮುಂಚಿನಿಂದಲೇ ಅನೇಕ ಕನ್ನಡ ನಾಟಕ ಪ್ರಯೋಗಗಳಿಂದ ಸ್ನೇಹದ ಬೆಸುಗೆಯನ್ನು ಭದ್ರವಾಗಿಸಿತ್ತು. ವಿಶಾಲಕರ್ನಾಟಕ ರಾಜ್ಯವಾದ ನಂತರವೂ ಸರ್ಕಾರಿಸೇವೆಯಲ್ಲಿಯೂ ನಾವು ಸ್ನೇಹಿತರಾಗಿ ಪರಸ್ಪರ ಹಿತಚಿಂತಕರಾಗಿ ಮುಂದುವರಿದಿದ್ದೇವೆ.

ಕೆಲವು ಮುಸಲ್ಮಾನ ಹಾಗೂ ಕನ್ನಡೇತರ ಅಧಿಕಾರಿಗಳು ಉಚ್ಚಾರಕ್ಕೆ ಸರಳವಲ್ಲದ ಜಯತೀರ್ಥ ರಾಜಪುರೋಹಿತರ ಹೆಸರಿನ ಬಗ್ಗೆ ವಿವಾದವನ್ನೇ ಎಬ್ಬಿಸಿದ್ದರು. ಕೆಲವೊಮ್ಮೆ ಅವರನ್ನು 'ಜೈ—ತೀರಥರಾಜ್ ಪುರೋಹಿತ' ಎಂದು ಸಂಬೋಧಿಸಿ ಸರ್ಕಾರಿ ಪರಿಪತ್ರಗಳನ್ನು ಹೊರಡಿಸಿದ್ದಾರೆ. ಈಗಲೂ ತೊದಲುತ್ತ 'ರಾಜತೀರ್ಥ ಪುರೋಹಿತ' ಎಂದು ಕರೆಯುವದೂ ಉಂಟು. ಆಗಿನ ಹೈದ್ರಾಬಾದ್ ರಾಜ್ಯದಲ್ಲಿ 'ಪುರೋಹಿತ್' ಎಂಬುದು ಪ್ರಚಾರದಲ್ಲಿತ್ತು. ಯಾಕೆಂದರೆ ಹೆಸರಾದ ಪುಸ್ತಕ ವ್ಯಾಪಾರಿ 'ಪುರೋಹಿತ್ ಅಂಡ್ ಕೊ' ನಾಲ್ಕಾರು ಶಾಖೆಗಳನ್ನು ಹೈದ್ರಾಬಾದಿನಲ್ಲಿ ತೆರೆದು ಪ್ರಖ್ಯಾತನಾಗಿದ್ದ. ಆದರೆ 'ರಾಜಪುರೋಹಿತ' ಪದ ಕನ್ನಡಿಗರಲ್ಲದವರಿಗೆ ಒಂದು ಸೋಜಿಗ. ರಾಜನಿದ್ದವನು ಪುರೋಹಿತ ಹೇಗಾಗುತ್ತಾನೆಂದು.

ಗುಲಬರ್ಗಾಕ್ಕೆ ಇದ್ದ ಒಬ್ಬ ಖತ್ರಿ ಕುಲದ ಜಿಲ್ಲಾ ಕಲೆಕ್ಟರ್ 'ರಾಜಪುರೋಹಿತ' ಪದದ ಉರ್ದು ಅರ್ಥ ತಿಳಿಸಲು ನನ್ನನ್ನೇ ಕೇಳಿದ್ದ. ಅದಕ್ಕೆ ಕಾರಣವೂ ಇತ್ತು. ಕೆಲವು ಪ್ರಕಟಣೆಗಳಲ್ಲಿ 'ಜೈ-ತೀರಥ ರಾಜ್—ಪುರೋಹಿತ' ಎಂದು ಓದಿ ಉತ್ತರ ಪ್ರದೇಶದ ಮೀರಠನಲ್ಲಿ ತಮ್ಮ ಅಜ್ಜಂದಿರ ಕುಲಪುರೋಹಿತರಾದ 'ಜೈ

ಶನ್ನೋದೇವಿ ರಾಜಪುರೋಹಿತ'ಅವರ ವಂಶಸ್ಥರಾಗಿರಬಹುದೆಂದು ಭಾವಿಸಿದನಂತೆ. ನಾನು 'ರಾಜಪುರೋಹಿತ' ಉರ್ದು (ಆಗಿನ ರಾಜಭಾಷೆ) ಭಾಷಾಂತರ 'ಷಾಹಿ ಮುಲ್ಲಾ' ಎಂದು ಆತನಿಗೆ ತಿಳಿಸಬೇಕಾಯಿತು.

ನಮ್ಮ ಗೆಳೆಯರ ಬಳಗಕ್ಕೆ ಆತ್ಮೀಯನಾದ ಈ 'ಷಾಹಿಮುಲ್ಲಾ' ಸಾಹಿತ್ಯದ ರಾಜಪಥದಲ್ಲಿ ಅವ್ಯಾಹತವಾಗಿ ಮುನ್ನಡೆದಿದ್ದಾನೆ. 'ಪಾರವ್ವನ ಪಂಚಾಯತಿ' ಯಿಂದ ಆರಂಭಿಸಿ ತನ್ನ ಪರಿಸರವನ್ನು ಇಣುಕಿನೋಡಿ ತನ್ನದೇ ಆದ ಕಥನ ಶೈಲಿ ಯನ್ನು 'ಸುಳಗಾಳಿ'ಯಲ್ಲಿ ಹರಿಬಿಟ್ಟು ಹಲವೇ ಉತ್ತಮ ಮಟ್ಟದ ಸಾಹಿತಿಗಳಲ್ಲಿ ಸ್ಥಾನ ದೊರಕಿಸಿಕೊಂಡಿದ್ದಾನೆ. 'ತುಂಗೆಯಂಗಳ' ಈತನ ಕರ್ಮಭೂಮಿ. ಅಲ್ಲಿಯ ಕಾವ್ಯೋದ್ಯಾನದಲ್ಲಿ ಕುಕಿಲ್ದ ಕೋಗಿಲೆಗಳಲ್ಲಿ ಈತನ ಸ್ವರ ನೇರ ಮನವನ್ನೇ ಮುಟ್ಟುತ್ತದೆ.

"ಸೇವಾಪರೀಕ್ಷೆಗಳಲ್ಲಿ ಕನ್ನಡ ಭಾಷೆ ಮತ್ತು ಕನ್ನಡ ಮಾಧ್ಯಮಕ್ಕೆ ಅವಕಾಶವಿಲ್ಲದಿದ್ದರೆ ಶಿಕ್ಷಣ ದಲ್ಲಿ ಕನ್ನಡ ಮಾಧ್ಯಮಕ್ಕೆ ಮತ್ತು ಕನ್ನಡಕ್ಕೆ ಭವಿಷ್ಯವಿಲ್ಲ."

# ಸಾಹಿತ್ಯ ಪ್ರಪಂಚದಲ್ಲಿ ರಾಜಪುರೋಹಿತರ ರಾಜಮಾರ್ಗ

**ಬಿ. ಎ. ಸನದಿ**

ಆಕಾಶವಾಣಿ, ಬೊಂಬಾಯಿ

ಶ್ರೀ ಜಯತೀರ್ಥ ರಾಜಪುರೋಹಿತರದು ಇಂದಿನ ಕನ್ನಡ ಭಾಷೆ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ತುಂಬಾ ಜನಪ್ರಿಯ ಹೆಸರು. ಹೈದ್ರಾಬಾದ್ ಕರ್ನಾಟಕದ ಕೆಲವೇ ಕೆಲವು ಪ್ರಖ್ಯಾತ ಬರೆಹಗಾರರಲ್ಲಿ ರಾಜಪುರೋಹಿತರೂ ಒಬ್ಬರು. ಎತ್ತರವಾದ ದಷ್ಟಪುಷ್ಟವಾದ ನಿಲುವನ್ನು ಹೊಂದಿರುವ ಇವರು ತಮ್ಮ ಸಾಹಿತ್ಯ ಕೃತಿಗಳಲ್ಲೂ ಆ ಎತ್ತರವನ್ನು ಸಾಧಿಸಿದ್ದಾರೆ; ಸಾಹಿತ್ಯಾರೋಗ್ಯ ಕಾಪಾಡಿಕೊಂಡಿದ್ದಾರೆ. ಈ ಸಾಹಿತ್ಯಾರೋಗ್ಯವೆಂದರೇನೆಂದು ವ್ಯಾಖ್ಯೆ ನೀಡುವ ಅಗತ್ಯವಿಲ್ಲ. ಇಂಥವರ ಕೃತಿಗಳ 'ತೂಕ'ವನ್ನರಿತುಕೊಂಡವರು ಈ ಮಾತಿನ ಅರ್ಥವನ್ನು ಸಹಜವಾಗಿಯೇ ಗ್ರಹಿಸಬಲ್ಲರು. ಅನಾರೋಗ್ಯವುಳ್ಳ ಶರೀರಕ್ಕೆ ಹೇಗೋ, ಹಾಗೆಯೇ ಅನಾರೋಗ್ಯದ ಸಾಹಿತ್ಯಕೃತಿಗೂ 'ತೂಕ'ವೆಂಬುದಿರುವುದಿಲ್ಲ.

ಶ್ರೀ ರಾಜಪುರೋಹಿತರನ್ನು ದೀರ್ಘಕಾಲ ಹತ್ತಿರದಿಂದ ಕಾಣುತ್ತ ಬಂದವರಿಗೆಲ್ಲಗೊತ್ತು; ಅವರ ನಿಲುವಿನಂತೆ ಮಾತೂ ತೂಕದ್ದು; ಬರೆವಣಿಗೆಯೂ ತೂಕದ್ದು. ಕ್ಷಯದ ಅಪಾಯದಿಂದ ಪಾರಾದ ಅವರ ಬದುಕು ಕನ್ನಡಿಗರಿಗೆ ಅಕ್ಷಯ ಸಾಹಿತ್ಯ ನೀಡಲು ನೆರವಾಗಿದೆ. ಅವರ ಮೈಮನಗಳಲ್ಲಿ ತುಂಬಿಕೊಂಡ ಉತ್ಸಾಹ ಅವರ ಕಥೆ —ಕಾದಂಬರಿಗಳಲ್ಲೂ ಹರಿದುಕೊಂಡಿದೆ. ಅವರ ಒಡನಾಡಿಗಳಿಗೆ ಅವರು ಬದುಕಿನಲ್ಲಿ ಕಂಡುಂಡ ಹಾಲು—ಜೇನೂ ಗೊತ್ತು; ಸ್ನೇಹದ ಸುಳಿಗಾಳಿಯ ಸುಖಸ್ಪರ್ಶವೂ ಗೊತ್ತು.

1964 ರಿಂದ 1969ರ ವರೆಗಿನ ಐದು ವರ್ಷಗಳಷ್ಟು ಕಾಲ ನಾನು ಕಲಬುರ್ಗಿಯಲ್ಲಿದ್ದೆ. ಅದು ನನ್ನ ಬದುಕಿನಲ್ಲಿ ಅವಿಸ್ಮರಣೀಯ ಅವಧಿ. ಭಣಗುಡುವ ಆ ಬಿಸಿಲಿನ ಕಾಡಿನಲ್ಲಿ ನನಗೆ ದೊರೆತ ಸ್ನೇಹ—ಸಹಕಾರಗಳ ತಂಪು ಅಪೂರ್ವವಾದದ್ದು, ಅಸದಳವಾದದ್ದು. ಕಲಬುರ್ಗಿಯ ಪರಿಸರದಲ್ಲಿ ತಳೆದ ಒಂದೊಂದು ದಿನವೂ ನನ್ನ ಬದುಕಿನ ಸಾಕ್ಷಿಚಿತ್ರದ ಸೀಲಾಗಿ, ಆ ಮೊದಲು ಪಡೆದ ಅನುಭವಗಳಿಗಿಂತ ಮೇಲಾಗಿ

ನನ್ನ ಮನದಂಗಣದಲ್ಲಿ ಉಳಿದುಕೊಂಡಿದೆ. ಈ ರೀಲುಗಳಲ್ಲಿ ರಾಜಪುರೋಹಿತರ ಸ್ನೇಹಕ್ಕೊಂದು ಮಹತ್ವದ ಸ್ಥಾನ. ಈ ರೀಲಿನ ಶೂಟಿಂಗ್ ಆರಂಭವಾದದ್ದು ಕಲಬುರ್ಗಿಯ ಕರ್ನಾಟಕ ಸಂಘದ ಶ್ರೀರಂಗ ಮಂಟಪದಲ್ಲಿ...

ಒಂದು ದಿನ ಶ್ರೀ ನಾಯಕ ವೆಂಕಟರಾಯರು ಕನ್ನಡಕ್ಕೆ ಅನುವಾದಿಸಿದ ಗೀತಾ ಕಾವ್ಯದ ಉದ್ಘಾಟನೆ ಆಗ ಕಲಬುರ್ಗಿಯ ವಿಭಾಗಾಧಿಕಾರಿಗಳೂ ಸಾಹಿತ್ಯಾಭಿಮಾನಿಗಳೂ ಆಗಿದ್ದ ಶ್ರೀ ಜಿ.ವಿ.ಕೆ. ರಾವ್ ಅವರ ಹಸ್ತದಿಂದ ನಡೆಯುವದಿತ್ತು. ನಾವೆಲ್ಲ ಅತಿಥಿಗಳ ದಾರಿ ಕಾಯುತ್ತ ಕುಳಿತಿದ್ದೆವು. ಶ್ರೀ ನಾಯಕರು ನನ್ನನ್ನು ಕರೆದು "ನೋಡ್ರಿ, ಇವರು ಕಲಬುರ್ಗಿಗೆ ಬಂದ ಹೊಸ ಅಸಿಸ್ಟೆಂಟ್ ಕವಿಷನರರು. ನಿಮ್ಮ ಬೆಳಗಾವಿ ನಗರ ಸಭೆಯ ಕಮಿಷನರರಾಗಿದ್ದರು"— ಎಂದು ಪರಿಚಯದ ಪೀಠಿಕೆ ಹಾಕಿದರು. ನಾನು ಆಗಲೇ ಬೆಳಗಾವಿ ಬಿಟ್ಟು ಬಹಳ ಕಾಲವಾಗಿತ್ತು. ಅಲ್ಲಿಯ ನಗರ ಸಭೆಯ ವಿದ್ಯಮಾನಗಳೊಂದೂ ನನ್ನ ನೆನಪಿನಲ್ಲಿರಲಿಲ್ಲ. ಅಂತೆಯೇ ಬೆಳಗಾವಿ ನಗರ ಸಭೆಯ ಕಮಿಷನರ್ ಎಂದಮಾತ್ರಕ್ಕೆ ಥಟ್ಟನೇ ಅವರ ಹೆಸರು ಹೊಳೆಯುವದಾಗಲಿ ಅವರ ಬಗೆಗೊಂದು ಗೌರವಭಾವ ಮೂಡಿಕೊಳ್ಳುವುದಾಗಲಿ ಸಹಜವಾಗಿರಲಿಲ್ಲ. ನಾಯಕರ ಸಲಿಗೆಗೆ ಸಲಿಗೆ ಬೆರೆಸಿ ನಾನು ಕೇಳಿದೆ "ಇದೇನ್ರಿ, ಬರೀ ಸರ್ಕಾರೀ ಪರಿಚಯ ಮಾಡಿಸಿ ಬಿಟ್ಟಿರಲ್ಲ; ಇವರ ಹೆಸರನ್ನೇ ಹೇಳಲಿಲ್ಲ!"

"ಓ, ಹೌದು ಇವರು ಜಯತೀರ್ಥ ರಾಜಪುರೋಹಿತರು. ಇವರ ಕಥೆಗಳನ್ನು ನೀವು ಓದಿರಬಹುದು."

"ಪತ್ರಿಕೆಗಳಲ್ಲಿ ಓದಿದ್ದೇನೆ ಇನ್ನೂ ಪುಸ್ತಕರೂಪದಲ್ಲಿ ಬಂದಿವೆಯೋ ಇಲ್ಲವೋ ನನಗೆ ಗೊತ್ತಿಲ್ಲ."

ಆಗ ರಾಜಪುರೋಹಿತರೆಂದರು : "ಇನ್ನೂ ಪುಸ್ತಕರೂಪದಲ್ಲಿ ಬಂದಿಲ್ಲ, ನಿಧಾನವಾಗಿ ಬರಲಿ, ಏನಷ್ಟು ಅವಸರ?"

ಹೀಗೆ ಪರಿಚಯದ ನಾಂದಿಯಾಗಿ, ಆ ಸಭೆಯ ನಂತರ ನಾನೂ ನನ್ನ ಮಿತ್ರ ಗ್ರಾಮಪುರೋಹಿತರೂ ಕೂಡಿ ಅವರ ಮನೆಗೇ ಹೋದದ್ದು, ಹರಟೆ ಹೊಡೆದದ್ದು, ತಿಂಡಿ ತಿಂದು ಹೊರಬಿದ್ದದ್ದು, ಈ 'ಬೈಠಕ್' ಮುಂದೊಂದು ನಿಯಮಿತ ವಿಧಾನವಾಗಿ ಸ್ನೇಹ ಗಾಢವಾದದ್ದು, ಗೆಳೆಯರ ಬಳಗ ಬೆಳೆದದ್ದು, ಮಿತ್ರರ ಒಲುಮೆ—ಜುಲುಮೆಗಳಿಂದಾಗಿ ಜಯತೀರ್ಥರ ಲೇಖನಿ ಚೇತರಿಸಿಕೊಂಡದ್ದು, ಬರವಣಿಯ ಗತಿಯನ್ನು ತೀವ್ರಗೊಳಿಸಿದ್ದು, ಬರುಬರುತ್ತ ನಮ್ಮ ಬೈಠಕ್‌ಗಳು ಸಾಹಿತ್ಯದ ಚರ್ಚಾಕೂಟಗಳಾಗಿ ಮಾರ್ಪಟ್ಟದ್ದೂ—ಹೀಗೆ ಒಂದೊಂದು ಅನುಭವವೂ ನನ್ನ ನೆನಪಿನಲ್ಲುಳಿದುಕೊಂಡಿದೆ. ಇಲ್ಲಿ ಹೇಳಬೇಕಾದ ಮುಖ್ಯ ಅಂಶವೆಂದರೆ ದೈಹಿಕ ಬಳಲಿಕೆಯಿಂದಾಗಿ ಡಾಕ್ಟರರ ಸಲಹೆಯಂತೆ 1,2 ವರ್ಷಗಳ ವಿರಾಮವನ್ನನುಭವಿಸಿ, ನಿಧಾನಗತಿಯೊಡನೆ 'ರಾಜಿ' ಮಾಡಿಕೊಂಡಿದ್ದ ರಾಜಪುರೋಹಿತರ ಮೈ ಮನಗಳು

ಕಲಬುರ್ಗಿಯ ಮಿತ್ರವೃಂದದ ಪ್ರಭಾವಳಿಯಲ್ಲಿ ಹೊಸ ಚೈತನ್ಯ ಪಡೆದದ್ದು; ಆ ಚೈತನ್ಯ ಅವರ ನಿತ್ಯ ಬರವಣಿಗೆಯಲ್ಲಿ ಮೈದಳೆದದ್ದು. ಕಲಬುರ್ಗಿಯ ನೃಪತುಂಗ ಪ್ರಕಾಶನದವರ ಒಲುಮೆ—ಜುಲುಮೆಯಿಂದಾಗಿ ಅವರ ಪ್ರಥಮ ಕಥಾ ಸಂಕಲನ 'ಪಾರವ್ವನ ಪಂಚಾಯುತಿ' ಬೆಳಕಿಗೆ ಬಂದದ್ದು! ಈವರೆಗೆ ವಿರಾಮಧಾಮವನ್ನಾಶ್ರಯಿಸಿದ್ದ ರಾಜಪುರೋಹಿತರ ಸಾಹಿತ್ಯರಥಕ್ಕೆ ಪಂಚಾರತಿ ಬೆಳಗಿದಂತೆ. 1967ರ ಜನವರಿಯಲ್ಲಿ ಬೆಳಕಿಗೆ ಬಂದ 'ಪಾರವ್ವನ ಪಂಚಾಯುತಿ' ಆ ವರ್ಷ ಮುಗಿಯುವ ಮುನ್ನವೇ ದ್ವಿತೀಯ ಆವೃತ್ತಿ ಕಂಡದ್ದು ಲೇಖಕರಿಗೂ ಪ್ರಕಾಶಕರಿಗೂ ಹಿಗ್ಗಿನ ಸಂಗತಿಯಾಗಿತ್ತು. ಈ ಕಥಾ ಸಂಕಲನದ ಹತ್ತು ಕಥೆಗಳಲ್ಲಿ ರಾಜಪುರೋಹಿತರ ವೈವಿಧ್ಯಪೂರ್ಣ ಅನುಭವ ಯಥಾವತ್ತಾಗಿ ಚಿತ್ರಣಗೊಂಡಿದೆ. ಈ ಸಂಕಲನಕ್ಕೆ ಮುನ್ನುಡಿ ಬರೆದ ಪ್ರಖ್ಯಾತ ಕಥೆಗಾರ, ಕಾದಂಬರಿಕಾರ ಶ್ರೀನಿರಂಜನರು ನುಡಿದಂತೆ ಸಮಕಾಲೀನ ವಿಷಯಗಳು ರಾಜಪುರೋಹಿತರಿಗೆ ಬಲಿಯಾಗಿವೆ. ಆ ವಿಷಯಗಳಲ್ಲೂ ಆಳವಾದುದನ್ನೂ ನಾಲ್ಕು ದಿನ ಬಾಳುವಂಥದನ್ನೂ ಸೂಚ್ಯವಾಗಿ ಅವರು ಎತ್ತಿ ಆಡಿದ್ದಾರೆ. ರಜಾಕಾರರ ಹಾವಳಿಯ ಹಿನ್ನೆಲೆಯಲ್ಲಿ ಬರೆದುದಿರಲಿ, ಭಾರತದ ವಿಭಜನೆಯ ಅಥವಾ ಭಾರತ ಪಾಕಿಸ್ತಾನಗಳ ಘರ್ಷಣೆಯ ಮರಳನ್ನು ಅವರು ಹಿಂಡಿರಲಿ ಅಥವಾ ನಮ್ಮದೇ ಸಮಸ್ಯೆಗಳು ವಸ್ತು ಒದಗಿಸಿರಲಿ—ಎಲ್ಲದರಲ್ಲೂ ಅನಿವಾರ್ಯವಾದ ಪರಿಮಿತಿಯನ್ನು ದಾಟಿ ಮುಚ್ಚಿದ ಕವಾಟಗಳನ್ನು ತೆರೆದು ಆಳದಿಂದೆಲ್ಲೋ ಮಾನವೀಯತೆಯನ್ನು ಚಿಮ್ಮಿಸುವ ಮಾಂತ್ರಿಕ ರಾಜಪುರೋಹಿತರು ತಮ್ಮ ಮುಂದಿನ ಕೃತಿಗಳಲ್ಲೂ ಈ ಕೌಶಲ್ಯಪೂರ್ಣ ಮಾಂತ್ರಿಕತೆ ಮರೆಯದಿರುವುದನ್ನು ರಸಿಕರು ಗಮನಿಸಿರಲು ಸಾಕು.

'ಪಾರವ್ವನ ಪಂಚಾಯಿತಿ'ಯ ಹಿಂದಿನಿಂದಲೇ ಅವರ ಪ್ರಥಮ ಕಾದಂಬರಿ 'ಹಾಲುಜೇನು' ಪ್ರಕಟವಾಯಿತು. ಈ ಕಾದಂಬರಿಯ ಒಂದೊಂದೇ ಪ್ರಕರಣ ಬರೆದಾದ ಕೂಡಲೇ ನಾಲ್ಕಾರು ಮಿತ್ರರ'ಬೈಠಕ್' ಅವರ ಮನೆಯಲ್ಲಿ ಸೇರುವುದು; ಶ್ರೀಮತಿ ರಾಜಪುರೋಹಿತ ಮತ್ತು ಮಕ್ಕಳ ಆದರಾತಿಥ್ಯದೊಡನೆ ಇವರ ಸಾಹಿತ್ಯದ ಚರ್ಚೆಯಾಗುವದು. ಒಂದೊಂದು ದಿನ ಜಯತೀರ್ಥರ ಸಾಹಿತ್ಯಕ್ಕಿಂತಲೂ ಮನೆಯವರ ತಿಂಡಿ-ತೀರ್ಥಗಳದ್ದೇ ಕೈಮೇಲಾಗುವದು-ಹೀಗೆಲ್ಲ ನಡೆದರೂ ಅವರ ಮೊದಲ ಕಾದಂಬರಿ 'ಹಾಲು ಜೇನು' ಬರೆದು ಮುಗಿಸಿದ್ದು ಒಂದೇ ಒಂದು ತಿಂಗಳಲ್ಲಿ! "ನೀನು ಬರೀಲಿಕ್ಕಾದರೂ ಶುರು ಮಾಡು, ನಾನೇ ನಾನಾಗಿ ನಿನ್ನ ನೆನಹುಗಳಲ್ಲಿ ಹಸಿಗೊಂಡು, ನಿನ್ನ ಲೇಖನಿಯಲ್ಲಿ ಮಸಿಗೊಂಡು ಕಾಗದದ ಮೇಲೆ ಅವತರಿಸ್ತೀನಿ" ಎಂಬಂಥ ಅಪಾರ ಅನುಭವದ ಗಣಿ ಅವರದು. ಹೈದ್ರಾಬಾದದ ಇತಿಹಾಸ, ಅಲ್ಲಿಯ ಜನರ ನಡೆ-ನುಡಿ, ಆಚಾರ-ವಿಚಾರಗಳು, ಆಧುನಿಕ ಜೀವನದೊಡನೆ ಕಂಡುಬಂದ ಹೊಸ ಒಲವು-ನಿಲುವುಗಳೆಲ್ಲ ರಾಜಪುರೋಹಿತರ ಮನಸ್ಸಿನಲ್ಲಿ

ಹೆಪ್ಪುಗೊಂಡು ಇವರ ಲೇಖನಿಯ ಕಡೆಗೋಲಿಗಾಗಿ ಕಾಯ್ದಿದ್ದುವೇನೊ! ಅಂತೆಯೇ 1967ರಲ್ಲಿ 'ಗೇರ್' ಬದಲಾಯಿಸಿಕೊಂಡ ಈ ಕನಕಗಿರಿಯ ಕಾರು ಬಲು ಭರದಿಂದ ಧಾವಿಸಿತು.ಆಘಾತ-ಅಪಘಾತಗಳ ಭಯವಿಲ್ಲದ ಓಟ ಅವರದು. 1967ರ ನಂತರ ಅವರು ಕಾಲಿಟ್ಟ ಕಡೆಗೆಲ್ಲ ರಾಜಮಾರ್ಗವೇ ತೆರೆದಂತೆ ನಿರಾತಂಕವಾಗಿ ಅವರ ಸಾಹಿತ್ಯ ಪ್ರಯಾಣ ನಡೆಯಿತು. ಕಲಬುರ್ಗಿಯಿಂದ ರಾಯಚೂರು, ಬಳ್ಳಾರಿ, ಮೈಸೂರು ಚಿತ್ರದುರ್ಗ, ಬೆಂಗಳೂರು—ಯಾವ ಕಡೆ ಹೋದರೂ ಅವರ ಸಾಹಿತ್ಯಸೇವೆ ನಿಲ್ಲಲಿಲ್ಲ ; ಆಡಳಿತದ ಕಾರ್ಯಭಾರದಲ್ಲಿ ಬರವಣಿಗೆ ಸಾಕೆಂದು ಅವರ ಕೈಸೋಲಲಿಲ್ಲ.

ಅವರು ಮತ್ತು ನಾನು ಕಲಬುರ್ಗಿಯಲ್ಲಿದ್ದಾಗಲೇ ಶ್ರೀ ಜಿ. ವಿ. ಕೆ. ರಾಯರು ನಮಗೊಂದು ಕೆಲಸ ಒಪ್ಪಿಸಿಕೊಟ್ಟಿದ್ದರು. ಆ ಹೊತ್ತಿಗೆಂದರೆ ನಮ್ಮ ನೆರವಿಗೆ ಇನ್ನೊಬ್ಬ ಮಿತ್ರ—ರಂಗನಾಥ್ ಪುರಂದರೆಯವರೂ ಸೇರಿಕೊಂಡಿದ್ದರು. ತುಂಗಭದ್ರಾ ಯೋಜನಾ ಪ್ರದೇಶದ ಇತಿಹಾಸ, ಸಂಸ್ಕೃತಿ, ಸಾಹಿತ್ಯ, ಕಾವ್ಯಕಲೆಗಳನ್ನು ಎತ್ತಿ ತೋರಿಸುವ ಗದ್ಯ-ಪದ್ಯಗಳ ಸಂಕಲನವೊಂದನ್ನು ಸಂಪಾದಿಸಿ ಪ್ರಕಟಿಸುವ ಹೊಣೆ ನಮ್ಮ ಪಾಲಿಗೆ ಬಂದಿತ್ತು. ಅನುಕೂಲತೆಗಾಗಿ ರಾಜಪುರೋಹಿತರು ಗದ್ಯ ವಿಭಾಗವನ್ನೂ, ನಾನು ಪದ್ಯವಿಭಾಗವನ್ನೂ ಸಂಪಾದಿಸಬೇಕೆಂದೂ ನಿರ್ಣಯವಾಗಿ, ಕಾರ್ಯಾರಂಭವಾಯಿತು. ಅಷ್ಟರಲ್ಲಿ ರಾಜಪುರೋಹಿತರಿಗೆ ರಾಯಚೂರು ನಗರ ಸಭೆಯ ಕಮಿಷನರರೆಂದು ವರ್ಗವಾಯಿತು. ಆದರೂ ಒಪ್ಪಿಕೊಂಡ ಹೊಣೆಯಿಂದ ಅವರು ತಪ್ಪಿಸಿಕೊಳ್ಳಲಿಲ್ಲ. ಅಷ್ಟೆ ಅಲ್ಲ, ಆ ಸಂಕಲನದ ಚರ್ಚೆಗಾಗಿ 1,2 ತಿಂಗಳ ನಂತರ ರಾಯಚೂರಿಗೆ ನಾನು ಹೋದಾಗ ಹೊಸದೊಂದು ಆಶ್ಚರ್ಯವನ್ನೇ ನೀಡುವ ಪ್ರಶ್ನೆ ಎಸೆದರು : "ಅಲ್ರೀ, 'ತುಂಗಾತರಂಗ' ಗ್ರಂಥದಲ್ಲಿ ಎರಡು ವಿಭಾಗಗಳನ್ನು ಮಾಡುವ ಬದಲು ಮೂರು ಮಾಡಿದರೆ ಹೇಗೆ ?"

"ಮೂರನೆಯ ಭಾಗ ಯಾವುದು ?"

"ಇಗೋ ನೋಡಿ...ಇದು ನಿಮಗೆ ಒಪ್ಪಿಗೆಯಾದರೆ..."

ನನ್ನ ಕೈಯಲ್ಲಿ ಹಾಳೆಗಳನ್ನಿಟ್ಟರು. ಮೊದಲ ಪುಟದ ಮೇಲಿನ ತಲೆಬರಹ : 'ತುಂಗೆಯಂಗಳದಲ್ಲಿ' ಸುಮಾರು ಐವತ್ತು ಪುಟಗಳ ಬರವಣಿಗೆ—ಪದ್ಯರೂಪದಲ್ಲಿ ! ನನಗೆ ಆಶ್ಚರ್ಯದೊಡನೆ, ಆನಂದ.

'ತುಂಗಾತರಂಗಂ ಪ್ರಸನ್ನಾಂತರಂಗಂ
ತಿಂಗಳಿನ ಕಾಂತಿಯಲಿ ಅರುಣನೇಕಾಂತದಲಿ
ಚೇತನದ ಚಿಲಿಪಿಲಿ ಸುಷುಪ್ತಿಯ ಹೊದರಿನಲಿ
ಪವಡಿಸಿದ ಶಾಂತಿಯಲಿ ತಾಯಿಯನು ನೋಡಿದೆಯಾ'

ಎಂದಾರಂಭವಾಗುವ ಈ ಗೀತರೂಪಕ ನನ್ನನ್ನು ಮರುಳುಗೊಳಿಸಿತು. ಅವರು ಆ ರಾತ್ರಿ ಇಡಿಯಾಗಿ ಗೀತರೂಪಕ ಓದಿ ತೋರಿಸಿದರು. ಈ ಗೀತರೂಪಕದೊಡನೆ

ಕೆಲದಿನಗಳಲ್ಲಿಯೇ 'ತುಂಗಾತರಂಗ' ಬೆಳಕಿಗೆ ಬಂತು. ಸರ್ಕಾರೀ ಪ್ರೇರಣೆಯಿಂದ ರೂಪಗೊಂಡುದಾದರೂ ಸಾಹಿತ್ಯ - ವಿಮರ್ಶೆಗಳ ವಲಯಗಳಲ್ಲಿ ಅದು ಮೆಚ್ಚುಗೆ ಪಡೆಯಿತು.

ರಾಜಪುರೋಹಿತರು ಮನಸ್ಸು ಮಾಡಿದ್ದರೆ ಒಳ್ಳೆಯ ಕಾವ್ಯವನ್ನೂ ಬರೆಯಬಹುದಿತ್ತೆಂಬುದಕ್ಕೆ ನಿದರ್ಶನ ಅವರ 'ತುಂಗೆಯುಂಗಳ'ದಲ್ಲಿ. ಆದರೆ ಅವರು ಕಾವ್ಯದ ದಾರಿ ತಮ್ಮದಲ್ಲವೆಂದುಕೊಂಡು ಕಥೆ-ಕಾದಂಬರಿಗಳಲ್ಲಿ ತಮ್ಮ ವಿಶಾಲ ಅನುಭವದ ಪ್ರತಿಬಿಂಬಗಳನ್ನು ಸೃಷ್ಟಿಸಿದರು. 'ಸುಧಾ' ಪತ್ರಿಕೆಯ ಮತ್ತು ರಾಜ್ಯ ಸಾಹಿತ್ಯ ಅಕಾಡೆಮಿಯ ಪುರಸ್ಕಾರಗಳಿಗೆ ಪಾತ್ರರಾದರು. ಐತಿಹಾಸಿಕ ವಸ್ತುವಿನ ಆಯ್ಕೆ, ಪ್ರಾದೇಶಿಕ ವಾತಾವರಣ ಮತ್ತು ಪಾತ್ರಸೃಷ್ಟಿ, ಸಮರ್ಥ ಭಾಷೆಯ ಬಳಕೆಗಳಿಂದಾಗಿ ರಾಜಪುರೋಹಿತರ ಕಥೆ-ಕಾದಂಬರಿಗಳು ಓದುಗರ ಮನಸೆಳೆದುಕೊಳ್ಳುತ್ತವೆ. ಹಾಲುಜೇನು, ಸುಳಿಗಾಳಿ, ಜೊಹರಾಗಳಂಥ ಒಂದೊಂದು ಕೃತಿಯನ್ನು ಓದಿ ಮುಗಿಸಿದಾಗ ಮೊದಲೆಂದೂ ಕಾಣದ ಲೋಕದಲ್ಲಿ ಹೊಕ್ಕು ಹೊರ ಬಂದ ಅನುಭವ ವಾಚಕನಿಗಾಗುತ್ತದೆ.

ಜಯತೀರ್ಥ ರಾಜಪುರೋಹಿತರು ಕಥೆ, ಕಾದಂಬರಿ, ಗೀತರೂಪಕ, ನಾಟಕ, ಜೀವನ ಚರಿತ್ರೆ ಹೀಗೆ ಹಲವು ಸಾಹಿತ್ಯ ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ. ಕೆಲವು ಗ್ರಂಥಗಳ ಸಂಪಾದನೆ ಮಾಡಿದ್ದಾರೆ. ಇತ್ತೀಚೆಗೆ ಕರ್ನಾಟಕದಲ್ಲಿ ಕನ್ನಡ ಭಾಷಾಭಿವೃದ್ಧಿ ಮತ್ತು ಪ್ರಸಾರಕಾವ್ಯದ ಪೌರೋಹಿತ್ಯ ವಹಿಸಿಕೊಂಡು ಇವರು ನಡೆಸಿದ ಆಂದೋಲನ ಕರ್ನಾಟಕದ ಒಳಹೊರಗೂ ಪ್ರಭಾವ ಬೀರಿದೆಯೆಂಬುದೂ ಗಮನಾರ್ಹ. ಇವರ ಜೀವನ ಚರಿತ್ರೆಯಲ್ಲಿ ಸ್ವಂತ ಸಾಹಿತ್ಯಕೃಷಿಯದೊಂದು ಅಧ್ಯಾಯವಾದರೆ ಕನ್ನಡ ಭಾಷಾಭಿವೃದ್ಧಿಯದೇ ಮತ್ತೊಂದು ಅಧ್ಯಾಯವಾದೀತು! ಕನ್ನಡದಲ್ಲಿ ನ್ಯಾಯ ನಿರ್ಣಯಗಳನ್ನು ಬರೆದು, ಪ್ರಕಟಿಸಿ, ಸಮರ್ಥರೆಂದು ಪುರಸ್ಕಾರ ಪಡೆದ ಜಯತೀರ್ಥರು ಕನ್ನಡ ರಾಜ್ಯಭಾಷಾ ಪೌರೋಹಿತ್ಯ ವಹಿಸಲು ಸಿದ್ಧ ಮಾಡಿ ತೋರಿಸಿದ್ದಾರೆ. ಸಾಹಿತ್ಯದ ಆಳವಾದ ಅಧ್ಯಯನ ಮತ್ತು ಆಡಳಿತದ ವಿಶಾಲ ಅನುಭವ_ಇವೆರಡೂ ಸೇರಿ ಜಯತೀರ್ಥರು ಸಹಜ ಜಯಶಾಲಿಯಾಗುವಲ್ಲಿ ಸಹಾಯಕಾರಿಯಾಗಿವೆ. 17 - 18ನೆಯ ಶತಮಾನದ ಇಂಗ್ಲಿಷ್ ಕಾದಂಬರಿಕಾರ ಸರ್ ವಾಲ್ಟರ್ ಸ್ಕಾಟ್ ಕುರಿತು ಸಾಹಿತ್ಯ ಚರಿತ್ರಕಾರರೊಬ್ಬರು ಹೇಳಿದ ಮಾತನ್ನೇ ನಮ್ಮ ರಾಜಪುರೋಹಿತರಿಗೂ ಅನ್ವಯಿಸಬಹುದು : His mind was so crowded with stories, characters and incidents, that invention came without apparent effort...His performance is the more remarkable when it is remembered that he combined authorship with a number of legal and official duties...

ಹೀಗೆ ಸಾಹಿತ್ಯರಚನೆ ಮತ್ತು ಸರ್ಕಾರದ ಸೇವೆಗಳೆರಡನ್ನೂ ಪರಿಣಾಮಕಾರಿಯಾಗಿ ಸಮನ್ವಯಗೊಳಿಸಿಕೊಂಡು ಹೆಜ್ಜೆಯಿಟ್ಟ ಕಡೆಗೆಲ್ಲ ವಿಜಯಧ್ವಜವೇರಿಸಿ ಸಂತೋಷಪಡುವ, ತಮ್ಮ ಸಂತೋಷದಲ್ಲಿ ಸಹೋದ್ಯೋಗಿಗಳೂ ಸನ್ಮಿತ್ರರೂ ಪಾಲ್ಗೊಳ್ಳುವಂತೆ ನೋಡಿಕೊಳ್ಳುವ ಜೀವನದ ಹದ ಇವರಿಗೆ ಸಾಧಿಸಿದೆ. ಅವರು ಯಾವ ಜಾಗದಲ್ಲಿಯೇ ಇರಲಿ, ಅವರ ಹೃದಯದಲ್ಲಿ ಸ್ನೇಹಿತರಿಗೆ, ಸಾಹಿತಿಗಳಿಗೆ, ಕನ್ನಡಕ್ಕಾಗಿ ದುಡಿಯುವವರಿಗೆ ಸಾಕಷ್ಟು ಜಾಗವಿದ್ದೇ ಇರುತ್ತದೆ. ಸಾಹಿತ್ಯ ಸೃಷ್ಟಿಯಂತೆಯೇ ಇವರ ಜೀವನದೃಷ್ಟಿಯಲ್ಲಿಯೂ ಸಮನ್ವಯ ಸಿದ್ಧಾಂತದ್ದೇ ಮೇಲುಗೈ. ಇವರ ಮಿತ್ರವೃಂದದಲ್ಲಂತೂ, 'ಇವನಾರವ, ಇವನಾರವ, ಇವನಾರವ' ಎಂದು ಕೇಳುವುದು-ಹೇಳುವುದು ದೂರದ ಸಂಗತಿ. ಎಲ್ಲರಿಗೂ ಬೇಕಾಗಿ ಬೆಳೆದು ಬಂದ ರಾಜಪುರೋಹಿತರ ಬಗೆಗೆ 1967ರಲ್ಲಿ ಶ್ರೀ ಸಿದ್ಧಯ್ಯ ಪುರಾಣಿಕರಾಡಿದ ಮಾತೊಂದನ್ನಿಲ್ಲಿ ಸ್ಮರಿಸಿಕೊಳ್ಳಬಹುದು :

"ನನ್ನ ಬಾಲ್ಯ ಸ್ನೇಹಿತರಾದ ಶ್ರೀ ಜಯತೀರ್ಥ ರಾಜಪುರೋಹಿತರು ಕವಿಗಳಾಗಿ, ಕಥೆಗಾರರಾಗಿ, ಕಾದಂಬರಿಕಾರರಾಗಿ ಕನ್ನಡ ಸಾಹಿತ್ಯ ಕ್ಷಿತಿಜದ ಮೇಲೆ ಸ್ವಾಂತಿಕೆಯ ಶೋಭೆಯನ್ನೊಳಗೊಂಡ ನವನಕ್ಷತ್ರವಾಗಿ ಮೂಡಿರುವುದು ನನಗೆ ಹೆಮ್ಮೆ, ಹಿಗ್ಗು...ಅವರಿಗೆ ಕನ್ನಡನುಡಿಯ ಬೆಡಗು ಕರಗತವಾಗಿದೆ, ಸುಂದರ ಶೈಲಿ ಸಾಧಿಸಿದೆ ; ಸಾಹಿತ್ಯ ಸೃಷ್ಟಿಯ ಸೂಕ್ಷ್ಮಾಂಶಗಳೂ ವಿದಿತವಾಗಿವೆ. ಶ್ರೀ ರಾಜಪುರೋಹಿತರ ವಾಙ್ಮಯ ತಪಸ್ಸು ಫಲಿಸಲಿ !"

"ಕನ್ನಡ ಓದಿದ್ದಕ್ಕಾಗಿಯೇ ಕನ್ನಡ ಹುಡುಗರು ನಿರುದ್ಯೋಗಿಗಳಾಗುವ ಸಂಖ್ಯೆ ಬೆಳೆದು ನಾಡಿನ ಸಮಸ್ಯೆಯಾಗಬಹುದು."

# ಜಯತೀರ್ಥ ರಾಜಪುರೋಹಿತರು
# ಬಹುಮುಖ ಪ್ರತಿಭಾವಂತ

**ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್**

ಶ್ರೀಮಾನ್ ಜಯತೀರ್ಥ ರಾಜಪುರೋಹಿತರು ಕನ್ನಡ ಸಾಹಿತ್ಯ ಲೋಕದಲ್ಲಿ ಪ್ರಖರ ಕಾಂತಿಯಿಂದ ಉಜ್ವಲಿಸುವ, ಸ್ಪರ್ಧೆಯಲ್ಲಿ ಗೆದ್ದ ಜನಪ್ರಿಯ ಕಾದಂಬರಿಯ ಜಯ ಜಯಕಾರದೊಡನೆ ಪ್ರವೇಶಿಸಿದರು. ಅವರ ಕಾದಂಬರಿ ಕನ್ನಡ ವಾಚಕರಲ್ಲಿ ಎಂಥ ಭರವಸೆ ಆಸೆಗಳನ್ನು ಹುಟ್ಟಿಸಿತೆಂಬುದು ನನಗೂ ಈಗಲೂ ಚೆನ್ನಾಗಿ ನೆನಪಿದೆ. 'ಸುಳಿಗಾಳಿ'ಯಂಥ ಮತ್ತೊಂದು ಕಾದಂಬರಿಯನ್ನು ನಾವು ಇನ್ನೂ ಆಸೆಯಿಂದ ನಿರೀಕ್ಷಿಸುತ್ತಿದ್ದೇವೆ. ಈಚೆಗೆ ರಾಜಪುರೋಹಿತರು ಇನ್ನೂ ಅನೇಕ ಕೃತಿಗಳು, ಕಥಾ ಸಂಗ್ರಹಗಳು ಇವುಗಳನ್ನೆಲ್ಲ ಪ್ರಕಟಿಸಿದ್ದಾರೆ. ಅವರ ಎಲ್ಲ ಕೃತಿಗಳಲ್ಲಿಯೂ ಉತ್ತಮ ಶೈಲಿ, ಮನೋಜ್ಞವಾದ ಕಥಾ ನಿರೂಪಣ ಸಾಮರ್ಥ್ಯ, ಮನುಷ್ಯ ಸ್ವಭಾವದ ಸೂಕ್ಷ್ಮ ತೀಕ್ಷ್ಣ ಅಧ್ಯಯನ ಉನ್ನತ ಮೌಲ್ಯಗಳ ಪ್ರತಿಪಾದನೆ ಇವು ವ್ಯಕ್ತವಾಗಿವೆ.

ಶ್ರೀಮಾನ್ ರಾಜಪುರೋಹಿತರು, ಸುಸಂಸ್ಕೃತ ವ್ಯಕ್ತಿ. ಅವರ ನಡೆ ನುಡಿ ವೇಷ ಸ್ವಭಾವ ಎಲ್ಲವೂ ನಯವಾದ ಸಂಸ್ಕೃತಿ ಸೌರಭದಿಂದ ಕೂಡಿವೆ. ಅವರ ತಂದೆ ಯವರಿಂದಲೇ ಅವರು ಸಂಸ್ಕೃತ ಭಂಡಾರವನ್ನೇ ಪಡೆದರು. ಇನ್ನು ಇಂಗ್ಲೀಷ್ ಸಾಹಿತ್ಯವನ್ನು ಶಿಕ್ಷಣದ ಅಂಗವಾಗಿ ಪಡೆದುದಲ್ಲದೆ, ಸಾಹಿತ್ಯಾಭಿರುಚಿಯಿಂದಲೇ ಆ ಸಮುದ್ರವನ್ನು ಈಜಿದ್ದಾರೆ. ಇನ್ನು ಕನ್ನಡವಂತೂ ಸರಿಯೇ ಸರಿ. ತಾಯ್ನುಡಿ ; ದೇಹದ ರಕ್ತದ ರಕ್ತ ; ಉಸಿರಿನ ಉಸಿರು ; ಕಣ್ಣಿನ ಬೆಳಕು. ರಾಜಕೀಯ ಕಾರಣ ಗಳಿಂದಾಗಿ ಉರ್ದು ಮತ್ತು ಉರ್ದು ಸಾಹಿತ್ಯವನ್ನು ಅಭ್ಯಸಿಸಿದ್ದಾರೆ. ಹೀಗೆ ಇವರು ಪಾಶ್ಚಾತ್ಯ ಮತ್ತು ಪೌರ್ವಾತ್ಯ ಸಾಹಿತ್ಯ ಸಂಸ್ಕೃತಿಗಳ ಸುಮಧುರ ಸಂಗಮ.

ಸರ್ಕಾರಿ ನೌಕರಿಯಲ್ಲಿ ಇವರು ದಕ್ಷತೆ ಮತ್ತು ಪ್ರಾಮಾಣಿಕತೆಯನ್ನು ತುಂಬ ಜಾಗರೂಕತೆಯಿಂದ ಕಾಯ್ದುಕೊಂಡು, ಉತ್ತಮ ಆಡಳಿತಗಾರರೆಂಬ ಕೀರ್ತಿಯನ್ನು ಸಂಪಾದಿಸಿದರು. ಆಡಳಿತದಲ್ಲಿ ಇವರು ಕೈಕೊಂಡ ಪ್ರತಿಯೊಂದು ಕಾರ್ಯವನ್ನೂ —ಎಂಥ ಕಠಿಣ ಪರಿಸ್ಥಿತಿಯಲ್ಲಿಯೂ—ವಿವೇಕದಿಂದಲೂ ತಾಳ್ಮೆಯಿಂದಲೂ, ವಿರಸಕ್ಕೆ

ಎಲ್ಲಿಯೂ ಎಡೆಗೊಡದಂತೆ ನಿರ್ವಹಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಪರೀಕ್ಷಾ ನಿಯಂತ್ರಣ ಅಧಿಕಾರಿಯಾಗಿ ಇವರು ನಿರ್ವಹಿಸಿದ ಕಾರ್ಯ, ಕಾರ್ಯವಿಧಾನ, ಅಂಥ ಕೆಲಸ ಮಾಡುವವರಿಗೆಲ್ಲ ಮುಂದೆ ಮೇಲುಪಂಕ್ತಿಯಾಗಬಲ್ಲದು ; ವಿದ್ಯಾರ್ಥಿಗಳ ಆತುರ ಅಶಿಸ್ತು, ಭಾವನಾಪರವಶತೆ, ಶೀಘ್ರಕೋಪ ಅಶಾಂತಿಯ ಸ್ವಭಾವ ಇವು ಎಲ್ಲರಿಗೂ ತಿಳಿದದ್ದೆ. ಅದರಲ್ಲೂ, ಪರೀಕ್ಷಾ ವಿಭಾಗ, ಜ್ವಾಲಾಮುಖಿ. ನಿತ್ಯ ಒಂದು ಕೇಳಿಕೆ, ಸಮಸ್ಯೆ, ಗಂಡಾಂತರ. ಆದರೆ ರಾಜಪುರೋಹಿತರು ಸಮಸ್ಯೆಗಳನ್ನೆಲ್ಲ ಅರ್ಥಮಾಡಿಕೊಂಡು, ವಿದ್ಯಾರ್ಥಿಗಳನ್ನೂ ಅಧಿಕಾರಿಗಳನ್ನೂ ತಮ್ಮ ಆಂತರ್ಯಕ್ಕೆ ತೆಗೆದುಕೊಂಡು, ಸತತ ಸಂಧಾನ ಪ್ರಯತ್ನದಿಂದಲೇ ಕಾರ್ಯಮಾಡಿದುದು-ಅವರ ಅವಧಿಯಲ್ಲಿ ಒಂದೇ ಸಲವೂ ಪರಿಸ್ಥಿತಿ ಹತೋಟಿ ಮೀರದೆ ಇದ್ದುದೂ-ವಿಶ್ವವಿದ್ಯಾನಿಲಯದ ಇತಿಹಾಸದಲ್ಲಿ ಒಂದು ಅಪೂರ್ವ ದಾಖಲೆ.

ರಾಜಪುರೋಹಿತರು, ಸರ್ಕಾರದಲ್ಲಿ ಅನೇಕ ಹುದ್ದೆಗಳನ್ನು ನಿಭಾಯಿಸಿದ್ದಾರೆ. ಚಿತ್ರದುರ್ಗ ಜಿಲ್ಲಾಧಿಕಾರಿಗಳಾಗಿದ್ದರು. ಅವರು ಎಲ್ಲಿದ್ದರೂ ಕನ್ನಡದ ಕೆಲಸ ಕನ್ನಡದ ಚಿಂತನೆ ಇವೇ ಅವರ ಧ್ಯಾನ. ಚಿತ್ರದುರ್ಗದಲ್ಲಿ ಅವರ ಏರ್ಪಾಡಿನಲ್ಲಿ ಜಿಲ್ಲಾ ಜಾನಪದ ಮೇಳ ಅತ್ಯಂತ ಯಶಸ್ವಿಯಾಗಿ ನಡೆಯಿತು. ಜಿಲ್ಲೆಯ ನಾನಾ ಭಾಗಗಳಿಂದ ಕಲಾವಿದರನ್ನೆಲ್ಲ ಕರೆಸಿ, ಜಾನಪದ ಕಲೆಗಳ ಅಪೂರ್ವ ಹಬ್ಬವನ್ನೇ ವ್ಯವಸ್ಥೆಗೊಳಿಸಿದ್ದರು. ಆ ಸಮ್ಮೇಳನಕ್ಕೆ ನಾನು ಅಧ್ಯಕ್ಷನಾಗಿ ಹೋಗಿದ್ದೆ.

ಆ ವೇಳೆಗೆ ಸರ್ಕಾರದವರು, ರಾಜಪುರೋಹಿತರನ್ನು ಸಂಸ್ಕೃತಿ ಮತ್ತು ಕನ್ನಡದ ಅಭಿವೃದ್ಧಿ ಇಲಾಖೆಯ ಮುಖ್ಯಸ್ಥರನ್ನಾಗಿ ನಿಯಮಿಸಿದರು. ಕನ್ನಡದ ಸರ್ವತೋಮುಖವಾದ ಅಭಿವೃದ್ಧಿಗಾಗಿ ನೇಮಕಗೊಂಡ ಇಲಾಖೆ ಅದು. ರಾಜಪುರೋಹಿತರು ಆ ಇಲಾಖೆಯನ್ನು ಹೊಸದಾಗಿ ವ್ಯವಸ್ಥೆಗೊಳಿಸಿ, ರೂಢಿಸಿ ಕಾರ್ಯಗತ ಮಾಡಬೇಕಾಗಿದ್ದಿತು. ನಮ್ಮ ಜನತೆಯ ಇಂಗ್ಲಿಷ್ ವ್ಯಾಮೋಹ, ಒಂದು ಸಾಂಕ್ರಾಮಿಕ ಜಾಡ್ಯ. ಇಂಗ್ಲಿಷ್ ಅಭಿಮಾನಿಗಳು ಅದನ್ನು ನ್ಯಾಯವಾದ ಮತ್ತು ಅನ್ಯಾಯವಾದ ಸರ್ವಮಾರ್ಗಗಳಿಂದಲೂ ಸಾಧಿಸಲು ಪ್ರಯತ್ನಿಸುತ್ತಾರೆ. ರಾಜಪುರೋಹಿತರಿಗೆ ಪ್ರಾರಂಭದಲ್ಲಿ ಅನೇಕ ಕಷ್ಟಗಳು ಒದಗಿದವು. ಆದರೂ ಗೊಂಡಾರಣ್ಯದಲ್ಲಿ ಮುಳ್ಳು ಮರ ಹಳ್ಳಗಳನ್ನು ಸಮಗೊಳಿಸಿ ದಾರಿಮಾಡುವಂತೆ ಅವರು ಕೆಲಸ ಮಾಡಿದರು. ಕನ್ನಡದ ಸಮಸ್ಯೆಯನ್ನು ಕೂಲಂಕಷವಾಗಿ ಅಧ್ಯಯನ ಮಾಡಿ, ಅದಕ್ಕೆ ಸರ್ವಕಾಲಿಕ ಪರಿಹಾರವನ್ನು ಸೂಚಿಸಿದರು ; ಕನ್ನಡಕ್ಕೆ ಶಾಶ್ವತವಾದ ಅಸ್ತಿಭಾರವನ್ನು ಹಾಕಿದರು. ಕನ್ನಡನಾಡಿನಲ್ಲಿ ಕನ್ನಡ ಸಾರ್ವಭೌಮವಾಗಿ ವಿರಾಜಿಸಲು ಬೇಕಾದ ಸಂಪೂರ್ಣ ನಕಾಶೆಯನ್ನು ರಾಜಪುರೋಹಿತರು ಯೋಜಿಸಿ ಕಾರ್ಯಗತಗೊಳಿಸಿದರು. ಯೋಜನೆ-ನಿರ್ವಹಣೆ, ಎರಡೂ ಅವರ ಕಾರ್ಯವೇ ಆಯಿತು. ಸರ್ಕಾರ ಮತ್ತು ಅಧಿಕಾರಿಗಳ ಮನವನ್ನು ತಿದ್ದುವುದು, ಅಧಿಕಾರಿಗಳಿಗೆ ತರಪೇತಿ ಶಿಬಿರ, ಕನ್ನಡದಲ್ಲಿ

ತೀರ್ಪನ್ನು ನೀಡಲು ಅಧಿಕಾರಿಗಳಿಗೆ ಪ್ರೋತ್ಸಾಹ,ಬಹುಮಾನ-ಸ್ವತಃ ರಾಜಪುರೋಹಿತರೇ ನೂರಾರು ತೀರ್ಪುಗಳನ್ನು ಕನ್ನಡದಲ್ಲಿ ನೀಡಿ ಇತರರಿಗೆ ಮೇಲುಪಂಕ್ತಿಯಾದರು-ಜಿಲ್ಲಾಧಿಕಾರಿಗಳಿಗೆ ಸಹ, ಇವರು ತರಪೇತಿ ಶಿಬಿರಗಳನ್ನು ಏರ್ಪಡಿಸಿದರು-ಈಚೆಗೆ ಕನ್ನಡದಲ್ಲಿ ತೀರ್ಪನ್ನು ನೀಡುವದು ಬಹುಮಟ್ಟಿಗೆ ಸರ್ವಸಾಧಾರಣವಾಗುತ್ತಿದೆ.

ಇಲಾಖೆಯ ಮುಖ್ಯಸ್ಥರಾಗಿ,ರಾಜಪುರೋಹಿತರು ಇನ್ನೂ ಅನೇಕ ಕಾರ್ಯಗಳಿಗೆ ಮೊದಲಿಗರಾದರು—ಕನ್ನಡ ಬೆರಳಚ್ಚು ಯಂತ್ರಗಳ ತಯಾರಿಕೆ, ಬೆರಳಚ್ಚು ಕಲಿಕೆಗೆ ಪ್ರೋತ್ಸಾಹ, ಕನ್ನಡದ ಬಳಕೆಗಾಗಿ ಎಲ್ಲೆಲ್ಲಿಯೂ ಶಿಬಿರ, ಅನೇಕ ಗ್ರಂಥಗಳ ಪ್ರಕಾಶನ. ಇವುಗಳ ಜೊತೆಗೆ, ರಾಜಪುರೋಹಿತರು ಕನ್ನಡ ಗ್ರಂಥ ರಚನೆ, ಸಾಹಿತ್ಯಾಭಿವೃದ್ಧಿ, ಸಾಹಿತಿಗಳಿಗೆ ಪ್ರೋತ್ಸಾಹ, ಹೀಗೆ ಅವರು ಕನ್ನಡದ ಸರ್ವತೋಮುಖವಾದ ಏಳಿಗೆಗೆ ಶಕ್ತಿಮೀರಿ ಕೆಲಸ ಮಾಡಿದ್ದಾರೆ. ಇವರ ನೇತೃತ್ವದಲ್ಲಿ ಕನ್ನಡದಲ್ಲಿ ಆಡಳಿತ ಶಬ್ದಕೋಶಗಳು ಸಿದ್ಧವಾದುದಲ್ಲದೆ, ಸರ್ಕಾರಿ ಕಛೇರಿಗಳಲ್ಲೆಲ್ಲ ಅನೇಕ ಕನ್ನಡ ಬೆರಳಚ್ಚು ಯಂತ್ರಗಳೂ ಅವುಗಳ ಕೆಲಸಗಾರರೂ ಆದರು. ಈಚೆಗೆ ಶ್ರೀಮಾನ್ ದೇವರಾಜ ಅರಸರ ಸರ್ಕಾರ, ಕನ್ನಡವನ್ನು ಆಡಳಿತ ಭಾಷೆಯಾಗಿ ಘೋಷಿಸಿರುವುದರಿಂದ-ಅದನ್ನು ಕಾರ್ಯಕಾರಿ ಮಾಡುವ ಸೌಲಭ್ಯಕ್ಕೆ-ಶ್ರೀಮಾನ್ ರಾಜಪುರೋಹಿತರು ಇಷ್ಟು ವರ್ಷಗಳಿಂದ ಮಾಡಿಟ್ಟಿರುವ ಸಿದ್ಧತೆಗಳಿಂದ ಸಹಾಯವಾಗುತ್ತಿದೆ. ಸಂಸ್ಕೃತಿ ಇಲಾಖೆ ತನ್ನ ಕಾರ್ಯವನ್ನು ಈಗಲೂ ತುಂಬ ಶ್ರದ್ಧೆಯಿಂದ ನಿರ್ವಹಿಸುತ್ತಿದೆ.

ಶ್ರೀಮಾನ್ ರಾಜಪುರೋಹಿತರು ಸಂಸ್ಕೃತ ಇಂಗ್ಲಿಷ್ ಕನ್ನಡ ಉರ್ದು ಈ ನಾಲ್ಕು ಭಾಷೆಗಳಲ್ಲಿಯೂ ಪರಿಣತರು. ಕನ್ನಡಕ್ಕಾಗಿ ಅವರು ಎಷ್ಟೇ ಹೋರಾಡಿದರೂ, ಅಖಿಲ ಭಾರತದ ಒಂದು ಅವಿಭಾಜ್ಯ ಅಂಗ ಕರ್ನಾಟಕವೆಂಬುದನ್ನು ಅವರು ಎಂದೂ ಮರೆತಿಲ್ಲ. ಭಾರತದ ಸಮಗ್ರ ಒಗ್ಗಟ್ಟಿನಿಂದಲೇ ಈ ದೇಶದ ಪೂರ್ಣ ಏಳಿಗೆ ಸಾಧ್ಯ;"ಕಾಳಿದಾಸನೇ ದೇಶದ ಈ ಒಗ್ಗಟ್ಟನ್ನು ಸಾರಿದ್ದಾನೆ" ಎಂದು ಅವರು ಈ ಶ್ಲೋಕವನ್ನು ಆಗಾಗ ಹೇಳುತ್ತಾರೆ.

ಅಸ್ತ್ಯುತ್ತರಸ್ಯಾಂ ದಿಶಿದೇವತಾತ್ಮ
ಹಿಮಾಲಯೋ ನಾಮ ನಗಾಧಿರಾಜಃ
ಪೂರ್ವಾಪರಂ ತೋಯ ನಿಧೀವ ಗಾಹ್ಯಃ
ಸ್ಥಿತ ಪೃಥಿವ್ಯಾ ಇವ ಮಾನದಂಡಃ

"ಉತ್ತರ ದಿಕ್ಕಿನಲ್ಲಿ ದಿಕ್‌ದೇವತೆಯ ಆತ್ಮದಂತೆ ಹಿಮಾಲಯ ಪರ್ವತರಾಜ,ಪೂರ್ವಾಪರ ಸಮುದ್ರಗಳ ಆಳತೆಗೋಲಿನಂತೆ ನಿಂತಿದೆ."

ಸ್ವಭಾವತಃ ರಾಜಪುರೋಹಿತರು ವಿನಯಶೀಲರು, ಒಳ್ಳೆ ಮಿತ್ರ ನಿರಂಹಕಾರಿ ಮತ್ತು ಉಪಕಾರ ಬುದ್ಧಿಯವರು. ಅವರು ಇರುವೆಡೆ ಗಾಂಭೀರ್ಯ ತಿಳಿಯಾದ

ಹಾಸ್ಯ ಸುಸಂಸ್ಕೃತದ ನಡವಳಿಕೆ ಇರುತ್ತವೆ. ಅವರು ಒಳ್ಳೆ ಅತಿಥ್ಯ ಪರರು. ಎಂಥ ಕಷ್ಟವಾದ ಕೆಲಸವನ್ನೂ ಸುಲಭವಾಗಿ ಸಾಗಿಸಿಕೊಂಡು ಹೋಗುತ್ತಾರೆ. ಅವರಿಂದ ನಾವು ಇನ್ನೂ ಅನೇಕ ಸೃಜನಾತ್ಮಕ, ಸಾಹಿತ್ಯ ಕೃತಿಗಳನ್ನು ನಿರೀಕ್ಷಿಸಬಹುದು. ಆದರೆ ಗುರುತರವಾದ ಸರ್ಕಾರಿ ನೌಕರಿಯ ನಿರ್ವಹಣೆಯಲ್ಲಿ, ಕೃತಿ ರಚನೆಗೆ ಅವರಿಗೆ ಸಮಯ ದೊರೆತಿಲ್ಲ. ಸರ್ಕಾರದ ಆಶ್ವಾಸನೆಗೆ ವಾಗ್ದಾನ ಘೋಷಣೆಗಳು ಎಷ್ಟೇ ಆಗುತ್ತಿದ್ದರೂ, ಕನ್ನಡ, ತನ್ನ ನ್ಯಾಯವಾದ ಸ್ಥಾನವನ್ನು ಹೊಂದುವವರಿಗೆ ಅವರಿಗೆ ನೆಮ್ಮದಿ ಇಲ್ಲ. ಒಂದು ಸಲ, ಸಚಿವ ಸಿದ್ಧವೀರಪ್ಪನವರು ಅವರನ್ನು ಬಾಯಿ ತಪ್ಪಿ 'ಗ್ರಾಮ ಪುರೋಹಿತರು' ಎಂದು ಸಂಬೋಧಿಸಿದರು. ನಾನು "ರಾಜ ಪುರೋಹಿತರನ್ನು ಗ್ರಾಮ ಪುರೋಹಿತರೆಂದು ಕರೆಯುವುದು ಸರಿ. ಯಾಕೆಂದರೆ ಈಗ ರಾಜರು ಇಲ್ಲ. ಇವರು ರೆವಿನ್ಯೂ ಅಧಿಕಾರಿಯಾಗಿರುವವರೆಗೆ ಇವರಿಗೆ ಗ್ರಾಮದ ಸಂಪರ್ಕವಿದ್ದೇ ಇರುತ್ತೆ" ಎಂದೆ. ರಾಜಪುರೋಹಿತರು "ಗ್ರಾಮಗಳಲ್ಲಿಯಾದರೂ ಕನ್ನಡ ಇರುವವರೆಗೆ ನಾನು ಗ್ರಾಮ ಪುರೋಹಿತನೇ" ಎಂದರು.

ಇಂಥವರಿಗಾಗಿ ಒಂದು ಅಭಿನಂದನಾ ಗ್ರಂಥವನ್ನು ತರುತ್ತಿರುವುದು ತುಂಬ ಉಚಿತ. ಕರ್ನಾಟಕ ಸಾಹಿತ್ಯ ಅಕಡೆಮಿ, ಇವರಿಗೆ ಕಳೆದ ವರ್ಷ ರಾಜ್ಯ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದುದು ತುಂಬ ಸೂಕ್ತವಾಗಿದೆ. ಇವರಿಗೆ ದೀರ್ಘಾಯಸ್ಸನ್ನೂ ಆಯುರಾರೋಗ್ಯ ಸಮೃದ್ಧಿಯನ್ನೂ ಹರಸುವ ಸುಯೋಗ ನಮಗೆ ಪದೇ ಪದೆ ಉಂಟಾಗುತ್ತಿರಲಿ.

"ಇಂಗ್ಲಿಷ್ ಭಾಷೆಯ ಕಲಿಕೆಯ ಅಗತ್ಯವನ್ನು ಮರೆಯಬಾರದು. ಆದರೆ ಇಂಗ್ಲಿಷ್ ಭಾಷೆಯನ್ನು ಚೆನ್ನಾಗಿ ಕಲಿಸಬೇಕಾದರೆ ಉಳಿದೆಲ್ಲ ವಿಷಯಗಳನ್ನು ಇಂಗ್ಲಿಷ್‌ನಲ್ಲೇ ಕಲಿಸಬೇಕಾಗಿಲ್ಲ."

# ಕನ್ನಡದ ಕಟ್ಟಾಳು ರಾಜಪುರೋಹಿತ

ಶ್ರೀ ಸುರೇಂದ್ರ ದಾನಿ
ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ

ಸರ್ಕಾರೀ ಅಧಿಕಾರಿಗಳಲ್ಲಿ ಕೆಲವರು ದಕ್ಷರು. ಇನ್ನು ಕೆಲವರು ಕಲ್ಪಕ ಬುದ್ಧಿಯುವರು. ಅವರು ಸರ್ಕಾರದ ಕ್ರಿಯಾಶಕ್ತಿಯಾದರೆ ಇವರು ಬುದ್ಧಿ ಶಕ್ತಿ. ಇವರಿಬ್ಬರೂ ಪರಸ್ಪರ ಪೂರಕವಾಗಿ ಕೆಲಸ ಮಾಡಿದರೆ ಸರ್ಕಾರದ ಸಾಧನೆ ಅದ್ಭುತ. ಆದರೆ ಅಂಥ ಸಂದರ್ಭಗಳು ಅಪರೂಪ. ಇನ್ನೂ ಅಪರೂಪವೆಂದರೆ ಈ ಎರಡೂ ಶಕ್ತಿಗಳನ್ನು ಹೊಂದಿರುವ ಒಬ್ಬನೇ ಅಧಿಕಾರಿ. ಇಲ್ಲವೆಂದಲ್ಲ ; ಆದರೆ ಕಷ್ಟಪಟ್ಟು ಹುಡುಕಬೇಕು.ಇಂಥವರ ಸಾಲಿಗೆ ಸೇರಿದವರು ಶ್ರೀ ಜಯತೀರ್ಥ ರಾಜಪುರೋಹಿತ.

ಒಬ್ಬ ಸಾಮಾನ್ಯ ತಹಸೀಲ್ದಾರ ದರ್ಜೆಯಿಂದ ಡೆಪ್ಯುಟಿ ಸೆಕ್ರೆಟರಿವರೆಗೆ ನಿರಾತಂಕವಾಗಿ ಏರಿದ ಮಾತ್ರಕ್ಕೆ ಅವರು ದಕ್ಷರೆಂದು ನಾನು ಹೇಳುತ್ತಿಲ್ಲ. ಕಥೆ, ಕಾದಂಬರಿ, ನಾಟಕ, ಕವನಗಳನ್ನು ಬರೆದಿರುವರೆಂದ ಮಾತ್ರಕ್ಕೆ ಅವರು ಕಲ್ಪಕ ಬುದ್ಧಿಯುವರೆಂದೂ ಹೇಳುತ್ತಿಲ್ಲ. ಇವರೆಡನ್ನೂ ತಮ್ಮ ಕಾರ್ಯ ನಿರ್ವಹಣೆಯಲ್ಲಿ ಸಮನ್ವಯಗೊಳಿಸಿಕೊಂಡದ್ದು ಅವರ ವೈಶಿಷ್ಟ್ಯ. ಯಾವ ಅಧಿಕಾರ ಸ್ಥಾನದಲ್ಲಿದ್ದರೂ ಆದರ ನಿರ್ವಹಣೆಯಲ್ಲಿ ಅವರು ತಮ್ಮ ಕರ್ತೃತ್ವ ಶಕ್ತಿಯ ಮುದ್ರೆಯೊತ್ತಿದ್ದಾರೆ, ಕಲ್ಪಕ ಬುದ್ಧಿಯ ಕಳೆಯನ್ನು ಅದಕ್ಕೆ ನೀಡಿದ್ದಾರೆ. ಇಂಥ ಅಧಿಕಾರಿಗಳು ವಿರಳ.

ಅವರನ್ನು ನಾನು ನಿರೀಕ್ಷಿಸಿದ್ದು ಅವರು ಡೆಪ್ಯುಟಿ ಕಮಿಷನರ್ ಆದಾಗಿನಿಂದ. ಅವರಾಗ ಚಿತ್ರದುರ್ಗದಲ್ಲಿದ್ದರೆಂದು ನನ್ನ ನೆನಪು. ಇನ್ನೂ ನನ್ನ—ಅವರ ಪ್ರತ್ಯಕ್ಷ ಪರಿಚಯ ಆಗಿರಲಿಲ್ಲ. ಆಗ ಅವರು ತಮ್ಮ ಆಜ್ಞೆ - ತೀರ್ಪುಗಳನ್ನು ಕನ್ನಡದಲ್ಲಿ ಬರೆದು ಎಲ್ಲರ ಗಮನ ಸೆಳೆದರು. ಅದು ಸರ್ಕಾರಕ್ಕೊಂದು ಗ್ಲಾನಿ ಉಂಟಾಗಿದ್ದ ಕಾಲ. ಕನ್ನಡವನ್ನು ಆಡಳಿತದಲ್ಲಿ ಹೆಚ್ಚು ಹೆಚ್ಚಾಗಿ ರೂಢಿಯಲ್ಲಿ ತರಬೇಕೆಂದು ಜನತೆಯ ಅಪೇಕ್ಷೆಯಾಗಿತ್ತು. ಮಂತ್ರಿಗಳು ಮತ್ತು ಶಾಸಕರಿಗೆ ಇದರಲ್ಲಿ ಆಸ್ಥೆಯೂ ಇತ್ತು. ಆದರೆ ಐ.ಪಿ.ಎಸ್., ಐ.ಎ.ಎಸ್. ಅಧಿಕಾರಿಗಳ ಭದ್ರಗೋಡೆಯೊಂದು ಅಡ್ಡವಾಗಿ ನಿಂತಿತ್ತು. ಸರ್ಕಾರದ ಕಾರ್ಯದರ್ಶಿ, ಉಪಕಾರ್ಯದರ್ಶಿ, ಜಿಲ್ಲಾಧಿ

ಕಾರಿ ಮೊದಲಾದ ಸ್ಥಾನಗಳಲ್ಲಿದ್ದ ಈ ತಂಡ ಕನ್ನಡದ ಕಡೆಗೆ ಹೊರಳಿ ನೋಡಲೂ ಸಿದ್ಧವಿರಲಿಲ್ಲ. ಆಡಳಿತ ವ್ಯವಹರಣೆಗೆ ತಕ್ಕ ಪ್ರಬುದ್ಧತೆಯೇ ಕನ್ನಡಕ್ಕಿಲ್ಲವೆಂಬುದು ಅವರ ಸಿದ್ಧಾಂತ. ಅದನ್ನೇ ಮಂತ್ರಿಗಳು, ರಾಜಕಾರಣಿಗಳು ಪುನರುಚ್ಚರಿಸುತ್ತ ಹೊರಟಿದ್ದರು. ಕನ್ನಡ ಪಂಡಿತರು ಸಾಹಿತಿಗಳು ಮೊದಲಾದವರು ಇದು ಕೇವಲ ಪೊಳ್ಳುವಾದವೆಂದು ಎಷ್ಟೇ ಪ್ರಬಲವಾಗಿ ವಾದಿಸಿದರೂ ಅದೆಲ್ಲ ವ್ಯರ್ಥ ಕಂಠ ಶೋಷಣೆಯೆನಿಸುತ್ತಿತ್ತು. ವಿಧಾನ ಸೌಧದ ಕಲ್ಲಿನ ಗೋಡೆಯ ಮೇಲೆ ಇದು ಯಾವ ಪರಿಣಾಮವನ್ನೂ ಬೀರಲಿಲ್ಲ. ಹೀಗೆ ಅಭೇದ್ಯವೆನಿಸಿದ್ದ ಈ ಕೋಟೆಗೆ ಮೊದಲ ಗುಂಡು ಹೊಡೆದವರು ರಾಜಪುರೋಹಿತರು.ಅವರ 'ಕನ್ನಡ ತೀರ್ಪುಗಳು' ಪುಸ್ತಕ ಕನ್ನಡದ ವಿಧಾನ ಸೌಧ ಪ್ರವೇಶಕ್ಕೆ ಒಂದು ಹೊಸ ದ್ವಾರವನ್ನೇ ನಿರ್ಮಿಸಿತು. ಆಮೇಲೆ ಸರ್ಕಾರಿ ಮಟ್ಟದಲ್ಲಿ ಕನ್ನಡದ ಪ್ರವೇಶಕ್ಕೆ ಅನೇಕ ಮುಖಗಳೊಡೆದವು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ಮಾಣವಾದಾಗ ಸ್ವಾಭಾವಿಕವಾಗಿಯೇ ಅದರ ಕರ್ಣಧಾರತ್ವ ರಾಜಪುರೋಹಿತರ ಕೈಗೆ ಬಂತು. ವಿವಿಧ ಇಲಾಖೆ ಅಧಿಕಾರಿಗಳಿಗೆ 'ಕನ್ನಡ ಕಲಿಸುವ' ಕಷ್ಟದ ಕೆಲಸ ಅದು. ಇವರೆಲ್ಲ ಕನ್ನಡ ಬಲ್ಲವರೇ ಇದ್ದುದರಿಂದ ಈ ಕೆಲಸ ಸುಲಭವಾಗುವ ಬದಲು ಹೆಚ್ಚು ಕಷ್ಟದ್ದಾಯಿತೆಂದು ಅವರೇ ಒಮ್ಮೆ ಹೇಳಿದ್ದುಂಟು. ಇದನ್ನವರು ಸಾಮ - ದಾನ ಭೇದ ದಂಡ ಇತ್ಯಾದಿ ಎಲ್ಲ ಉಪಾಯಗಳಿಂದ ಸಾಧಿಸಬೇಕಾಗುತ್ತಿತ್ತು. ಅದನ್ನವರು ಒಳ್ಳೇ ಸಮಯ ಪ್ರಜ್ಞೆಯಿಂದ ಮಾಡಿದರೆಂಬುದನ್ನು ಆ ಅವಧಿಯಲ್ಲಾದ ಕನ್ನಡ ಆಡಳಿತ ಮಾಧ್ಯಮದ ಪ್ರಗತಿ ಹೇಳುತ್ತದೆ. ಇಷ್ಟೇ ಅಲ್ಲ ; ತಮ್ಮ ನಂತರ ಆ ಕಾರ್ಯವನ್ನು ಅಷ್ಟೇ ನಿಷ್ಠೆ ಪ್ರಾಮಾಣಿಕತೆ ಮತ್ತು ದಕ್ಷತೆಗಳಿಂದ ನಿರ್ವಹಿಸಬಲ್ಲ ಒಬ್ಬ ಅಧಿಕಾರಿಯನ್ನು ತರಬೇತುಗೊಳಿಸಿದರು.

ರಾಜಪುರೋಹಿತರು ಆಡಳಿತ ಭಾಷೆಗಷ್ಟೇ ಕನ್ನಡದ ದೀಕ್ಷೆ ಕೊಟ್ಟಿದ್ದರೂ ತಮ್ಮ ಕರ್ತವ್ಯ ನಿರ್ವಹಣೆಯ ಶ್ರೇಷ್ಠ ಪ್ರಶಸ್ತಿಗೆ ಪಾತ್ರರಾಗಬಹುದಿತ್ತು. ಆದರೆ ಅಷ್ಟಕ್ಕೇ ನಿಲ್ಲುವ ಸ್ವಭಾವ ಅವರದಲ್ಲ. ತನ್ನ ಆವರಣಕ್ಕಷ್ಟೇ ಸೀಮಿತಗೊಳ್ಳದೆ ಅವಕಾಶವಿದ್ದಲ್ಲೆಲ್ಲ ಅದನ್ನು ಮೀರಿ ವ್ಯಕ್ತವಾಗುವ ಪ್ರಕಾಶದ ಚೈತನ್ಯ ಅವರದು. ಅದಕ್ಕನುಗುಣವಾಗಿ ಅವರು ಕನ್ನಡದ ಸುತ್ತೂ ಕಡೆಯ ಪ್ರಗತಿಯೆಡೆಗೆ ಕಣ್ಣೋಟವನ್ನು ಹರಿಸಿದರು. ಒಂದು ಗಿಡ ಬೆಳೆಯಬೇಕಾದರೆ ಕಂಭಕ್ಕೆ ತೂತು ತೆಗೆದಂತೆ ನೇರ ತೂತು ತೆಗೆದು ನೆಟ್ಟರಾಗದು. ಅದರ ಸುತ್ತ ಮುತ್ತಲಿನ ಭೂಮಿಯನ್ನೂ ಅಗೆಯಬೇಕು ; ಹಸನುಗೊಳಿಸಬೇಕು ; ನೀರು ಗೊಬ್ಬರ ಹಾಕಬೇಕು. ಅಂದರೆ ಮಾತ್ರ ಗಿಡ ಹುಲುಸಾಗಿ, ಫಲವತ್ತಾಗಿ ಬೆಳೆಯುತ್ತದೆ. ಸರ್ಕಾರೀ ಕಡತಗಳಲ್ಲಿ ಮಾತ್ರ ಕನ್ನಡವನ್ನು ತುರುಕಿದರೆ ಸಾಲದು. ಕನ್ನಡದ ಬಳಕೆ ಪರಿಚಯ ಮತ್ತು

ಅಭಿಮಾನಗಳು ಜನತೆಯಲ್ಲೂ ವ್ಯಾಪಕವಾಗಿ ಬೆಳೆಯುಬೇಕು. ಇದಕ್ಕಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ ಶ್ರೀ ರಾಜಪುರೋಹಿತರು ಹಮ್ಮಿಕೊಂಡ ಯೋಜನೆಗಳು ಅವರ ಕಲ್ಪಕ ಬುದ್ಧಿಯ ಪ್ರತೀಕಗಳಾಗಿವೆ. ಈ ಯೋಜನೆಗಳಿಂದ ಅವರು ತಮ್ಮ ಇಲಾಖೆಗೆ ಇರುವ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಎಂಬ ಅಭಿಧಾನವನ್ನು ಸಾರ್ಥಕಗೊಳಿಸಿದರು. ಆಡಳಿತ ಮಾಧ್ಯಮವಾಗಲು ಕನ್ನಡಕ್ಕಿರುವ ಅಗತ್ಯ ಮತ್ತು ಅರ್ಹತೆಗಳನ್ನು ಕುರಿತು ಉಪನ್ಯಾಸ, ವಿಚಾರ ಸಂಕಿರಣ, ಹಸ್ತಪತ್ರಿಕೆ, ಪುಸ್ತಕ ಪ್ರಕಟಣೆ ಮೊದಲಾದ ಕಾರ್ಯಗಳಿಂದಲೇ ಅವರು ತೃಪ್ತಿ ಹೊಂದಿ ನಿಲ್ಲಲಿಲ್ಲ. ಇವೆಲ್ಲವುಗಳ ಜೊತೆಗೆ ಅವರು ಇನ್ನೂ ಒಂದು ಹೆಜ್ಜೆ ಮುಂದೆ ಇಟ್ಟರು. ನಮ್ಮ ಸಾಹಿತ್ಯ, ಸಂಗೀತ ಮತ್ತು ಸಂಸ್ಕೃತಿಗಳು ಜನರ ಹೃದಯದಲ್ಲಿ ಚಿರಸ್ಥಾಯಿಯಾಗಿ ನೆಲೆಗೊಳ್ಳುವಂಥ ಕ್ರಮಗಳನ್ನು ಕೈಕೊಂಡರು.

ಈ ಯೋಜನೆಯಲ್ಲಿ ಮೊದಲು ಅವರ ಲಕ್ಷ್ಯ ಸೆಳೆದದ್ದು ಪುರಂದರ ದಾಸರ ಉತ್ಸವ. ಪುರಂದರದಾಸರು ಕನ್ನಡ ಸಾಹಿತ್ಯ ಮತ್ತು ಸಂಗೀತಕ್ಕೆ ನೀಡಿದ ಕೊಡುಗೆ ವಿಜಯನಗರ ಸಾಮ್ರಾಜ್ಯದ ಕೀರ್ತಿಯಷ್ಟೇ ಉನ್ನತ. ಆದ್ದರಿಂದ ಹಂಪೆಯಲ್ಲಿ ಪುರಂದರದಾಸರ ಹೆಸರಿನಲ್ಲಿ ಒಂದು ಸಂಗೀತೋತ್ಸವ ನಡೆಯುವದೆಂದರೆ ಕನ್ನಡಿಗರ ಹೆಮ್ಮೆ ಹಿಗ್ಗಿ ಹೂವಾಗಬೇಕು. ತಿರುವಾಯೂರಿನಲ್ಲಿ ತ್ಯಾಗರಾಜರ ಆರಾಧನೆ ಅಷ್ಟೊಂದು ಅದ್ದೂರಿಯಿಂದ ನಡೆಯುಬೇಕಾದರೆ ಅವರ ಗುರುಗಳೆನಿಸಿದ ಪುರಂದರ ದಾಸರನ್ನು ನಾವು ಉಪೇಕ್ಷಿಸಬೇಕೆ ? ರಾಜಪುರೋಹಿತರು ಈ ಸೂಕ್ಷ್ಮ ಸಂವೇದನೆಯನ್ನು ಸರಿಯಾಗಿ ಸ್ಪಂದಿಸಿದರು. ಪ್ರತಿ ವರ್ಷ ಪುರಂದರದಾಸರ ಪುಣ್ಯತಿಥಿಯ ಹೊತ್ತಿಗೆ ಹಂಪೆಯಲ್ಲಿ ಒಂದು ದೊಡ್ಡ ಸಂಗೀತೋತ್ಸವ ನಡೆಯುವ ಯೋಜನೆಯೊಂದಕ್ಕೆ ಸರ್ಕಾರದ ನೆರವನ್ನು ಒದಗಿಸಿದರು. ಇದರ ಹಿನ್ನೆಲೆಯಲ್ಲೇ ಉಡುಪಿಯಲ್ಲಿ ಕನಕದಾಸ—ವಾದಿರಾಜ ಉತ್ಸವ ಸಂಘಟಿತವಾಯಿತು. ಕುಂದಗೋಳದಲ್ಲಿಯ ಸವಾಯಿ ಗಂಧರ್ವ ಸ್ಮಾರಕ ಸಂಗೀತೋತ್ಸವ, ಕೊಳ್ಳೇಗಾಲದಲ್ಲಿ ನಿಜಗುಣ ಸ್ಮಾರಕ ಸಂಗೀತೋತ್ಸವಗಳು ಈ ಯೋಜನೆಯ ಉಪಯುಕ್ತತೆಯನ್ನು ವಿಸ್ತರಿಸಿದವು. ಹುಬ್ಬಳ್ಳಿಯಲ್ಲಿ ನಡೆಯುವ ಕುಮಾರವ್ಯಾಸ ಸ್ಮಾರಕ ಗಮಕ—ಸಂಗೀತೋತ್ಸವಕ್ಕೂ ಶ್ರೀ ರಾಜಪುರೋಹಿತರೇ ಪ್ರೇರಕರು. ಗದಗಿನಲ್ಲಿ ಪಂಚಾಕ್ಷರಿ ಗವಾಯಿಗಳ ಸ್ಮಾರಕವೊಂದನ್ನು ಇದೇ ರೀತಿ ಚಿರನೂತನವಾಗಿಸಲು ಅವರು ನಡೆಸಿದ ಪ್ರಯತ್ನ ಸ್ಥಳೀಯ ಪ್ರತಿಕ್ರಿಯೆಯ ಅಭಾವದಿಂದಾಗಿ ಫಲ ನೀಡಲಿಲ್ಲ. ಆದರೆ ಅವರ ನೆರವಿನ ಕೈ ಹಿಡಿದು ಎದ್ದುನಿಂತ ಮೇಲಿನ ಕಾರ್ಯಕ್ರಮಗಳೆಲ್ಲ ಸಾಮಾನ್ಯ ಜನತೆಯಲ್ಲಿ ನಾಡು ನುಡಿಗಳ ಬಗ್ಗೆ ಮತ್ತು ಸಂಸ್ಕೃತಿ ಪರಂಪರೆಗಳ ಬಗ್ಗೆ ಹೊಸ ಜಾಗೃತಿಯನ್ನು ಹುಟ್ಟಿಸಿವೆ. ಸಂಗೀತ ಸಾಹಿತ್ಯದ ಬಗ್ಗೆ ವಿಶೇಷ ಒಲವು ನಿಲುವುಗಳನ್ನು ಮೂಡಿಸಿವೆ.

ಸರ್ಕಾರ ತನ್ನ ಅಧಿಕಾರ ಮುದ್ರೆಯನ್ನು ಬದಿಗಿರಿಸಿ ಸಾಹಿತ್ಯ ಸಂಸ್ಕೃತಿಗಳನ್ನು ಪ್ರೋತ್ಸಾಹಿಸುವ ರೀತಿಯೆಂದರೆ ಇದೇ ಅಲ್ಲವೆ ?

ಶ್ರೀ ರಾಜಪುರೋಹಿತರು ಈಗ ಕನ್ನಡ ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿಲ್ಲ. ವಿಧಾನ ಸೌಧದ ಗೂಡನ್ನು ಸೇರಿದ್ದಾರೆ. ಆದರೆ ಈ ಹಕ್ಕಿ ಅಲ್ಲಿ ಬಹುಕಾಲ ನಿಲ್ಲದೆ ಹೊರಗೆ ಹಾರಿ ಬರುತ್ತಿರುವದು ಶುಭ ಸೂಚಕ. ಇಷ್ಟರಲ್ಲೇ ಅಸ್ತಿತ್ವಕ್ಕೆ ಬರಲಿರುವ ಕಲಬುರ್ಗಿ ವಿಶ್ವವಿದ್ಯಾಲಯದ ವಿಶೇಷಾಧಿಕಾರಿಗಳೆಂದು ಅವರು ನೇಮಕಗೊಂಡಿದ್ದಾರೆ. ಸದಾ ವಿಧಾಯಕ ವಿಚಾರದ ರಾಜಪುರೋಹಿತರಿಗೆ ಈ ಕೆಲಸ ಒಪ್ಪಿಸಿದ್ದು ಸರ್ವಥಾ ಯೋಗ್ಯವಾಗಿದೆ. ಆದರೆ ಈಗ ಉಳಿದಿರುವ ಕೆಲವೇ ತಿಂಗಳುಗಳ ಅವಧಿಯಲ್ಲಿ ಅವರು ಈ ಕೆಲಸ ಪೂರೈಸಲಾರರು. ಔಪಚಾರಿಕವಾಗಿ ವಿಶ್ವವಿದ್ಯಾಲಯ ಅಸ್ತಿತ್ವಕ್ಕೆ ಬಂದ ಮೇಲೂ ಅವರ ಕಾರ್ಯ ಮತ್ತು ಕನಸು ಮುಂದುವರಿಯಲೇ ಬೇಕಾಗುತ್ತದೆ. ಇಲ್ಲದೆ ಹೋದರೆ ಅವರು ಈಗ ಮಾಡುವ ಪ್ರಾಸ್ತಾವಿಕ ಕಾರ್ಯವೂ ಹೊಳೆಯಲ್ಲಿ ಹುಣಸೇಹಣ್ಣು ತೊಳೆದಂತಾದೀತು. ಒಂದು ನೂತನ ವಿಶ್ವವಿದ್ಯಾಲಯವನ್ನು ರೂಪಿಸುವ ಸಾಮರ್ಥ್ಯ, ಅನುಭವ ಕಲ್ಪಕತೆ ಎಲ್ಲವೂ ಅವರಲ್ಲಿದೆ. ಇದರ ಜೊತೆಗೆ ಅವರಿಗೆ ತಾವು ಅದೇ ಮಣ್ಣಿನ ಮಕ್ಕಳೆಂಬ ಅಭಿಮಾನವೂ ಇದೆ.

# ಸ್ನೇಹಶೀಲ ರಾಜಪುರೋಹಿತರು

**ಸಿ. ಕೆ. ನಾಗರಾಜ ರಾವ್**

ವಿಜಾಪುರ ಜಿಲ್ಲಾ ಸಾಹಿತ್ಯ ಸಂಸ್ಕೃತಿ ಸಂಘದವರು ಮಿತ್ರರಾದ ಶ್ರೀ ಜಯ ತೀರ್ಥ ರಾಜಪುರೋಹಿತರು ಕನ್ನಡ ಸಾಹಿತ್ಯ ಸಂಸ್ಕೃತಿಗಳಿಗೆ ಮಾಡಿರುವ ಸೇವೆ ಯನ್ನು ಗಮನಿಸಿ 'ಜಯತೀರ್ಥ' ಎಂಬ ಅಂಕಿತದ ಅಭಿನಂದನಾ ಗ್ರಂಥ ತರಲು ಆಲೋಚಿಸಿರುವದು ತುಂಬಾ ಯುಕ್ತವಾದ ಕೆಲಸ. ಶ್ರೀ ರಾಜಪುರೋಹಿತರ ಸ್ನೇಹ ಲಬ್ಧವಾಗಿರುವ (ಅವರೇನೋ ನನ್ನನ್ನು ಹಿರಿಯ, ದೊಡ್ಡ ಸಾಹಿತಿ ಎಂದು ಗೌರವವಾಗಿಯೇ ಸದಾ ಕಾಣುತ್ತಾರೆ) ನನಗೆ ಅವರ ಬಗೆಗೆ ನಾಲ್ಕು ಮಾತು ಬರೆ ಯುವ ಅವಕಾಶ ದೊರೆತುದು ಸಂತಸದ ಕೆಲಸವೇ. ಪರಸ್ಪರ ಸ್ನೇಹದ ವಿಷಯ ಇದ್ದಾಗ ಸ್ವವಿಷಯ ಅಲ್ಪ ಸ್ವಲ್ಪ ಬರುವದು ಅನಿವಾರ್ಯ. ನನಗೆ ನನ್ನ ಚಿಕ್ಕ ವಯಸ್ಸಿನಲ್ಲಿ, ನನಗಿಂತ ವಯಸ್ಸಿನಲ್ಲಿ 15 ವರ್ಷ ಹಿರಿಯರಾಗಿದ್ದ ವಿದ್ವಾಂಸರೂ, ಶ್ರೇಷ್ಠ ಸಾಹಿತಿಗಳೂ ಅಭಿನಯ ಚತುರರೂ ಆಗಿದ್ದ ಶ್ರೀಗಳಾದ ದೇವುಡು ನರಸಿಂಹ ಶಾಸ್ತ್ರೀ, ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ, ದ. ಕೃ. ಭಾರದ್ವಾಜರ ಆತ್ಮೀಯ ಸ್ನೇಹ ಲಭಿಸಿತ್ತು. ವಯಸ್ಸಿನ ಅಂತರ ನಮ್ಮನ್ನು ದೂರ ಇಟ್ಟಿರಲಿಲ್ಲ. ಆ ಹಿರಿ ಯರ ಮನೋವೈಶಾಲ್ಯ ನನ್ನ ಗುಣವನ್ನು ರೂಪಿಸುವಲ್ಲಿ ಸಾಕಷ್ಟು ಪ್ರಭಾವ ಬೀರಿದೆ. ಅವರ ಆತ್ಮೀಯ ಸ್ನೇಹದ ಫಲವಾಗಿ, ಆಗಾಗ ಅವರಲ್ಲಿ ನಡೆಸಿದ ವಿಚಾರ ಮಂಥನದ ಫಲವಾಗಿ ನನ್ನಲ್ಲಿ ಆತ್ಮವಿಶ್ವಾಸ ಮೂಡಿ, ನಾನು ಮೇಲೇರಲು ಕಾರಣವಾಗಿದೆ ಮತ್ತು ಸ್ನೇಹ ಮಾಡುವಲ್ಲಿ ವಯಸ್ಸನ್ನು ಎಂದೂ ಗಣನೆಗೆ ತೆಗೆದುಕೊಳ್ಳಬಾರದೆಂಬ ತಿಳಿವಳಿಕೆ ಮೂಡಿ ಕಿರಿಯರಲ್ಲಿಯೂ ಸ್ನೇಹದಿಂದ ವರ್ತಿ ಸುವ ಸ್ವಭಾವ ನನಗೆ ಮೈಗೂಡಿದೆ. ರಾಜಪುರೋಹಿತರಿಗೂ ನನಗೂ ಸಮವಯ ಸ್ಕರಲ್ಲಿರಬಹುದಾದ ಸ್ನೇಹ ಸಲಿಗೆಗಳು ರೂಪಗೊಂಡಿವೆ.

ನಾನು ಅವರ ಬರಹಗಳನ್ನು ಓದುತ್ತಿದ್ದೆ. ಅವರನ್ನು ಕಂಡಿರಲಿಲ್ಲ. ಬರಹ ಮೆಚ್ಚುಗೆಯಾದಾಗ ಬರಹಗಾರರನ್ನು ನೋಡಬೇಕೆಂಬ ಸಹಜವಾದ ಇಚ್ಛೆ ಮನದಲ್ಲಿ

ಮೂಡುತ್ತದೆ. ಆ ಇಚ್ಛೆ ಫಲಿತವಾಗುವುದೂ ಉಂಟು. ಕೆಲವೊಮ್ಮೆ ಆಗದಿರುವುದೂ ಉಂಟು. ರಾಜಪುರೋಹಿತರ ಬರಹ ಓದಿ ಮೆಚ್ಚಿದ್ದ ನನಗೂ ಅವರಿಗೂ ಮೊದಲು ಭೇಟಿಯಾದಾಗ ಅವರು ಬಳ್ಳಾರಿಯಲ್ಲಿ ಇದ್ದರು. ವಿಶೇಷ ಜಿಲ್ಲಾಧಿಕಾರಿಯಾಗಿದ್ದರೂಂತ ನೆನಪು. ಅಲ್ಲಿ ಅವರಿದ್ದಾಗ ಸಾಹಿತ್ಯ, ಸಾಂಸ್ಕೃತಿಕ ಕೆಲಸಗಳು ವಿಜೃಂಭಿಸಿದವು. ಬಳ್ಳಾರಿ ರಾಘವಾಚಾರ್ಯರ ಸ್ಮಾರಕಭವನ ಬಳ್ಳಾರಿಯಲ್ಲಿದೆ. ಅವರ ಸ್ಮರಣೆ ರಂಗ ಕಲಾವಿದರಿಗೆ ಸ್ಫೂರ್ತಿದಾಯಕ. ನಾನು, ಬಳ್ಳಾರಿ ರಾಘವಾಚಾರ್ಯರು ಬೆಂಗಳೂರಿನ ಎ.ಡಿ.ಎ (ಅಮೆಚೂರ್ ಡ್ರಮಾಟಿಕ್ ಅಸೋಸಿಯೇಷನ್) ನಲ್ಲಿ ಒಟ್ಟಿಗೆ ಕನ್ನಡ, ತೆಲುಗು, ಹಿಂದಿ ನಾಟಕಗಳಲ್ಲಿ ನಟಿಸಿದವರು. ಅವರು ನಿರ್ದೇಶಿಸಿದ ದ್ರೌಪದಿ ಮಾನಸಂರಕ್ಷಣಮು (1936) ತೆಲುಗು ಚಿತ್ರದ ಚಿತ್ರೀಕರಣ ಸಂದರ್ಭದಲ್ಲಿ ನಾನು ಅವರಿಗೆ ನೆರವಾಗಿದ್ದೆ. ಈ ಕಾರಣದಿಂದ ಬಳ್ಳಾರಿಯಲ್ಲಿ ಜರುಗಿದ ರಾಘವ ಸ್ಮಾರಕ ನಾಟಕೋತ್ಸವ ಸಂದರ್ಭದಲ್ಲಿ ನನ್ನನ್ನು ಬಳ್ಳಾರಿಗೆ ಕರೆಸಲು ಶ್ರೀ ರಾಜಪುರೋಹಿತರು ಕಾರಣಕರ್ತರಾಗಿದ್ದರು. ನನ್ನ ಇನ್ನೊಬ್ಬ ಕಲಾಮಿತ್ರರು ಶ್ರೀ ಎಂ. ಎಸ್. ನಟರಾಜನ್ ಅವರು ಮೊದಲು ನನ್ನನ್ನು ರಾಜಪುರೋಹಿತರಿಗೆ ಪರಿಚಯ ಮಾಡಿಸಿದಾಗ ನಮ್ಮಿಬ್ಬರಲ್ಲಿಯೂ ಒಂದೇ ಭಾವನೆ ಮೂಡಿದವು. ಒಬ್ಬರನ್ನೊಬ್ಬರು ಬರಹಗಳ ಮೂಲಕ ಪರೋಕ್ಷವಾಗಿ ತಿಳಿದವರಾಗಿದ್ದರೂ ವ್ಯಕ್ತಿ ಪರಿಚಯವಿರಲಿಲ್ಲ. ಪ್ರಥಮ ಪರಿಚಯದಲ್ಲಿ ನನ್ನಲ್ಲಿ ರಾಜಪುರೋಹಿತರ ಬಗೆಗೆ ಅಭಿಮಾನ ಮೂಡಿತು. ಅವರ ಸುಸಂಸ್ಕೃತ ನಡವಳಿಕೆ, ಹಾರ್ದಿಕವಾದ ಮನಬಿಚ್ಚಿ ಮಾತನಾಡುವ ಆತ್ಮೀಯ ರೀತಿ, ಕನ್ನಡ ಸಾಹಿತ್ಯ, ಕಲೆ, ಸಂಸ್ಕೃತಿಗಳ ಬಗೆಗಿನ ಅವರಲ್ಲಿನ ತೀವ್ರ ಕಳಕಳಿ, ಇವಕ್ಕೆಲ್ಲ ಒಪ್ಪಕೊಡುವ ಅವರ ದುಂಡು ನಗುಮುಖ, ಸತ್ಯ ಪರೀಕ್ಷಕರಂತೆ ನೋಡುವ ಅವರ ವಿಶಾಲ ನೇತ್ರಗಳು, ಚಿಂತನೆ, ಕಲ್ಪನೆಗಳ ವೈಶಾಲ್ಯವನ್ನು ಎತ್ತಿತೋರುವ ಉಬ್ಬಿದ ವಿಸ್ತಾರವಾದ ಫಾಲ, ನಾಲ್ಕು ಜನರ ಮಧ್ಯೆಯೂ ಎದ್ದು ನಿಲ್ಲುವ ಅವರ ಆಕರ್ಷಕ ವ್ಯಕ್ತಿತ್ವ ಎಲ್ಲರ ಮೆಚ್ಚುಗೆಗೂ ಪಾತ್ರವಾಗುವಾಗ ಅಭಿಮಾನ ಮೂಡದಿರಲು ಹೇಗೆ ಸಾಧ್ಯ? ಅದರಲ್ಲಿಯೂ ಕೃತಕತೆಯ ಸೋಂಕು ಕಾಣದ ಅವರ ವರ್ತನೆ ನನಗಂತೂ ತುಂಬ ಪ್ರಿಯವೆನಿಸಿತು.

ಸಾಹಿತ್ಯ, ಕಲೆ, ಸಂಸ್ಕೃತಿಗಳ ಬಗೆಗೆ ತೀವ್ರವಾದ ಆಸಕ್ತಿ; ಅವುಗಳ ನಿಜವಾದ ಬೆಳವಣಿಗೆಗೆ ಹಾರ್ದಿಕವಾದ ಕಳಕಳಿ ಇರುವ ನಮ್ಮಿಬ್ಬರಿಗೂ ಅದು ಸುದಿನ. ರಾಜಪುರೋಹಿತರು ಅವರ ನಾಟಕಗಳ ಒಂದು ಸಂಕಲನವನ್ನು ನನಗೆ ಒಲವಿನ, ಗೌರವದ ಕಾಣಿಕೆಯಾಗಿ ಕೊಟ್ಟರು. ಅವರ ಕವಿ ಹೃದಯ, ಕಲ್ಪನಾ ಸಾಮರ್ಥ್ಯ ಆ ಸಂಗ್ರಹದಲ್ಲಿ ಗೋಚರವಾಗುತ್ತದೆ. ರಾಜಪುರೋಹಿತರು ಒಳ್ಳೆಯ ಕಥೆಗಾರರು, ನಾಟಕಕಾರರು, ಕಾದಂಬರಿಕಾರರು. ಅವರ ಬರವಣಿಗೆಯಲ್ಲಿನ ವಿಶಿಷ್ಟವಾದ ಐತಿಹಾಸಿಕ ಪ್ರಜ್ಞೆ ಮೆಚ್ಚುವಂಥದು. ನಿಜಾಮರ ಆಳ್ವಿಕೆಯಲ್ಲಿದ್ದ ಕರ್ನಾಟಕ ಭಾಗದ

ಗಂಗಾವತಿ ತಾಲ್ಲೂಕಿನ ಕನಕಗಿರಿಯಲ್ಲಿ ಹುಟ್ಟಿದವರು ರಾಜಪುರೋಹಿತರು. ಅವರು ಹುಟ್ಟಿದ್ದು ಹುಲ್ಲುಮೊರಡಿಯಲ್ಲಿ ಅಲ್ಲ ಕನಕಗಿರಿಯಲ್ಲಿ.

ಅವರ ಹೆಸರು ಸೂಚಿಸುವಂತೆ ಅವರು ಸಂಪ್ರದಾಯಬದ್ಧ ವೈದಿಕ ಮನೆತನ ದಲ್ಲಿ ಹುಟ್ಟಿದವರು. ಆದರೆ ಅದು ಸಾಮಾನ್ಯ ವೈದಿಕ ಮನೆತನವಲ್ಲ. ರಾಜ ಮನ್ನಣೆ ಪಡೆದ ವೈದಿಕವಂಶ. ಅಂದರೆ ಆ ಕಾಲಕ್ಕೆ ಪ್ರತಿಷ್ಠಿತ ಮನೆತನ. ಮನೆ ತನದ ಸಂಪ್ರದಾಯದಂತೆ ಅವರು ಸಂಸ್ಕೃತ ವಾಙ್ಮಯವನ್ನು ಚೆನ್ನಾಗಿ ಅಧ್ಯಯನ ಮಾಡಿದರು. ಆದರೆ ಅವರು ಜನ್ಮ ಧರಿಸಿದ ಕಾಲ ಭಾರತದಲ್ಲಿ ಆಂದೋಳನದ ಕಾಲ. ಸಾಮಾಜಿಕ ಆಂದೋಳನ, ರಾಜಕಿಯ ಆಂದೋಳನ ನಡೆದ ಕಾಲ. ಎಲ್ಲ ಯುವಕರಂತೆ ರಾಜಪುರೋಹಿತರೂ ಸ್ವಾತಂತ್ರ್ಯಾಂದೋಳನದಲ್ಲಿ ಪಾಲುಗೊಂಡರು. ಶಿಕ್ಷೆಯನ್ನೂ ಅನುಭವಿಸಿದರು. ಸಂಪ್ರದಾಯದ ಮೂಸೆಯಲ್ಲಿ ಬೆಳೆದ ರಾಜ ಪುರೋಹಿತರು ತಾವು ಬೆಳೆದ ಪರಿಸರದ ಕಾರಣವಾಗಿ, ಭವಿಷ್ಯದತ್ತ ದೃಷ್ಟಿ ಹರಿ ಯಿಸಿ ವಿಚಾರವಾದಿಗಳೂ ವಿಶಾಲ ಹೃದಯಿಗಳೂ ಆದರು. ಕನ್ನಡ, ಸಂಸ್ಕೃತ, ಉರ್ದು ಭಾಷೆಗಳಲ್ಲಿ ವಿಶೇಷ ಜ್ಞಾನ ಸಂಪಾದಿಸಿದ ರಾಜಪುರೋಹಿತರು ತಾವು ಹುಟ್ಟಿ, ಬೆಳೆದು ಬಾಳಿದ ಪರಿಸರಗಳ ಚಿತ್ರಗಳನ್ನು ತಮ್ಮ ಕೃತಿಗಳಲ್ಲಿ ಮೂಡಿಸಿ ದ್ದಾರೆ. ಹೈದ್ರಾಬಾದ್ ಕರ್ನಾಟಕದ ಜನ ಸಂಸ್ಕೃತಿಯು ಸಂಘರ್ಷಕ್ಕೆ ಒಳಗಾದ ಜನ. ಭಿನ್ನ ಸಂಸ್ಕೃತಿಗಳ ಸಂಘರ್ಷದಲ್ಲಿಯೂ ಉದಾತ್ತತೆಯನ್ನು ರೂಪಿಸಿಕೊಂಡು, ಅತಿಸೂಕ್ಷ್ಮವಾದ ಐತಿಹಾಸಿಕ ಪ್ರಜ್ಞೆಯನ್ನು ಉಪಯೋಗಿಸಿಕೊಂಡು, ಅವರು ಬರೆ ದಿರುವ ಕಥೆ, ಕಾದಂಬರಿ, ನಾಟಕಗಳು ಕರ್ನಾಟಕದ ಹಿಂದಿನ ಇಂದಿನ ಬಾಳಿನ ಘಟನೆ ಗಳ ಸುಂದರ ಚಿತ್ರಗಳನ್ನು ಕೊಡುವದರ ಜೊತೆಗೆ ಪದಗಳ ಬಳಕೆಗೆ ಒಂದು ಹೊಸ ಆಯಾಮ ನೀಡಿದೆ. ಈ ರೀತಿ ಪದಪ್ರಜ್ಞೆಯನ್ನು ಪಡೆದು ಅದನ್ನು ಹಾಳತವಾಗಿ ಉಪಯೋಗಿಸಿದ ಕನ್ನಡ ರಾಜ್ಯದ ಉನ್ನತವಾದ ಅಧಿಕಾರಿ ದಿವಂಗತ ಶ್ರೀಯುತ ನವರತ್ನ ರಾಮರಾಯರು. ವಿಶ್ವವಿದ್ಯಾನಿಲಯಗಳಲ್ಲಿ ಭಾಷಾ ಪಂಡಿತರುಗಳಾಗಿ ಉನ್ನತ ಉದ್ಯೋಗದಲ್ಲಿದ್ದು ಸಾಹಿತಿಗಳಾಗುವದು ಆಶ್ಚರ್ಯದ ವಿಷಯವಲ್ಲ. ಸಾಹಿತ್ಯ ಅವರ ದಿನನಿತ್ಯದ ಕಸಬು. ಆದರೆ ಬೇರೆ ಆಡಳಿತ ಕ್ಷೇತ್ರದಲ್ಲಿ ತುಂಬಿದ ಹೊಣೆಗಾರಿಕೆಯ ಅಧಿಕಾರ ಪಡೆದವರು ಸಾಹಿತ್ಯ ಕ್ಷೇತ್ರದಲ್ಲಿ ಎಲ್ಲರ ಮೆಚ್ಚುಗೆಗೆ ಪಾತ್ರ ವಾಗುವ ಕೆಲಸ ಮಾಡುವವರು ವಿರಳ. ಮಾಡಿದವರೂ ವಿರಳ. ದಿವಂಗತ ಶ್ರೀ ನವರತ್ನ ರಾಮರಾಯರು, ಶ್ರೀಗಳಾದ ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಚ್. ಎಲ್. ನಾಗೇಗೌಡರ ಸಾಲಿನಲ್ಲಿ ರಾಜಪುರೋಹಿತರು ನಿಲ್ಲುತ್ತಾರೆ.

ರಾಜಪುರೋಹಿತರ ಕೃತಿಗಳಿಗೆ ಜನಪ್ರಶಸ್ತಿ ದೊರೆತಿದೆ. ಪತ್ರಿಕಾಪ್ರಶಸ್ತಿ ಸಿಕ್ಕಿದೆ. ಕರ್ನಾಟಕ ರಾಜ್ಯದ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ದೊರೆತಿದೆ.

ಸಾಹಿತ್ಯ ಕ್ಷೇತ್ರದಲ್ಲಿ ಅವರು ಮಾಡಿದ ಕೆಲಸಕ್ಕೆ ಲಭ್ಯವಾದ ಪುರಸ್ಕಾರ ಹೀಗೆ ನಾನಾ ಮುಖ.

ಆದರೆ ಅವರು ಕನ್ನಡದ ಹಿರಿಮೆಗಾಗಿ ಮಾಡಿದ ಕೆಲಸ ಮಾತ್ರ ಮರೆಯಬಾರದಂತಹುದು. ಆ ಕೆಲಸದಲ್ಲಿ ಅವರು ತೋರಿದ ಆತ್ಮವಿಶ್ವಾಸ ಮೆಚ್ಚುವಂತಹುದು. ವಿಶೇಷ ಜಿಲ್ಲಾಧಿಕಾರಿಗಳಾಗಿ ಅವರು ತಮ್ಮ ತೀರ್ಪುಗಳನ್ನು ಕನ್ನಡದಲ್ಲಿಯೇ ಕೊಟ್ಟು, ನ್ಯಾಯಾಂಗ ತಮ್ಮ ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸಲು ಇಂಗ್ಲಿಷಿಗೆ ಜೋತುಬೀಳಬೇಕಾಗಿಲ್ಲ, ಕನ್ನಡವನ್ನು ಅವಲಂಬಿಸಬಹುದು, ನಮ್ಮ ಕನ್ನಡ ಭಾಷೆಗೂ ನಿಖರವಾಗಿ ನ್ಯಾಯನಿರ್ಣಯ ಕೊಡುವ ಶಕ್ತಿ ಇದೆ, ಎಂದು ತೋರಿಸಿ ಕೊಟ್ಟರು. ಅವರು ಕೊಟ್ಟ ತೀರ್ಪುಗಳಲ್ಲಿ ಕೆಲವನ್ನು 'ಕನ್ನಡದಲ್ಲಿ ತೀರ್ಪುಗಳು' ಎಂಬ ಅಭಿಧಾನದಿಂದ ಪ್ರಕಟಿಸಿ ಇಡೀ ಭಾರತಕ್ಕೆ ಒಂದು ದಾಖಲೆಯನ್ನು ಸ್ಥಾಪಿಸಿದರು. ಬೇರಾವ ರಾಜ್ಯಭಾಷೆಯೂ ಮಾಡದಿದ್ದುದನ್ನು ಕನ್ನಡ ಭಾಷೆ (ಅರ್ಥಾತ್ ರಾಜಪುರೋಹಿತರು) ಮಾಡಿರುವದನ್ನು ಕೇಂದ್ರ ಮೆಚ್ಚಿತು. ಕರ್ನಾಟಕ ರಾಜ್ಯ ಈ ಗ್ರಂಥಕ್ಕೆ ವಿಶೇಷ ಪ್ರಶಸ್ತಿ ನೀಡಿತು.

ಸ್ವಾತಂತ್ರ್ಯ ಬಂದ ಮೇಲೆ ಶ್ರೀ ಕೆಂಗಲ್ ಹನುಮಂತಯ್ಯನವರ ಕಾಲದಲ್ಲಿ ಸಾಂಸ್ಕೃತಿಕ ಅಭಿವೃದ್ಧಿ ಇಲಾಖೆಯೊಂದು ದಿವಂಗತ ಶ್ರೀ ಸಿ. ಕೆ. ವೆಂಕಟರಾಮಯ್ಯನವರ ನೇತೃತ್ವದಲ್ಲಿ ರೂಪಗೊಂಡಿತು. ಆರಂಭದ 3–4 ವರ್ಷಗಳು ಒಳ್ಳೆಯ ಕೆಲಸ ನಡೆಯಿತು. ನಂತರದ ನೇತಾರರ ಕಾಲದಲ್ಲಿ ಇಲಾಖೆ ನಿಖರ ದಾರಿ ತುಳಿಯದೆ ಒಂದು ಡೋಲಾಯಮಾನ ಸ್ಥಿತಿಗೆ ಬಂದು. ಕಡೆಗೆ ಅದು ಒಂದು ಮಿತಘಟಕವಾಗಿ ಉಳಿಯಿತು. ಕರ್ನಾಟಕದಲ್ಲಿ ಕನ್ನಡವೇ ಆಡಳಿತ ಭಾಷೆಯಾಗಬೇಕು ಎಂಬ ಸಹಜ ಆಶೆ ಈಡೇರಿಸಿಕೊಳ್ಳುವ ಪ್ರಯತ್ನದಲ್ಲಿ ಸಾಂಸ್ಕೃತಿಕ ಅಭಿವೃದ್ಧಿ ಇಲಾಖೆಯ ಆ ಮಿತಘಟಕ ಒಂದು ವ್ಯಾಪಕತ್ವವನ್ನು ಪಡೆದು ಮಹತ್ಕಾರ್ಯ ಸಾಧನೆಗೆ ಕಾರಣವಾಗಬೇಕಾಯಿತು. ಆಗ ಅಸ್ತಿತ್ವಕ್ಕೆ ಬಂದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಪ್ರಥಮ ನಿರ್ದೇಶಕರಾಗಿ ರಾಜಪುರೋಹಿತರು ಮಾಡಿದ ಕೆಲಸ ಅವರ ದೂರದೃಷ್ಟಿಗೆ ಸಾಕ್ಷಿಯಾಗಿದೆ. ರಾಜಪುರೋಹಿತರ ಗುಣ, ಪಕ್ಷಪಾತ ಬುದ್ಧಿ, ಸ್ನೇಹಶೀಲತೆ ಅವರ ಸಂಘಟನಾ ಸಾಮರ್ಥ್ಯಕ್ಕೆ ಒತ್ತಾಸೆಯಾಗಿ ನಿಂತವು. ಎಲ್ಲರ ನೆರವನ್ನು ದೊರಕಿಸಿಕೊಂಡರು. ಅವರು ಎಲ್ಲೇ ಇರಲಿ ಅಲ್ಲಿ ಅವರ ಸ್ನೇಹಜಾಲ ಹರಡುತ್ತದೆ. ಮೇಲಿನವರೊಡನೆ, ಕೈಕೆಳಗಿನವರೊಡನೆ, ಸಮಾನ ಸ್ಥಾನಮಾನದವರೊಡನೆ ಎಲ್ಲರಲ್ಲೂ ಅವರು ಸಲಿಗೆಯಿಂದ ಸ್ನೇಹಶೀಲತೆಯಿಂದ ವರ್ತಿಸುತ್ತಾರೆ. ಅವರ ಸ್ನೇಹಶೀಲತ್ವ ನ್ಯಾಯಕ್ಕೆ ಅಪೋಹ ತರುವ ಅಸ್ತ್ರವಾಗದೆ ನ್ಯಾಯಕ್ಕೆ ಮನ್ನಣೆ ದೊರಕಿಸುವ ಅಸ್ತ್ರವಾಗಿದೆ. ಈ ಸ್ನೇಹಶೀಲತ್ವ ರಾಜಪುರೋಹಿತರ ವಿಶಿಷ್ಟಗುಣವೆಂದು ನನ್ನ ನಂಬಿಕೆ.

ನಮ್ಮ ಸ್ನೇಹಕ್ಕೆ ಕೆಲವು ಸಮಾನ ದೃಷ್ಟಿಕೋನಗಳು ಕಾರಣವೆಂದು ಹೇಳಬಹುದು. ಅವರಂತೆ ನನಗೂ ಇತಿಹಾಸದ ಕಡೆ ಗೀಳು. ಹೀಗಾಗಿ, ಅನೇಕ ಆಧುನಿಕರು ಹೀಗಳೆದರೂ ಗತಕಾಲದ ವಿಷಯದಲ್ಲಿ ಆಸಕ್ತಿ ಹುಟ್ಟಿ, ನಾವು ರಚಿಸುವ ಕೃತಿಗಳಿಗೆ ಇತಿಹಾಸದಿಂದ ಘಟನೆಗಳನ್ನು ಆರಿಸಿಕೊಳ್ಳುವದುಂಟು. ನಾನು ರಾಜಪುರೋಹಿತರು ಒಂದೇ ಘಟನೆಯನ್ನು ಆರಿಸಿಕೊಂಡು ಕಥೆಗಳನ್ನು ಬರೆದಿದ್ದೇವೆ. ನಾನು ಬರೆದದ್ದು ಅವರಿಗೆ ಗೊತ್ತಿಲ್ಲ. ಅವರು ಬರೆದದ್ದು ನನಗೆ ಗೊತ್ತಿಲ್ಲ. ಅವರು ಅದಕ್ಕೆ 'ಅಳಲಾಗದವನು' ಎಂದು ಹೆಸರಿಸಿದರೆ ನಾನು ಅದಕ್ಕೆ 'ಸಂಕೋಲೆ ಬಸವ' ಎಂದು ಹೆಸರಿಸಿಡೆ. ಪರಸ್ಪರ ಗೊತ್ತಿಲ್ಲ. ಇಬ್ಬರೂ ಒಂದೇ ಘಟನೆಗೆ ಮನಸೋತೆವೆಂದು ಅರಿವುಗೊಂಡಾಗ ನಮ್ಮ ಸ್ನೇಹ ಹೆಚ್ಚು ನಿಕಟವೆನಿಸಿತು. ರಾಜಪುರೋಹಿತರ ಸ್ನೇಹ ತೋರಿಕೆಯ ಆಡಂಬರದ ಸ್ನೇಹವಲ್ಲ. ನಿರಾಡಂಬರವಾದ ಹಾರ್ದಿಕ ಸ್ನೇಹ. ರಾಜಪುರೋಹಿತರು ಈಗ ಹೊಸ ವಿಶ್ವವಿದ್ಯಾಲಯ ರೂಪಿಸುವಲ್ಲಿ ಆಡಳಿತಾಧಿಕಾರಿಯಾಗಿ ನೇಮಕಗೊಂಡಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರೂಪಗೊಂಡಂತೆ ಗುಲ್ಬರ್ಗ ವಿಶ್ವವಿದ್ಯಾಲಯವೂ ಇವರ ಆಡಳಿತ ವಿಚಕ್ಷಣೆಯಲ್ಲಿ ಒಳ್ಳೆಯ ವಿಶ್ವವಿದ್ಯಾಲಯವಾಗಿ ರೂಪಗೊಳ್ಳಲಿ ಎಂದು ಹಾರ್ದಿಕವಾಗಿ ಆಶಿಸಿ ರಾಜಪುರೋಹಿತರ ಸಾಹಿತ್ಯದ ಕೆಲಸ ನಿರಂತರವಾಗಿ ಸಾಗಲಿ ಎಂದು ಹಾರೈಸಿ ಅವರು ಸದಾ ಹೀಗೆ ಸರ್ವರ ಹಿತ ಕೋರುವವರಾಗಿಯೇ ಇರಲಿ ಎಂದು ಬಯಸಿ ಸ್ನೇಹಶೀಲ ರಾಜಪುರೋಹಿತರಿಗೆ ಹಾರ್ದಿಕ ಶುಭ ಕೋರುತ್ತೇನೆ.

# ನಾ ಕಂಡ ಕನ್ನಡ ಅಭಿಮಾನಿ

ಸಾ. ವೆಂಚಯ್ಯ
ಅಡಿಷನಲ್ ಕಾರ್ಯದರ್ಶಿ
ವಿದ್ಯಾ ಇಲಾಖೆ

ಶ್ರೀ ಜಯತೀರ್ಥ ರಾಜಪುರೋಹಿತರು ಹಿಂದಿನ ಹೈದ್ರಾಬಾದ್ ನಿಜಾಮರ ಸರ್ಕಾರದ ಕಂದಾಯ ಇಲಾಖೆಯಲ್ಲಿ ಸರ್ಕಾರಿ ಸೇವೆಗೆ ಸೇರಿ ಪುನರ್ವಿಂಗಡನೆ ಆಗಿ ಹೈದ್ರಾಬಾದಿನ ಬೀದರ್, ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳು ಕರ್ನಾಟಕ ದಲ್ಲಿ ವಿಲೀನವಾದಾಗ ಕರ್ನಾಟಕಕ್ಕೆ ಬಂದವರು. ಕಂದಾಯ ಇಲಾಖೆಯಲ್ಲಿ ತಹಸೀ ಲ್ದಾರ್ ಹಂತದಿಂದ ಜಿಲ್ಲಾಧಿಕಾರಿಗಳ ಹಂತದವರೆಗೆ ಜವಾಬ್ದಾರಿ ನಿರ್ವಹಿಸಿದ್ದಾರೆ. ಅಲ್ಲದೆ ಮೈಸೂರು ವಿಶ್ವವಿದ್ಯಾನಿಲಯದ ಕುಲಸಚಿವರಾಗಿಯೂ ಸೇವೆ ಸಲ್ಲಿಸಿದ್ದಾರೆ. ಈ ಹುದ್ದೆಗಳೆಲ್ಲವೂ ಅವರಿಗೆ ಮಾನಸಿಕ ತೃಪ್ತಿ ಮತ್ತು ಜನಾದರಣೆ ತಂದು ಕೊಟ್ಟಿ ವೆಯೋ ಇಲ್ಲವೊ ತಿಳಿಯದು. ಆದರೆ ಅವರು ಕರ್ನಾಟಕದ ಜನತೆಗೆ ಪರಿಚಿತರಾಗಿ ರುವದು ಅವರ ಕನ್ನಡದ ಅಭಿಮಾನದಿಂದಾಗಿ.

ರಾಜಪುರೋಹಿತರು ಹೊರನೋಟಕ್ಕೆ ಮೃದುಸ್ವಭಾವದವರು. ಸಿಟ್ಟೆಂಬುದರ ಅರಿವೇ ಇಲ್ಲವೇನೊ ಎಂಬಷ್ಟು ಸಾಮ್ಯತೆ ಎದ್ದು ಕಾಣುತ್ತದೆ. ಆದರೆ ಕರ್ತವ್ಯ ಲೋಪ, ಜವಾಬ್ದಾರಿ ನಿರ್ವಹಣೆಯಲ್ಲಿ ಅನಾದರಣೆ ಇವುಗಳನ್ನು ಕಂಡರೆ ಸಿಡಿದೇಳು ವರು. ಅಂಥ ಸಂದರ್ಭಗಳಲ್ಲೂ ಸೌಜನ್ಯದ ಎಲ್ಲೆ ಮೀರದ ನಡವಳಿಕೆ ಅವರಿಗೆ ಸಹೋದ್ಯೋಗಿಗಳ ಪ್ರೀತಿಗೌರವಗಳನ್ನು ದೊರಕಿಸಿಕೊಟ್ಟಿದೆ. ಅವರು ಸ್ನೇಹ ಪರರು ; ಕಷ್ಟದಲ್ಲಿರುವವರ ಬಗ್ಗೆ ಅನುಕಂಪ ಪಡುವ ಸ್ವಭಾವದವರು. ಸಹಾಯ ಯಾಚಿಸಿ ಬಂದವರಿಗೆ ಕಾನೂನಿನ ಚೌಕಟ್ಟನ್ನು ಮೀರದೆ ಸಾಧ್ಯವಾದಷ್ಟು ಸಹಾಯ ಮಾಡಲು ಪ್ರಯತ್ನಿಸುವ ಮನೋಭಾವ ಹೊಂದಿದವರು. ಈ ಗುಣಗಳೇ ಅವ ರಿಗೆ ಅವರ ಎಲ್ಲಾ ಹುದ್ದೆಗಳಲ್ಲೂ ಯಶಸ್ಸನ್ನು ತಂದು ಕೊಟ್ಟಿವೆ.

ಅವರು ಸಾಹಿತಿಗಳೂ ಹೌದು. ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಪುರಸ್ಕೃತ

ರಾಗಿದ್ದಾರೆ. ಸಾಹಿತ್ಯ ಶಕ್ತಿ ಮತ್ತು ಆಡಳಿತ ದಕ್ಷತೆ ಒಂದೇ ವ್ಯಕ್ತಿಯಲ್ಲಿ ಕಾಣು ವದು ಅಪರೂಪ. ಆ ಎರಡು ಶಕ್ತಿಗಳ ಸಂಗಮ ಇವರಲ್ಲಿ ಕಾಣಬಹುದು.

ಅವರು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ ಆ ಇಲಾಖೆಯ ವ್ಯವಸ್ಥೆಯನ್ನು ಉತ್ತಮವಾಗಿ ಮಾಡಿದ್ದಾರೆ. ಕನ್ನಡ ಎಲ್ಲಾ ಹಂತದಲ್ಲೂ ಆಡಳಿತ ಭಾಷೆ ಆಗಬೇಕೆಂಬ ಸರ್ಕಾರದ ಆದೇಶ ಕಾರ್ಯರೂಪಕ್ಕೆ ಬರಲು ಬಹಳ ಶ್ರಮಿಸಿದ್ದಾರೆ. ಆ ಉದ್ದೇಶವನ್ನು ಕಾರ್ಯರೂಪಕ್ಕೆ ತರುವ ಮಾರ್ಗದಲ್ಲಿ ಅಡ್ಡಿ ಬಂದವರನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ. ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿಸಿರುವ ಸಮಿತಿಯ ಸಭೆಗಳಲ್ಲಿ ಅವರ ನಿಲುವು ಯಾರೂ ಮೆಚ್ಚ ತಕ್ಕದ್ದೇ. ಇದರಿಂದಾಗಿ ಕನ್ನಡದ ಅಂಧಾಭಿಮಾನಿ ಎಂಬ ಅಪವಾದಕ್ಕೂ ಗುರಿ ಯಾಗಿದ್ದಾರೆ. ಹಲವು ವರ್ಷಗಳು ಆಚರಣೆಯಲ್ಲಿದ್ದ ಯಾವದೇ ಸಂಪ್ರದಾಯ ವನ್ನು ಬದಲಿಸುವ ನಿರ್ಧಾರ ಕೈಗೊಂಡಾಗ ಇಂಥ ಅಡಚಣೆಗಳನ್ನು ಎದುರಿಸು ವದು ಅನಿವಾರ್ಯ. ಆದರೆ ಇವಾವುವೂ ಅವರನ್ನು ಧೃತಿಗೆಡಿಸಲಿಲ್ಲ ಎಂಬುದೇ ಆಶ್ಚರ್ಯದ ಸಂಗತಿ.

ಕೆಲವರು ಭಾಷಾ ಸಮಸ್ಯೆಯ ಸಾಮಾನ್ಯ ಜ್ಞಾನವೂ ಇಲ್ಲದೆ ವಾದ ಮಾಡು ತ್ತಾರೆ. ಆಂಗ್ಲ ಭಾಷೆಯನ್ನು ಬಿಟ್ಟರೆ ನಮಗೆ ಮುಕ್ತಿಯೇ ಇಲ್ಲವೆಂದು ಭಾವಿಸು ತ್ತಾರೆ. ಇವೆಲ್ಲವೂ ಅವರ ಮೌಢ್ಯದ ಕುರುಹು. ಕನ್ನಡ ಆಡಳಿತ ಭಾಷೆ ಆಗ ಬೇಕೆನ್ನುವವರು ಅನ್ಯ ಭಾಷೆಗಳ ವಿರೋಧಿಗಳಲ್ಲ. ಆದರೆ ಆಡಳಿತ ಯಂತ್ರ ಇರು ವದು ಶ್ರೀಸಾಮಾನ್ಯನ ಯೋಗಕ್ಷೇಮಕ್ಕಾಗಿ. ಆತನಿಗೆ ತಿಳಿಯುವ ಭಾಷೆಯಲ್ಲಿ ವ್ಯವ ಹರಿಸಿದರೆ ನಮ್ಮ ನಿರ್ಧಾರ, ಕಾರ್ಯಕ್ರಮದ ವಿವರಗಳು, ಇವೇ ಮುಂತಾದುವುಗಳ ಪರಿಚಯ ಶ್ರೀ ಸಾಮಾನ್ಯನಿಗೆ ಆಗಿ ಆಡಳಿತ ನಡೆಸುವವರ ಮತ್ತು ಶ್ರೀಸಾಮಾನ್ಯರ ಮಧ್ಯೆ ಮಧುರ ಬಾಂಧವ್ಯ ಏರ್ಪಟ್ಟು ಕೆಲಸ ಕಾರ್ಯಗಳು ಸುಗಮವಾಗಿ ನಡೆಯಲು ಸಾಧ್ಯವಾಗುತ್ತದೆ. ಒಬ್ಬರನ್ನೊಬ್ಬರು ಅರಿತುಕೊಳ್ಳಲು ಸಾಧ್ಯವಾಗುತ್ತದೆ. ಇದು ಅವರ ಅಚಲ ನಂಬಿಕೆ. ನನ್ನದೂ ಇದೇ ನಿಲುವಾಗಿರುವದರಿಂದ ಈ ನಿಲುವು ನಮ್ಮಿಬ್ಬರನ್ನೂ ಒಂದುಗೂಡಿಸಿದೆ.

ವಿಧಾನ ಸೌಧದಿಂದ ಅವರ ನಿರ್ಗಮನ ಆಡಳಿತದಲ್ಲಿ ಕನ್ನಡ ಬಳಕೆಯ ಬಗ್ಗೆ ತೀವ್ರ ಕಳಕಳಿ ಹೊಂದಿದ್ದ ಒಬ್ಬ ಮಿತ್ರರನ್ನು ಕಳುಹಿಸಿಕೊಟ್ಟಂತಾಗಿದೆ. ಅವರು ಎಲ್ಲಿಯೇ ಇರಲಿ ಭಾಷೆಯ ಬಗ್ಗೆ ಅವರ ಅಭಿಮಾನ ಕುಂದುವುದಿಲ್ಲ.

ಅವರು ಒಂದು ಹೊಸ ವಿಶ್ವವಿದ್ಯಾನಿಲಯದ ರೂಪುರೇಷೆಗಳನ್ನು ನಿರ್ಧರಿಸುವ ಹಿರಿಯ ಜವಾಬ್ದಾರಿ ಹೊತ್ತಿದ್ದಾರೆ. ಅದನ್ನು ಯಶಸ್ವಿಯಾಗಿ ಮಾಡುವ ಶಕ್ತಿ ಯನ್ನು ಭಗವಂತ ಅವರಿಗೆ ನೀಡಲೆಂದು ಹಾರೈಸುತ್ತೇನೆ.

# ಕನ್ನಡದ ಜಯತೀರ್ಥರು

**ದೇಶಹಳ್ಳಿ ಜಿ. ನಾರಾಯಣ**
ಮಾಜಿ ಅಧ್ಯಕ್ಷ, ಕನ್ನಡ ಸಾಹಿತ್ಯ ಪರಿಷತ್ತು

ಶ್ರೀ ಜಯತೀರ್ಥ ರಾಜಪುರೋಹಿತರು ಸರ್ಕಾರದ ಉನ್ನತ ಅಧಿಕಾರಿಗಳೂ ಸಾಹಿತಿಗಳೂ ಭಾರತದ ಸ್ವಾತಂತ್ರ್ಯಕ್ಕಾಗಿ ಜೈಲುವಾಸ ಅನುಭವಿಸಿದವರೂ ಅಲ್ಲದೆ ಕನ್ನಡದ ಬಗ್ಗೆ ಅಪಾರ ಕಳಕಳಿಯುಳ್ಳವರೂ ಆಗಿದ್ದಾರೆ. ಸಾಹಿತ್ಯ ಪರಿಷತ್ತಿನ ರಾಯಚೂರು ಜಿಲ್ಲಾ ಸಮಿತಿಯನ್ನು ರಚಿಸುವದಕ್ಕಾಗಿ 1969ರಲ್ಲಿ ನಾನು ರಾಯಚೂರಿಗೆ ಹೋಗಿದ್ದಾಗ ಅಲ್ಲಿ ಅವರ ನನ್ನ ಪ್ರಥಮ ಭೇಟಿಯಾಯಿತು. ಆಗ ಅವರು ರಾಯಚೂರಿನ ಮುನಿಸಿಪಲ್ ಕಮಿಷನರ್ ಆಗಿದ್ದರು. ಆ ದಿನ ಸಂಜೆ ರಾಯಚೂರು ಕರ್ನಾಟಕ ಸಂಘದ ಆಶ್ರಯದಲ್ಲಿ ಒಂದು ಬಹಿರಂಗ ಸಭೆ ನಡೆಯಿತು. ಸಾವಿರಾರು ಜನ ಆ ಸಭೆಗೆ ಬಂದಿದ್ದರು. ರಾಜಪುರೋಹಿತರೂ ಸಭೆಗೆ ದಯಮಾಡಿಸಿದ್ದರು. ಅವರು ವೇದಿಕೆಯ ಮೇಲೆ ಕುಳಿತುಕೊಳ್ಳಬೇಕೆಂದು ವ್ಯವಸ್ಥಾಪಕರು ಎಷ್ಟೇ ಕೇಳಿಕೊಂಡರೂ ಅವರು ಅದಕ್ಕೆ ಒಪ್ಪದೆ ವೇದಿಕೆಯಿಂದ ಕೆಳಗೆ ಇಳಿದು ಹೋಗಿ ಇತರರ ಸಂಗಡ ನೆಲದ ಮೇಲೆ ಕುಳಿತುಕೊಂಡು ಕಡೆಯವರೆಗೂ ಇದ್ದು ಎಲ್ಲರ ಉಪನ್ಯಾಸಗಳನ್ನು ಕೇಳಿ ತರುವಾಯ ಪರಿಷತ್ತಿನ ಯೋಜನೆಯ ಬಗ್ಗೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಆ ಜಿಲ್ಲೆಯ ಪ್ರತಿಯೊಬ್ಬ ಸಾಹಿತಿಯ, ಕವಿಯ ಪರಿಚಯ ರಾಜಪುರೋಹಿತರಿಗಿತ್ತು. ಅಲ್ಲಿ ಯಾರೂ ಯಾವ ಪುಸ್ತಕ ಬರೆಯಲಿ ಅದಕ್ಕೆ ಇವರೇ ಮುನ್ನುಡಿ ಬರೆಯಬೇಕು ; ಸಾಹಿತ್ಯ ಸಂಸ್ಕೃತಿಗೆ ಸಂಬಂಧಪಟ್ಟ ಯಾವ ಸಭೆ ಸಮಾರಂಭಗಳು ನಡೆಯಲಿ ಅದರಲ್ಲಿ ಇವರೇ ಪ್ರಮುಖ ಪಾತ್ರ ವಹಿಸಬೇಕು ; ಆ ಊರಿಗೆ ಯಾವ ಸಾಹಿತಿ ಬಂದರೂ ಇವರ ಮನೆಯಲ್ಲಿಯೆ ಅವರಿಗೆ ಊಟೋಪಚಾರ ನಡೆಯಬೇಕು. ಕನ್ನಡದ ಬಗ್ಗೆ, ಕನ್ನಡ ಸಾಹಿತಿಗಳ ಬಗ್ಗೆ, ಕನ್ನಡ ಕೆಲಸ ಮಾಡುವವರ ಬಗ್ಗೆ ಇವರಿಗೆ ಅಷ್ಟೊಂದು ಕಳಕಳಿ ಇತ್ತು.

ಅಲ್ಲಿಂದ ಮುಂದೆ ಇವರಿಗೆ ಬಳ್ಳಾರಿ ಜಿಲ್ಲೆಗೆ ವರ್ಗವಾಯಿತು. ಅಲ್ಲಿ ಇವರು ಬೆಟರ್‌ಮೆಂಟ್ ಲೆವಿ ಆಫೀಸರ್ ಮತ್ತು ವಿಶೇಷ ಜಿಲ್ಲಾಧಿಕಾರಿ ಆಗಿ ಕೆಲಸ ಮಾಡತೊಡಗಿದರು. ಅಲ್ಲಿಯೂ ಅವರ ಬಳಗವೆಂದರೆ ಆ ಜಿಲ್ಲೆಯಲ್ಲಿದ್ದ ಕವಿಗಳೂ

ಸಾಹಿತಿಗಳೂ ಮತ್ತು ಕಾರ್ಯಕರ್ತರು. ಅಲ್ಲಿ ಎರಡು ಸಲ ಜಿಲ್ಲಾ ಸಾಹಿತ್ಯ ಸಮ್ಮೇಳನ ಏರ್ಪಡಿಸಿದರು. ನಾನೂ, ಅವರೂ ಮತ್ತು ನನ್ನ ಸ್ನೇಹಿತರು ಒಮ್ಮೆ ಆದವಾನಿಗೆ ಕನ್ನಡ ಪ್ರಚಾರಕ್ಕೆ ಹೋಗಿದ್ದು ಹಿಂತಿರುಗಿ ಬಂದು ನಾವು ರಾತ್ರಿ ಬಳ್ಳಾರಿ ಪ್ರವಾಸಿ ಮಂದಿರದಲ್ಲಿ ತಂಗಿದ್ದೆವು. ರಾಜಪುರೋಹಿತರು ಬೆಳಿಗ್ಗೆ ಪ್ರವಾಸಿ ಮಂದಿರಕ್ಕೆ ಬಂದು ಕನ್ನಡ ಪ್ರಚಾರದ ಬಗ್ಗೆ ನಮ್ಮೊಡನೆ ಮತ್ತೆ ಸಾಕಷ್ಟು ಚರ್ಚಿಸಿ ತರುವಾಯ ಬಳ್ಳಾರಿಯಲ್ಲಿದ್ದ ತಮ್ಮ ಮನೆಗೆ ನಮ್ಮನ್ನು ಆಹ್ವಾನಿಸಿದರು. ಇಂಥ ಅನುಭವ ನನ್ನ ಹಾಗೇ ಎಷ್ಟೋ ಜನರಿಗೆ ಆಗಿದೆ.

*

ಬಳ್ಳಾರಿಯಿಂದ ಮುಂದೆ ಅವರು ಮೈಸೂರಿಗೆ ವರ್ಗವಾಗಿ ಹೋಗಿ ಕೆಲಕಾಲ ಕಪಿನಿ ನೀರಾವರಿ ಯೋಜನೆ ಉಪ ಆಡಳಿತಾಧಿಕಾರಿಯಾಗಿ ತರುವಾಯ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪರೀಕ್ಷಾ ನಿಯಂತ್ರಣಾಧಿಕಾರಿಯಾಗಿ ಕೆಲಸಮಾಡಿ ಎಲ್ಲರ ಮೆಚ್ಚುಗೆಗೂ ಪಾತ್ರರಾದರು. ಆದರೂ ಮೈಸೂರಿನಲ್ಲಿ ಅವರು ಹೆಚ್ಚು ಕಾಲ ನಿಲ್ಲ ಲಿಲ್ಲ. ಅಲ್ಲಿಂದ ಮುಂದೆ ಅವರು ಚಿತ್ರದುರ್ಗ ಜಿಲ್ಲಾ ವಿಶೇಷ ಜಿಲ್ಲಾಧಿಕಾರಿಯಾಗಿ ನೇಮಕವಾದರು. ಅದೇ ಕಾಲದಲ್ಲಿ ಪರಿಷತ್ತಿನ ಚಿತ್ರದುರ್ಗ ಜಿಲ್ಲಾ ಸಮಿತಿಯ ಆಶ್ರಯದಲ್ಲಿ ಚಿತ್ರದುರ್ಗದಲ್ಲಿ ಜನಪದ ಕಲಾಮೇಳ ನಡೆಯಿತು. ಅದರ ವ್ಯವಸ್ಥೆ ಮಾಡುವದರಲ್ಲಿ ರಾಜಪುರೋಹಿತರದೇ ಪ್ರಧಾನ ಪಾತ್ರ. ಮೂರು ದಿನಗಳ ಈ ಕಲಾಮೇಳ ತುಂಬ ಯಶಸ್ವಿಯಾಗಿ ನಡೆಯಿತು. ಕಡೆಯ ದಿನ ಪರಸ್ಥಳದಿಂದ ಬಂದಿದ್ದ ಸಾಹಿತಿಗಳಿಗೆ ಇವರ ಮನೆಯಲ್ಲಿಯೇ ಆತಿಥ್ಯ ಜರುಗಿತು. ರಾಜಪುರೋ ಹಿತರು ಕರ್ನಾಟಕದ ಅನೇಕ ನಗರಗಳಲ್ಲಿ ಸರ್ಕಾರೀ ಸೇವೆ ಸಲ್ಲಿಸಿದ್ದಾರೆ. ಆದರೆ ಅವರ ಹೆಸರು ನಾಡಿನಾದ್ಯಂತ ಬೆಳಕಿಗೆ ಬಂದದ್ದು ಅವರು ಚಿತ್ರದುರ್ಗದಲ್ಲಿದ್ದಾಗ. ಕನ್ನಡ ಆಡಳಿತ ಭಾಷೆಯಾಗಬೇಕು–ಎಂಬ ಕೂಗು ಎಲ್ಲೆಡೆಯಲ್ಲೂ ಮೊಳಗುತ್ತಿತ್ತು. ಪತ್ರಿಕೆಗಳಲ್ಲಿ ತಿಂಗಳಲ್ಲಿ ಎಂಟು–ಹತ್ತು ದಿನವಾದರೂ ಆಡಳಿತ ಭಾಷೆಯು ಪ್ರಸ್ತಾಪ ವಾಗುತ್ತಿತ್ತು. ಇಂಥ ಸಂದರ್ಭದಲ್ಲಿ ಶ್ರೀ ರಾಜಪುರೋಹಿತರು ಚಿತ್ರದುರ್ಗ ಜಿಲ್ಲೆಯ ವಿಶೇಷ ಜಿಲ್ಲಾಧಿಕಾರಿಯಾಗಿ ಕನ್ನಡದಲ್ಲಿ ತೀರ್ಪನ್ನು ಬರೆದು ಪ್ರಕಟಿಸಿ ದರು. ಈ ತೀರ್ಪಿಗೆ ಆಗ ಎಲ್ಲೆಲ್ಲೂ ವಿಶೇಷ ಪ್ರಾಮುಖ್ಯ ದೊರೆಯಿತು. ಪತ್ರಿಕೆ ಗಳು ಇವರ ದಿಟ್ಟ ಪ್ರಯತ್ನವನ್ನೂ ಇವರ ಕನ್ನಡಾಭಿಮಾನವನ್ನೂ ಮನಸಾರೆ ಹೊಗಳಿ ಬರೆದವು. ಇವರ ಕನ್ನಡದ ಈ ಮೊದಲನೇ ತೀರ್ಪುಗಳನ್ನು ಮುಂದೆ ಮೈಸೂರು ವಿಶ್ವವಿದ್ಯಾನಿಲಯದವರು ಪುಸ್ತಕ ರೂಪದಲ್ಲಿ ಅಚ್ಚುಮಾಡಿಸಿ ಪ್ರಕಟಿಸಿ ದರು. ಈ ತೀರ್ಪಿನ ಪರಿಣಾಮವಾಗಿ ಇತರ ಜಿಲ್ಲಾಧಿಕಾರಿಗಳೂ ನ್ಯಾಯಾಧೀಶರೂ ಕನ್ನಡದಲ್ಲೇ ತಮ್ಮ ತೀರ್ಪುಗಳನ್ನು ಬರೆಯಲು ಪ್ರೇರಣೆ ಪಡೆದರು. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಎಷ್ಟೋ ಜನ ಕನ್ನಡ ಬಲ್ಲ ಜಿಲ್ಲಾಧಿಕಾರಿಗಳೂ

ನ್ಯಾಯಾಧೀಶರೂ ಇದ್ದರೂ ಯಾರೂ ಕನ್ನಡದಲ್ಲಿ ತೀರ್ಪನ್ನು ನೀಡುವ ಸಾಹಸ ಮಾಡಿರಲಿಲ್ಲ. ರಾಜಪುರೋಹಿತರು ಇತರರಿಗೆ ಮೇಲ್ಪಂಕ್ತಿಯಾದರು. ಸರ್ಕಾರ ಇವರಿಗೆ ಗೌರವ ಬಹುಮಾನ ನೀಡಿತು.

ಅಲ್ಲಿಂದ ಇವರು ಭಾಷಾ ಮತ್ತು ಕನ್ನಡ ಅಭಿವೃದ್ಧಿ ನಿರ್ದೇಶಕರಾಗಿ ಬೆಂಗಳೂರಿಗೆ ಬಂದರು. ಶ್ರೀ ವೀರೇಂದ್ರ ಪಾಟೀಲರು ಮುಖ್ಯಮಂತ್ರಿಯಾಗಿದ್ದಾಗ ಆಡಳಿತದ ಎಲ್ಲ ಹಂತಗಳಲ್ಲೂ ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೆ ತರಲು ಯಾವ ಯಾವ ಕ್ರಮ ಕೈಗೊಳ್ಳಬೇಕು ಎಂಬುದನ್ನು ಸೂಚಿಸಲು ಕನ್ನಡ ಆಡಳಿತ ಭಾಷಾ ಸಮಿತಿಯನ್ನು ಸರ್ಕಾರ ರಚಿಸಿತ್ತು. ಅದರ ವರದಿ ಕಾರ್ಯರೂಪಕ್ಕೆ ಬರದೇ ಎಲ್ಲೋ ಮೂಲೆಯಲ್ಲಿ ಅಡಗಿಕೊಂಡಿತ್ತು. ರಾಜಪುರೋಹಿತರು ನಿರ್ದೇಶಕರಾದ ಮೇಲೆ ಆ ವರದಿಯ ಅಂಶಗಳು ಒಂದೊಂದಾಗಿ ಆಚರಣೆಗೆ ಬರಲಾರಂಭಿಸಿದವು. ರಾಜ್ಯಮಟ್ಟದ ಅಧಿಕಾರೇತರರ ಸಮಿತಿಯೊಂದು ವಿದ್ಯಾಸಚಿವರ ಅಧ್ಯಕ್ಷತೆಯಲ್ಲಿ ಮೂರು ತಿಂಗಳಿಗೊಮ್ಮೆ ಸಭೆ ಸೇರುತ್ತಿತ್ತು. ಆ ಸಮಿತಿಗೆ ಮೊದಲು ಶಿಕ್ಷಣ ಇಲಾಖೆಯ ಕಮಿಷನರು ಕಾರ್ಯದರ್ಶಿಗಳಾಗಿದ್ದರು. ತರುವಾಯ ಭಾಷಾ ಮತ್ತು ಕನ್ನಡ ಅಭಿವೃದ್ಧಿ ನಿರ್ದೇಶನಾಲಯದ ನಿರ್ದೇಶಕರಾದ ಶ್ರೀ ರಾಜಪುರೋಹಿತರು ಕಾರ್ಯದರ್ಶಿಯಾದರು. ಇವರು ಕಾರ್ಯದರ್ಶಿಯಾಗಿ ಬಂದ ಮೇಲೆ ಸಮಿತಿಯ ಚಟುವಟಿಕೆಗೆ ಹೆಚ್ಚಿನ ಕ್ರಿಯಾಶಕ್ತಿ ಬಂತು. ಇಲಾಖೆಗಳಲ್ಲಿ ಕನ್ನಡದ ಬಳಕೆ ಹೆಚ್ಚುತ್ತಾ ಹೋಯಿತು. ಸಮಿತಿಯ ಸದಸ್ಯರು ಏನಾದರೂ ಹೊಸ ಸಲಹೆಗಳನ್ನು ಕೊಡೋಣ ಎನ್ನುತ್ತಿದ್ದಂತೆಯೇ ಶ್ರೀ ರಾಜಪುರೋಹಿತರು ಪುಟಗಟ್ಟಲೆ ಟೈಪು ಮಾಡಿದ ತಮ್ಮ ಸಲಹೆಗಳನ್ನು ತಂದು ಸಮಿತಿಯ ಮುಂದಿಡುತ್ತಿದ್ದರು. ಆ ಸಲಹೆಗಳಾದರೊ ಒಂದು ಮತ್ತೊಂದನ್ನು ಮೀರಿಸುವಂಥವು. ಒಮ್ಮೊಮ್ಮೆ ಸದಸ್ಯರಿಂದ ಮೊದಲೇ ಸಲಹೆಗಳು ಬಂದಿದ್ದಲ್ಲಿ ಅವುಗಳಿಗೆ ತಕ್ಕ ಉತ್ತರ ಸಿದ್ಧಪಡಿಸಿ ಸಮಿತಿಯ ಗಮನಕ್ಕೆ ತರುತ್ತಿದ್ದರು. ಇವರ ಸತತ ಪ್ರಯತ್ನದ ಫಲವಾಗಿ ಜಿಲ್ಲಾ ಮಟ್ಟದ ಹಾಗೂ ತಾಲ್ಲೂಕು ಮಟ್ಟದ ಸರ್ಕಾರೀ ಕಛೇರಿಗಳಲ್ಲಿ ಕನ್ನಡದ ಬಳಕೆ ಮಿಂಚಿನ ವೇಗದಲ್ಲಿ ಶುರುವಾಯಿತು. ಕನ್ನಡ ಭಾಷಾ (ವಿಧಾಯಿ) ಆಯೋಗದ ಕೆಲಸವು ಇವರ ನಿರ್ದೇಶಕತ್ವದಲ್ಲೇ ನಡೆಯುತ್ತಿತ್ತು. ಆಮೇಲೆ ಅಕಾಡೆಮಿಗಳ ಕಾರ್ಯನಿರ್ವಹಣೆಯೂ ಇವರ ಪಾಲಿಗೇ ಬಂತು. ಈ ಎಲ್ಲಾ ವಿಭಾಗಗಳಿಗೂ ಕಛೇರಿಗಳಿಗೂ ಸಲಕರಣೆಗಳನ್ನು ಒದಗಿಸುವುದೇ ಇವರಿಗೆ ದೊಡ್ಡ ಸಮಸ್ಯೆಯಾಯಿತು. ರಾಜಪುರೋಹಿತರು ಬಹಳ ತಾಳ್ಮೆಯಿಂದ, ಉಪಾಯದಿಂದ ಎಲ್ಲರಿಗೂ ಮೆಚ್ಚುಗೆಯಾಗುವ ರೀತಿಯಲ್ಲಿ ಸ್ಥಳಾನುಕೂಲ ಒದಗಿಸಿ ಕಛೇರಿಗಳನ್ನು ತೆರೆದರು. ಈ ಸಂದರ್ಭದಲ್ಲಿ

ಕನ್ನಡದ ಕೆಲಸ ಸ್ವಲ್ಪ ಹಿಂದಕ್ಕೆ ಸರಿದಂತೆ ಕಾಣುತ್ತಿತ್ತು. ಅಷ್ಟರಲ್ಲಿ ಅಕಾಡೆಮಿಗಳು ಮತ್ತು ಭಾಷಾ ನಿರ್ದೇಶನಾಲಯ ಬೇರೆ ಬೇರೆ ವ್ಯವಸ್ಥೆಗೆ ಒಳಪಟ್ಟು ಇವರಿಂದ ಬಿಡುಗಡೆಯಾದವು. ಆಗ ರಾಜಪುರೋಹಿತರು ತಮ್ಮ ಪೂರ್ತ ಗಮನವನ್ನು ಆಡಳಿತ ಭಾಷೆಯ ಕಡೆಗೆ ಕೊಡಲು ಅನುಕೂಲವಾಯಿತು. ಎಲ್ಲಾ ಜಿಲ್ಲೆಗಳಿಗೂ ಭೇಟಿಕೊಟ್ಟರು. ಅಧಿಕಾರಿಗಳಿಂದ ಕೂಡಿದ ನೂರಾರು ಸಭೆಗಳನ್ನು ಉದ್ದೇಶಿಸಿ ಮಾತನಾಡಿ ಸರ್ಕಾರೀ ಕಾರ್ಯಾಲಯಗಳಲ್ಲಿ ಕನ್ನಡ ಜಾರಿಗೆ ತರಲು ಇರುವ ಅಡಚಣೆಗಳನ್ನು ನಿವಾರಿಸಿದರು. ಸರ್ಕಾರೀ ನೌಕರರಿಗೆ ತರಬೇತಿ ಕೇಂದ್ರಗಳನ್ನು ತೆಗೆದರು. ಕನ್ನಡ ಬೆರಳಚ್ಚುಗಾರರಿಗೆ ಪ್ರೋತ್ಸಾಹಧನ ನೀಡಿದರು. ಮಾದರಿ ಪತ್ರ ವ್ಯವಹಾರ ನಮೂನೆಗಳನ್ನು ಪ್ರಕಟಿಸಿದರು. ಕನ್ನಡದಲ್ಲಿ ಪತ್ರ ವ್ಯವಹಾರ ನಡೆಸುವ ನೌಕರರಿಗೆ ಬಹುಮಾನ ಯೋಜನೆ ಜಾರಿಗೆ ತಂದರು. ಬೇರೆ ಬೇರೆ ಮಟ್ಟಗಳಲ್ಲಿ ಕನ್ನಡವನ್ನು ಬಳಕೆಗೆ ತರಲು ಅಡಚಣೆಗಳುಂಟಾದರೆ ಸಂಬಂಧಪಟ್ಟ ಮೇಲಧಿಕಾರಿಗಳ ಗಮನಕ್ಕೆ ತಂದು ಅದಕ್ಕೆ ಪರಿಹಾರೋಪಾಯವನ್ನು ಕಂಡುಹಿಡಿಯುತ್ತಿದ್ದರು. ಮೊದಲು ಭಾಷಾ ಮತ್ತು ಕನ್ನಡ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಬರುತ್ತಾರೆ ಎಂದರೆ ಸರ್ಕಾರಿ ಪ್ರವಾಸಿ ಮಂದಿರಗಳಲ್ಲಿ ಜಾಗವಿದ್ದರೂ ಇಲ್ಲ ಎನ್ನುತ್ತಿದ್ದ ಕಾಲ ಒಂದಿತ್ತು. ಈಗ ರಾಜಪುರೋಹಿತರು ಬರುತ್ತಾರೆ ಎಂದರೆ ಜಿಲ್ಲಾಧಿಕಾರಿಗಳು ಮೊದಲುಗೊಂಡು ಎಲ್ಲ ಅಧಿಕಾರಿಗಳು ವಿಶೇಷ ಗೌರವ ತೋರಿಸುವದರ ಜೊತೆಗೆ ತಮ್ಮ ತಮ್ಮ ಇಲಾಖೆಗಳಲ್ಲಿ ಕನ್ನಡವನ್ನು ಬಳಕೆಗೆ ತರಲು ಎಲ್ಲರೂ ಉತ್ಸುಕರಾದರು. ದಿನ ಬೆಳಗಾದರೆ ರಾಜಪುರೋಹಿತರ ಕನ್ನಡ ಚಟುವಟಿಕೆಗಳೇ ಕೆಲವು ತಿಂಗಳು ಪತ್ರಿಕೆಗಳಿಗೆ ಶೀರ್ಷಿಕೆಯಾಗುತ್ತಿದ್ದುವು. ಇದು ಕೆಲವರಿಗೆ ಅಸೂಯೆಯನ್ನುಂಟು ಮಾಡಿತು. ಇದು ತೋರು ಬೊಂಬೆಯೆಂದು ಕೆಲವು ಅಧಿಕಾರಿಗಳು ಎಣಿಸಿದ್ದರು. ರಾಜಪುರೋಹಿತರ ಈ ದಿಟ್ಟತನವನ್ನು ನೋಡಿ ದಂಗಾದವರು ಕೆಲವರು. ಇವರು ಬೇರೆ ಕಡೆ ಯಾವಾಗ ವರ್ಗವಾಗುತ್ತಾರೆ ಎಂದು ಹಲವರು ದಿನಗಳನ್ನು ಎಣಿಸತೊಡಗಿದರು. ಕೆಲವರಂತೂ ಕನ್ನಡ ದೇಶದಲ್ಲಿ ಕನ್ನಡ ಆಡಳಿತ ಭಾಷೆಯಾಗಬೇಕಾದ್ದು ಸಹಜ. ಅದಕ್ಕೇಕೆ ಒಂದು ನಿರ್ದೇಶನಾಲಯ, ಅದಕ್ಕೇಕೆ ಒಬ್ಬ ಅಧಿಕಾರಿ ಎಂದು ಮೂಗು ಮುರಿದವರೂ ಉಂಟು. ಇದನ್ನೆಲ್ಲಾ ದೂರದಿಂದ ನೋಡುತ್ತಿದ್ದ ನಾನು ಒಮ್ಮೆ ಡಾ. ಹಾ. ಮಾ. ನಾಯಕರೊಡನೆ "ಈ ರಾಜಪುರೋಹಿತರು ಬಹಳ ಕಾಲ ಈ ಇಲಾಖೆಯಲ್ಲಿ ಇರುವಂತೆ ಕಾಣುವುದಿಲ್ಲ—ಏನಾದರೂ ನೆಪಹೂಡಿ ಇವರನ್ನು ಬೇರೆ ಕಡೆ ಹೊತ್ತು ಹಾಕುತ್ತಾರೆ" ಎಂದು ಹೇಳಿದ್ದು ಈಗಲೂ ನನಗೆ ಜ್ಞಾಪಕವಿದೆ. ಹಾಗೆ ಅಂದುಕೊಂಡ ಎರಡು ಮೂರು ತಿಂಗಳಲ್ಲೇ ಪ್ರೊಮೋಷನ್ ಕೊಟ್ಟ ನೆಪ ಮಾಡಿ ಅವರನ್ನು ಅಲ್ಲಿಂದ ಕದಲಿಸಿ ಶಿಕ್ಷಣ ಇಲಾಖೆ ಡೆಪ್ಯುಟಿ ಕಾರ್ಯದರ್ಶಿಗಳನ್ನಾಗಿ ಮಾಡಿ ವಿಧಾನ ಸೌಧಕ್ಕೆ ಕಳಿಸಿದರು.

ಸರಕಾರೀ ನೌಕರರಲ್ಲಿ ಎಷ್ಟೋ ಜನ ಕಥೆ, ಕವನ, ಕಾದಂಬರಿ ಬರೆಯಬಹುದು. ಆದರೆ ಅವರಿಗೆಲ್ಲ ಕನ್ನಡದ ಬಗ್ಗೆ ನಿಜವಾದ ಕಳಕಳಿ ಇದೆಯೆಂದು ಹೇಳುವುದಕ್ಕಾಗುವುದಿಲ್ಲ. ರಾಜಪುರೋಹಿತರಂತೆ ಎಲ್ಲರಿಗೂ ನಿಜವಾದ ಕಳಕಳಿ ಇದ್ದರೆ ಎಲ್ಲ ಹಂತಗಳಲ್ಲೂ ಕನ್ನಡ ಆಡಳಿತ ಭಾಷೆಯಾಗಿ ಬಳಕೆಗೆ ಬರಲು ಹೆಚ್ಚು ಕಾಲ ಹಿಡಿಯುವುದಿಲ್ಲ. ರಾಜಪುರೋಹಿತರ ಕನ್ನಡ ಪ್ರೇಮ ಅನುಕರಣೀಯ, ಇತರರಿಗೆ ಮೇಲ್ಪಂಕ್ತಿ.

ಈಗ ಗುಲ್ಬರ್ಗದಲ್ಲಿ ಸ್ಥಾಪನೆಯಾಗಲಿರುವ ನೂತನ ವಿಶ್ವವಿದ್ಯಾಲಯದ ತಳಪಾಯ ಭದ್ರಪಡಿಸಲು ರಾಜ್ಯ ಸರ್ಕಾರ ರಾಜಪುರೋಹಿತರನ್ನು ವಿಶೇಷಾಧಿಕಾರಿಯಾಗಿ ನೇಮಕಮಾಡಿದೆ. ಅವರು ಇಷ್ಟರಲ್ಲೇ ರಾಜಧಾನಿಯಿಂದ ದೂರದಲ್ಲಿರುವ ಗುಲ್ಬರ್ಗ ನಗರಕ್ಕೆ ಪ್ರಯಾಣ ಬೆಳೆಸಲಿದ್ದಾರೆ. ಈ ಸಂದರ್ಭದಲ್ಲಿ ನಮ್ಮ ಕರ್ತವ್ಯ ಇಷ್ಟೆ: ಈ ರಾಜಪುರೋಹಿತರಿಗೆ ಉಳಿದ ಕನ್ನಡ ಕುಲ ಪುರೋಹಿತರೆಲ್ಲ ಸೇರಿ ಶುಭ ಹಾರೈಸಿ ಸಂತೋಷದಿಂದ ಬೀಳ್ಕೊಡೋಣ.

ಶ್ರೀ ರಾಜಪುರೋಹಿತರು ಎಲ್ಲೇ ಇರಲಿ ಅವರಲ್ಲಿ ಮನೆಮಾಡಿಕೊಂಡಿರುವ ಕನ್ನಡತನದಿಂದ ಕನ್ನಡಕ್ಕೆ ಕನ್ನಡನಾಡಿಗೆ ಕೀರ್ತಿ ತರುತ್ತಾರೆ ಎಂಬುದರಲ್ಲಿ ಸಂಶಯವೇ ಇಲ್ಲ.

# ಒಬ್ಬ ಕನ್ನಡದ ಕಾವಲುಗಾರ

ಡಾ. ಹಾ. ಮಾ. ನಾಯಕ

ಸ್ನೇಹಿತರನ್ನು ಕುರಿತು ಬರೆಯುವದು ಯಾವಾಗಲೂ ಕಷ್ಟ. ತುಂಬ ಒಳ್ಳೆಯವರಾದ ಸ್ನೇಹಿತರ ವಿಷಯದಲ್ಲಿ ಈ ಕಷ್ಟ ಇನ್ನೂ ಹೆಚ್ಚಿನದು. ಅವರ ಒಳ್ಳೆಯುತನಗಳನ್ನು ಬರೆದರೆ ಎಷ್ಟೋ ಜನರಿಗೆ ಅದೆಲ್ಲ ಉತ್ಪ್ರೇಕ್ಷೆ ಎಂದು ತೋರಬಹುದು; ಬರೆಯದಿದ್ದರೆ ಸ್ನೇಹಿತರಿಗೆ ನ್ಯಾಯ ದೊರೆಯುವದಿಲ್ಲ. ನನ್ನ ಪ್ರಿಯ ಮಿತ್ರರಾದ ಜಯತೀರ್ಥ ರಾಜಪುರೋಹಿತರ ಬಗೆಗೆ ಪ್ರಕಟಿಸಲಾಗುತ್ತಿರುವ ಪುಸ್ತಕಕ್ಕೆ ಈ ನಾಲ್ಕು ಮಾತು ಬರೆಯುತ್ತಿರುವಾಗ ನಾನು ಇಂಥ ಸಂದಿಗ್ಧಕ್ಕೆ ಒಳಗಾಗಿದ್ದೇನೆ. ರಾಜಪುರೋಹಿತರನ್ನು ಬಲ್ಲವರಿಗೆಲ್ಲ ಇದು ಚೆನ್ನಾಗಿ ಅರ್ಥವಾಗುತ್ತದೆ.

ರಾಜಪುರೋಹಿತರು ಮಾಸ್ತಿ ಪರಂಪರೆಗೆ ಸೇರಿದವರು. ವೃತ್ತಿಯಲ್ಲಿ ಅವರು ಸರ್ಕಾರದ ಒಬ್ಬ ಉನ್ನತ ಅಧಿಕಾರಿ ; ಪ್ರವೃತ್ತಿಯಲ್ಲಿ ಕನ್ನಡದ ಒಬ್ಬ ಲೇಖಕ, ಕನ್ನಡದ ಹಿತಚಿಂತಕ. ಎರಡೂ ಕ್ಷೇತ್ರಗಳಲ್ಲಿ ಅವರು ಸಮಾನಯಶಸ್ಸು ಗಳಿಸಿದ್ದಾರೆ. ಐ.ಎ.ಎಸ್. ಅಧಿಕಾರಿಯಾದ ಅವರಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ದೊರಕಿದೆ. ತಾವು ಹೋದಲ್ಲೆಲ್ಲ ಅವರು ಕನ್ನಡದ ಕಾರಣವನ್ನು ಅಂಟಿಸಿಕೊಂಡು ಶ್ರಮಿಸಿದ್ದಾರೆ. ಅನೇಕ ಸಂದರ್ಭಗಳಲ್ಲಿ ಅವರು ಮೇಲಧಿಕಾರಿಗಳು ಚಡಪಡಿಸುವಂತೆ ಮಾಡಿದ್ದಾರೆ. ಆದರೆ ಅದು ಕನ್ನಡಕ್ಕಾಗಿ ಎಂಬುದು ಅವರ ಸಮಾಧಾನ ; ವ್ಯಕ್ತಿಗಳಿಗಿಂತ ಕಾರಣಗಳು ಮಹತ್ವದವು ಎಂಬುದು ಅವರ ನಿರ್ಧಾರ. ಕಾರಣಗಳ ಬೆನ್ನು ಹತ್ತಿ ವ್ಯಕ್ತಿಗಳನ್ನು ನಿರ್ಲಕ್ಷಿಸುವವರಿಗೆ ಯಶಸ್ಸು ದೊರೆಯುವದು ದುರ್ಲಭ. ರಾಜಪುರೋಹಿತರು ಈ ಸತ್ಯದ ಫಲವನ್ನು ಚೆನ್ನಾಗಿ ಉಂಡಿದ್ದಾರೆ.

ದಶಕಕ್ಕೂ ಹಿಂದೆ ಅವರು ಬಳ್ಳಾರಿಯಲ್ಲಿ ಕೆಲಸ ಮಾಡುತ್ತಿದ್ದಾಗ ಅಲ್ಲಿನ ನಾಡಹಬ್ಬ ಕಾರ್ಯಕ್ರಮಕ್ಕೆ ಬರಬೇಕೆಂದು ಒಮ್ಮೆ ಅದರ ವ್ಯವಸ್ಥಾಪಕರು ನನ್ನನ್ನು ಆಹ್ವಾನಿಸಿದ್ದರು. ಆದರೆ ನನಗೆ ಅಲ್ಲಿ ಹೋಗುವುದು ಸಾಧ್ಯವಾಗಲಿಲ್ಲ. ಅದರಿಂದ ನಿರಾಶರಾಗಿ ಆ ಆಹ್ವಾನಕ್ಕೆ ಕಾರಣರಾಗಿದ್ದ ರಾಜಪುರೋಹಿತರು ನನಗೆ

ಬರೆದಿದ್ದರು. ಅದರಲ್ಲಿ ಅವರು ಒಬ್ಬ ಲೇಖಕರಾಗಿ ಸೋದರ ಲೇಖಕನೊಬ್ಬನ ಬಗೆಗೆ ಪ್ರೀತ್ಯಾದರಗಳನ್ನು ತುಂಬಿದ್ದರು. ಮುಂದೆ ಕೆಲವು ತಿಂಗಳುಗಳಲ್ಲಿ ಒಂದು ಸಲ ಅವರು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರತ್ಯಕ್ಷರಾಗಿ ತಮ್ಮ ಪರಿಚಯ ಹೇಳಿಕೊಂಡರು. ಮೊದಲ ಭೇಟಿಗೇ ನಾವು ಪರಸ್ಪರ ಪ್ರೀತಿಸುವಂತಾದೆವು. ರಾಜಪುರೋಹಿತರ ವ್ಯಕ್ತಿತ್ವ ಮತ್ತು ಮನಸ್ಸು ಆ ಬಗೆಯವು. "ಮುಟ್ಟಿದರೇ ರಕ್ತ ಸುರಿಯಬಹುದೇನೋ ಎನ್ನಿಸುವ ತುಂಬು ಕೆನ್ನೆಗಳ ಚೆಲುವರವರು." ಅವರ ಹೃದಯವಂತಿಕೆಯಾದರೂ ಅದೇ ಕಳೆಯದು. ನಮ್ಮ ಸ್ನೇಹವನ್ನು ಬೆಸೆಯುವ ಕಾರಣದಿಂದಲೋ ಎಂಬಂತೆ ರಾಜಪುರೋಹಿತರು ವರ್ಗವಾಗಿ ಮೈಸೂರಿಗೇ ಬಂದರು. ಕೊನೆಗೆ ಪರೀಕ್ಷಾ ನಿಯಂತ್ರಣಾಧಿಕಾರಿಗಳಾಗಿ ವಿಶ್ವವಿದ್ಯಾನಿಲಯಕ್ಕೂ ಬಂದರು. ಅವರನ್ನು ತುಂಬ ಹತ್ತಿರದಿಂದ ನೋಡುವ ಸಂದರ್ಭಗಳು ಮತ್ತೆ ಮತ್ತೆ ಒದಗಿ ಬಂದವು. ತಮ್ಮ ಪ್ರವೃತ್ತಿಯ ಪ್ರಭಾವದಿಂದಾಗಿ ಅವರು ತಮ್ಮ ವೃತ್ತಿಗೂ ಒಂದು ಬಗೆಯ 'ಸಂಸ್ಕೃತಿ ಸ್ಪರ್ಶ'ವನ್ನು ತಂದುಕೊಂಡಿದ್ದನ್ನು ನಾನು ನೋಡುವಂತಾಯಿತು.

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವನ್ನು ವ್ಯವಸ್ಥೆಗೊಳಿಸಿದ್ದು ರಾಜಪುರೋಹಿತರು ಮಾಡಿದ ಒಂದು ದೊಡ್ಡ ಕೆಲಸವೆಂದು ನಾನು ತಿಳಿದಿದ್ದೇನೆ. ಕನ್ನಡದ ಅಭಿವೃದ್ಧಿ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಅನೇಕ ಯೋಜನೆಗಳ ಕೇಂದ್ರ ಈ ನಿರ್ದೇಶನಾಲಯ. ಯಾವದೋ ಮೂಲೆಯಲ್ಲಿ ಇಬ್ಬರು ಮೂವರು ಗುಮಾಸ್ತರಿಗಷ್ಟೇ ಸೀಮಿತವಾಗಿದ್ದ (ಒಂದು ಕಾಲದಲ್ಲಿ ತುಂಬ ಪ್ರಸಿದ್ಧವಾಗಿದ್ದ) ಇಲಾಖೆಗೆ ಹೊಸ ಬಣ್ಣ ಸವರಿ, ಹೊಸದನಿ ಕೊಟ್ಟು, ಹೊಸ ಶಕ್ತಿ ತುಂಬಿ ರಾಜ್ಯದ ಉದ್ದಗಲಗಳಲ್ಲಿ ಅದನ್ನು ಹರಡಿದ ಶ್ರೇಯಸ್ಸು ರಾಜಪುರೋಹಿತರಿಗೇ ಸಲ್ಲಬೇಕು. ಮೇಜು ಕುರ್ಚಿಗಳನ್ನು ಜೋಡಿಸುವದರಿಂದ ತೊಡಗಿ ಬಹುಮುಖ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುವವರೆಗೂ ಅವರು ಏಕಕಾಲದಲ್ಲಿ ದುಡಿಯಬೇಕಾಗಿತ್ತು. ಸರ್ಕಾರದ ಭಾಷಾಂತರ ವಿಭಾಗವೂ ಅದೇ ನಿರ್ದೇಶನಾಲಯಕ್ಕೆ ಸೇರಿತ್ತು. ಮುಂದೆ ಕಾರ್ಯನಿರ್ವಹಣೆಯ ಪರಿಣಾಮಕತೆಯ ದೃಷ್ಟಿಯಿಂದ ಅದು ಬೇರೆಯಾಯಿತು. ರಾಜಪುರೋಹಿತರ ದಕ್ಷ ನೇತೃತ್ವದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಜಯಘಂಟೆ ನಾಡಿನಾದ್ಯಂತ ಕೇಳಿಸುವಂತಾಯಿತು. ಕನ್ನಡವನ್ನು ಬಳಸುವಲ್ಲಿ ಉತ್ಸಾಹ ತೋರದ ಅಧಿಕಾರಿಗಳಿಗೆ ಎಚ್ಚರಿಕೆ ನೀಡುವವುಟ್ಟಿಗೂ ರಾಜಪುರೋಹಿತರು ಧೈರ್ಯತಾಳಿ ಮುಂದುವರಿದರು.

ಆಗ ಇನ್ನೂ ಕನ್ನಡವನ್ನು ಎಲ್ಲ ಹಂತಗಳಲ್ಲಿಯೂ ಆಡಳಿತಭಾಷೆಯೆಂದು ಸರ್ಕಾರ ಘೋಷಿಸಿರಲಿಲ್ಲ. ಆದರೆ ರಾಜಪುರೋಹಿತರು ಮಾತ್ರ ಆ ಘೋಷಣೆಯನ್ನು ಮಾಡಿಬಿಟ್ಟಿದ್ದರು ! ಮಾತ್ರವಲ್ಲ, ತಮ್ಮ ನಿರ್ದೇಶನಾಲಯದಿಂದ ಆದನ್ನು

ಕಾರ್ಯಗತಗೊಳಿಸಲೂ ಆರಂಭಿಸಿದರು. ದಿನ ಬೆಳಗಾದರೆ ರಾಜಪುರೋಹಿತರ ಭಾಷಣಗಳು ಪತ್ರಿಕೆಗಳಲ್ಲಿ ಪ್ರಕಟವಾದವು. ಕನ್ನಡನಾಡಿನಲ್ಲಿ ಕನ್ನಡದ ಸ್ಥಾನ ಮಾನ ಏನೆಂಬುದನ್ನು ಅವರು ತಮ್ಮ ಭಾಷಣಗಳಲ್ಲಿ ಮತ್ತೆ ಮತ್ತೆ ಪ್ರತಿಪಾದಿಸಿದರು; ಅಧಿಕಾರಿಗಳ ಜವಾಬ್ದಾರಿಯನ್ನು ಸ್ಪಷ್ಟಪಡಿಸಿದರು. ರಾಜಪುರೋಹಿತರ ಕನ್ನಡದ ಕಾಯಕ, ಅವರಿಗೆ ದೊರೆಯುತ್ತಿದ್ದ ಪ್ರಸಿದ್ಧಿ ಇವನ್ನು ಅಧಿಕಾರವರ್ಗ ಅಷ್ಟಾಗಿ ಮೆಚ್ಚಲಿಲ್ಲ. ಕೆಲವರಂತೂ ಕನಲಿದರು. ಒಬ್ಬ ಉನ್ನತ ಅಧಿಕಾರಿ ಒಮ್ಮೆ ನನ್ನನ್ನು ಕೇಳಿದರು : "ಹೀಗೆ ಹೇಳಲು ನಿಮ್ಮ ರಾಜಪುರೋಹಿತರಿಗೆ ಅಧಿಕಾರ ಕೊಟ್ಟವರು ಯಾರು ?" ಅದು ರಾಜಪುರೋಹಿತರ ಒಂದು ಭಾಷಣಕ್ಕೆ ಸಂಬಂಧಿಸಿತ್ತು. ನಾನೂ ಒಬ್ಬ ಕನ್ನಡದ ಕೆಲಸಗಾರ ಎಂದು ತಿಳಿದಿದ್ದ ಆ ಅಧಿಕಾರಿ ರಾಜಪುರೋಹಿತರನ್ನು ನನ್ನವರನ್ನಾಗಿ ಮಾಡಿದ್ದರು, ಸಂತೋಷ. ನಾನು ಆ ಅಧಿಕಾರಿಗಳಿಗೆ ಹೇಳಿದೆ : "ರಾಜಪುರೋಹಿತರಿಗೆ ಕನ್ನಡ ಜನ ಆ ಅಧಿಕಾರ ಕೊಟ್ಟಿದ್ದಾರೆ." ಇದು ಅವರಿಗೆ ಎಷ್ಟು ಅರ್ಥವಾಯಿತೋ, ಅಂತೂ ಮರುಮಾತಾಡಲಿಲ್ಲ. ಇದು ವಾಸ್ತವ ಸಂಗತಿಯೂ ಹೌದು. ಕನ್ನಡದ ಕೆಲಸಗಾರರಿಗೆ ಶಕ್ತಿ ಕನ್ನಡಿಗರದ್ದು ; ಅಧಿಕಾರ ಅವರಿಂದಲೇ ಬಂದದ್ದು. ಆ ಶಕ್ತಿ, ಅಧಿಕಾರಗಳನ್ನು ಸರ್ಕಾರವೂ ಕಸಿಯಲಾರದು. ಏಕೆಂದರೆ ಸರ್ಕಾರದ ಶಕ್ತಿಗಿಂತ ಮಿಗಿಲಾದದ್ದು ಜನಶಕ್ತಿ.

ಕೊನೆಗೂ ಅಧಿಕಾರಶಾಹಿಯೇ ಗೆದ್ದಿತು. ರಾಜಪುರೋಹಿತರನ್ನು ಐ.ಎ.ಎಸ್. ಗೌರವದೊಡನೆ, ತಾಂತ್ರಿಕ ನೆಪಗಳನ್ನು ಹೇಳಿ, ವಿಧಾನಸೌಧದ ನಾಲ್ಕುಗೋಡೆಗಳ ನಡುವೆ ಬಂಧಿಸಿದರು. ಫೈಲುಗಳ ಮಹಾಸಾಗರದಲ್ಲಿ ಮುಳುಗಿಸಿದರು. ಸರಿ. ಅಲ್ಲಿಯೂ ರಾಜಪುರೋಹಿತರು ಇನ್ನೊಂದು ಬಗೆಯಾಗಿ ಕನ್ನಡದ ಕೆಲಸವನ್ನು ಮುಂದುವರಿಸಿದರು. ಶಿಕ್ಷಣ ಇಲಾಖೆಯಲ್ಲಿ ಅವರು ಕನ್ನಡ ಮನಸ್ಸಾಕ್ಷಿಯ ಕಾವಲುಗಾರರಾದರು. ಕನ್ನಡದ ಹಿತಕ್ಕೆ ಸಂಬಂಧಿಸಿದ ಅನೇಕ ಸರ್ಕಾರಿ ಆಜ್ಞೆಗಳಿಗೆ ಅವರು ಪರೋಕ್ಷವಾಗಿ ಕಾರಣರಾದರು. ಕನ್ನಡದ ಹಿತಕ್ಕೆ ದಕ್ಕೆ ತರುವ ಕೆಲವು ಅವಿವೇಕದ ಆದೇಶಗಳು ಜಾರಿಗೆ ಬರದಿರಲೂ ಅವರು ಕಾರಣರಾದರು. ಆ ಸಂದರ್ಭಗಳನ್ನು ಉಲ್ಲೇಖಿಸಿದರೆ ಸರ್ಕಾರಿ ರಹಸ್ಯಗಳನ್ನು ಬಹಿರಂಗಗೊಳಿಸಿದ ಪಾಪಕ್ಕೆ ನಾನು ಒಳಗಾಗಬೇಕಾಗುತ್ತದೆ. ಮುಖ್ಯವಾದ ಮಾತು ಎಂದರೆ ಕೆಲಸದ ಮನಸ್ಸಿರುವವರು ಎಲ್ಲಿದ್ದರೂ ತಮ್ಮ ಕೆಲಸ ಮಾಡುತ್ತಾರೆ ಎನ್ನುವದಕ್ಕೆ ರಾಜಪುರೋಹಿತರು ಒಂದು ಸಾಕ್ಷಿಯಾಗಿದ್ದಾರೆ. ಅವರನ್ನು ನೆನಸಿದಾಗಲೆಲ್ಲ ಇಂಥ ಅಧಿಕಾರಿಗಳು ನಮ್ಮಲ್ಲಿ ಹೆಚ್ಚಾಗಿಲ್ಲವಲ್ಲ ಎಂದು ನನಗೆ ವ್ಯಥೆಯಾಗುತ್ತದೆ. ಕನ್ನಡದ ಕೆಲಸ ಅವರಿಗೆ ಕೇವಲ ಕರ್ತವ್ಯ ; ಅದಕ್ಕಾಗಿ ಕೊಡುವ ಬಹುಮಾನವನ್ನೂ ಅವರು ಒಲ್ಲರು !

ರಾಜಪುರೋಹಿತರು ಒಳ್ಳೆಯ ಲೇಖಕರು. ಅವರು ಬರೆದಿರುವದು ಹೆಚ್ಚಿಲ್ಲ.

ಆವರೆ ಬರೆದಿರುವದರಲ್ಲಿ ಬಹುಪಾಲು ಉತ್ಕೃಷ್ಟವಾದದ್ದು. ಮೊದಲು ಪ್ರತ್ಯೇಕ ಹೆಸರುಗಳಲ್ಲಿ ಬೇರೆ ಬೇರೆಯಾಗಿಯೆ ಪ್ರಕಟವಾಗಿದ್ದು, 'ಜೇನುಸುಳಿ' ಎಂಬ ಹೆಸರಿನಲ್ಲಿ ಒಟ್ಟಾಗಿ ಪ್ರಕಟವಾದ ಅವರ ಕಾದಂಬರಿಯನ್ನು ಅವರ ಪ್ರಾತಿನಿಧಿಕ ಬರವಣಿಗೆ ಎಂದು ಪರಿಗಣಿಸಬಹುದು. ಅದು ಕನ್ನಡದ ಒಂದು ಅತ್ಯುತ್ತಮ ಕಾದಂಬರಿ. ಜೀವನವನ್ನು ನೋಡಿ ಕಂಡರಿಸುವ ವಿಶಿಷ್ಟ ರೀತಿ, ಪ್ರಾದೇಶಿಕ ಬದುಕಿನ ವರ್ಣ ವೈವಿಧ್ಯವನ್ನು ಗಾಡಿಯಾಗಿಸದೆ ಸಮಗ್ರಭಾಷೆಗೆ ಅಳವಡಿಸುವ ಚಮತ್ಕಾರ — ಇವುಗಳಿಂದ ನನಗೆ ಆ ಕಾದಂಬರಿ ತುಂಬ ಮೆಚ್ಚುಗೆಯಾಯಿತು. ಕಥೆ, ನಾಟಕ, ಜೀವನಚಿತ್ರಗಳನ್ನೂ ರಾಜಪುರೋಹಿತರು ಬರೆದಿದ್ದಾರೆ. ಅವರು ಭಾಷಾವಿದರು. ಸಂಸ್ಕೃತ, ಉರ್ದು, ಹಿಂದಿ ಭಾಷೆಗಳನ್ನು ಅವರು ಬಹು ಚೆನ್ನಾಗಿ ಬಲ್ಲರು. ಅವರ ಕನ್ನಡ ತೀರ್ಪುಗಳ ಸಂಗ್ರಹದಲ್ಲಿ ಈ ಭಾಷೆಗಳು ಅವರ ನೆರವಿಗೆ ಬಂದ ಬಗೆಯನ್ನು ಕಾಣಬಹುದು.

ರಾಜಪುರೋಹಿತರು ಈಗ ವಿಧಾನಸೌಧದಿಂದ ಬಿಡುಗಡೆಯಾಗಿದ್ದಾರೆ. ಹೊಸದಾಗಿ ಆರಂಭವಾಗುತ್ತಿರುವ ಗುಲ್ಬರ್ಗ ವಿಶ್ವವಿದ್ಯಾನಿಲಯದ ವಿಶೇಷ ಅಧಿಕಾರಿಯಾಗಿ ನೇಮಕಗೊಂಡಿದ್ದಾರೆ. ನಾಳೆ ಆ ವಿಶ್ವವಿದ್ಯಾನಿಲಯದ ಒಂದು ಉನ್ನತ ಹುದ್ದೆಯನ್ನೂ ಅವರು ನಿರ್ವಹಿಸುತ್ತಾರೆಂದು ನಾನು ನಂಬಿದ್ದೇನೆ. ಸಾಂಸ್ಕೃತಿಕ ನೆಲೆಗಳಾಗಬೇಕಾಗಿದ್ದ ವಿಶ್ವವಿದ್ಯಾನಿಲಯಗಳು ಇಂದು ರಾಜಕೀಯ-ಆಡಳಿತಗಳಲ್ಲಿ ಮುಳುಗಿ ತಮ್ಮತನವನ್ನು ಕಳೆದುಕೊಂಡಿವೆ. ಹೊಸ ವಿಶ್ವವಿದ್ಯಾನಿಲಯಗಳನ್ನು ಕಟ್ಟುವ ಅವಕಾಶ ದೊರೆಯುವದು ತುಂಬ ಅಪರೂಪ. ಈ ಅಪರೂಪದ ಅದೃಷ್ಟ ನಮ್ಮ ಮಿತ್ರರಾದ ಜಯತೀರ್ಥ ರಾಜಪುರೋಹಿತರ ಪಾಲಿಗೆ ಬಂದಿದೆ. ತಮ್ಮ ದುಡಿಮೆ, ಸಂಸ್ಕೃತಿ ಪ್ರೇಮಗಳಿಂದ ಅವರು ಅದನ್ನು ಒಂದು ಆದರ್ಶ ವಿಶ್ವವಿದ್ಯಾನಿಲಯವನ್ನಾಗಿಸುವ ದಿಶೆಯಲ್ಲಿ ಅಡಿಗಲ್ಲುಗಳನ್ನಿಡುತ್ತಾರೆಂದು ನನಗೆ ವಿಶ್ವಾಸವಿದೆ. ಗುಲ್ಬರ್ಗ ಕನ್ನಡದ ಒಂದು ಪ್ರಬಲ ನೆಲೆಯಾಗಲಿ ; ಸಂಸ್ಕೃತಿಯ ಕೇಂದ್ರವಾಗಲಿ. ಇದನ್ನಾಗಿಸುವಲ್ಲಿ ನಮ್ಮ ಸ್ನೇಹಿತರು ಪಾಲುದಾರರಾಗಿದ್ದರೆಂಬ ಹೆಮ್ಮೆ ಸಂತೋಷಗಳು ನಮಗೆ ಇರಲಿ.

# ನಮ್ಮವರು

ಸೌ. ಸೀತಾ ರಾಜಪುರೋಹಿತ

ಎದುರಿಗೆ ಹತ್ತು ಸಾವಿರ ಜನರಿರಲಿ ಅಥವಾ ಹತ್ತೇ ಜನರಿರಲಿ ಅದರ ಕಡೆಗೆ ಲಕ್ಷವಿಲ್ಲದೆ ಇಂಗ್ಲೀಷ್ ತೆಗಳುತ್ತ, ಕನ್ನಡ ಹೊಗಳುತ್ತ "ಊದೋ ಶಂಖ ಊದಿಯೇ ಬಿಡುವ" ನಮ್ಮವರನ್ನು (ರಾಜಪುರೋಹಿತರನ್ನು) ನೋಡಿ ನನಗೆ ಅನೇಕ ಸಲ ನಗು ಬಂದಿದೆ. "ನಿನಗೆ ಇಂಗ್ಲೀಷ್ ಬರುವದಿಲ್ಲವಲ್ಲ ! ಭಾಷಣ ಮಾಡಲೂ ಬರುವದಿಲ್ಲ. ನೀನೆಂಥ ಆಫೀಸರ ಹೆಂಡತಿ?" ಎಂದು ಹಿಂದೆ ತಾವು ಬೇಸರಪಟ್ಟು ದಲ್ಲದೆ, ನಾನೂ ಅಸಮಾಧಾನಗೊಳ್ಳುವಂತೆ ಆಡಿದುದನ್ನು ಅವರಿಗೆ ನೆನಪಿಸಿದ್ದೇನೆ. "ಬಹಿರಂಗವಾಗಿ ಹೇಳಿಬಿಡುತ್ತೇನೆ ನೋಡಿ" ಎಂದು ಬೆದರಿಕೆ ಹಾಕಿದ್ದೇನೆ. ಅದನ್ನೇ ಈಗ ಹೇಳುತ್ತಿದ್ದೇನೆ.

ಅಧಿಕಾರಿ ಜೀವನದಲ್ಲಿ ಅನೇಕ ಬಗೆಯ ಜನರ ಸಂಬಂಧ ಬಂದೇ ಬರುತ್ತದೆ. ನಿರರ್ಗಳವಾಗಿ ಇಂಗ್ಲೀಷ್ ಮಾತನಾಡುವ ಮತ್ತು ಸಾಮಾಜಿಕ ಚಟುವಟಿಕೆಗಳಲ್ಲಿ ಬೆರೆಯುವ ಜನರು, ಅದರಲ್ಲಿಯೂ ಸೊಸಾಯ್ಟಿ ಮಹಿಳೆಯರು ಸುತ್ತ ಸುಳಿದಾಡಿ ದಾಗ ಅಧಿಕಾರಿಗಳಿಗೆ ಆಕರ್ಷಣೆಯಾಗಿದ್ದರೂ ತಮ್ಮ ಪತ್ನಿಯೂ ಹಾಗಿದ್ದರೆ ಚೆನ್ನಾಗಿತ್ತಲ್ಲ ? ಎನ್ನಿಸುವ ಸಾಧ್ಯತೆ ಇದೆ. ಆದರೆ ನಾಲ್ಕೋ ಐದೋ ಮಕ್ಕ ಳೊಂದಿಗೆ ಹಳೆಯ ಕಾಲದ ಹಿರಿಯರಿರುವ ಮನೆಯ ನಿರ್ವಹಣೆಯ ಭಾರ ಹೊರುವ ಪತ್ನಿಗೆ ಇದು ಹೇಗೆ ಸಾಧ್ಯ ? ಸಾಧ್ಯವಾದರೂ ಎಲ್ಲ ಗಂಡಸರೂ ಸಹಿಸಿಯಾರೆ ? ಇದನ್ನು ಅವರು ಯೋಚಿಸುವದಿಲ್ಲ. ಹಿರಿಯರ ಇಚ್ಛೆಗೆ ವಿರೋಧವಾಗಿ ನಮ್ಮವರೇ ಮದುವೆಯಾದ ನಂತರ ತಮ್ಮ ವಿದ್ಯಾಭ್ಯಾಸ ಪ್ರಾರಂಭಿಸಿದಾಗ, ನಾನು ಮುಂದೆ ಓದುವದು ತಾನೇ ನಿಂತಿತ್ತು. ಆಗ ತಮ್ಮ ಜೊತೆಗೆ ನನ್ನನ್ನೂ ಓದಿಸಿದ್ದರೆ ಬಹುಶಃ ನಮ್ಮವರಿಗೆ ಹೀಗೆ ದೂರುವ ಅವಕಾಶವಿರುತ್ತಿದ್ದಿಲ್ಲ. ಅದೆಲ್ಲ 'ರೇ' ರಾಜ್ಯ ಇರಲಿ.

ಅಂತೂ ಈ ಇಂಗ್ಲೀಷ್ ಮೋಹ ನಮ್ಮವರಿಗೆ ಕೆಲ ದಿನ ಕಾಡಿ ಆಮೇಲೆ ತಾನೇ ಮಾಯವಾಯಿತು. ನಾನೇನೂ ಮೂಲೆ ಗುಂಪಾಗಿ ಕೂಡುವಷ್ಟು ಹಳೆಯಕಾಲದವ

ಳಾಗಿರಲಿಲ್ಲ. ಅವರು ವಿದ್ಯಾರ್ಥಿಯಾಗಿದ್ದಾಗ ಬರೆದು ಆಕಾಶವಾಣಿಯಲ್ಲಿ ಬಿತ್ತರಿಸುತ್ತಿದ್ದ ಪ್ರಹಸನಗಳಲ್ಲಿ ಸ್ತ್ರೀ ಪಾತ್ರ ನಿರ್ವಹಣೆ ನಾನೇ ಮಾಡುತ್ತಿದ್ದೆ. ಅನಂತರ, ತಾಲ್ಲೂಕು,ಜಿಲ್ಲಾ ಸ್ಥಳಗಳಲ್ಲಿ ನಡೆಯುತ್ತಿದ್ದ ಸಭೆ ಸಮಾರಂಭಗಳಲ್ಲಿ, ಬರೆಸಿಕೊಂಡು ಭಾಷಣಗಳನ್ನೂ ಮಾಡುತ್ತಿದ್ದೆ. ಹಲವು ಸಂಘ, ಸಂಸ್ಥೆಗಳಿಗೆ, ಕ್ಲಬ್‌ಗಳಿಗೆ ನಾನು ಸದಸ್ಯಳಾಗಬೇಕಾಗಿತ್ತು. ನನಗೆ ಅಲ್ಲಿಂದ ಮತ್ತು ಸದಸ್ಯರಿಂದ ಬರುವ ಇಂಗ್ಲೀಷ್ ನೋಟೀಸುಗಳು, ಗೌರೀ ಪೂಜೆಗೂ ಇಂಗ್ಲೀಷ್ ಆಮಂತ್ರಣಗಳು, ಅಲ್ಲಿ ನಡೆವ ಇಂಗ್ಲೀಷ್ ಚಟುವಟಿಕೆಗಳು ಅವುಗಳಿಂದ ಮುಜುಗರವಾಗುತ್ತಿತ್ತು. ಪೆಚ್ಚಾಗಿ ಕೂಡುತ್ತಿದ್ದೆ. ಆದರೆ ಬರುಬರುತ್ತ, ನನ್ನೊಂದಿಗೆ ಕನ್ನಡದಲ್ಲಿ ವ್ಯವಹರಿಸಿರಿ ಎಂದು ಹೇಳುವ ಧೈರ್ಯ ಬಂತು. ಬೀದರ್ ಕ್ಲಬ್‌ನಲ್ಲಿ ಹೀಗೆ ಹೇಳಿದಾಗ ಅಲ್ಲಿಯ ಮುಖಂಡರ ಪತ್ನಿಯರು "ಓ ಇವರು ಕನ್ನಡದ ಪ್ರಚಾರಕ್ಕೆ ಬಂದಿದ್ದಾರೆ" ಎಂದಿದ್ದರು. "ಪ್ರಚಾರ—ಅಲ್ಲ ಕನ್ನಡದ ಪರಿಚಯ ಮಾಡಿಕೊಡಲು ಬಂದಿದ್ದೇನೆ." ಎಂದು ಅವರಿಗೆ ಹೇಳಿದ್ದೆ. ಹಿಂದಿ ಬರುತ್ತಿದ್ದ ನನಗೆ ಹಿಂದಿ ತೊಂದರೆಯಿಲ್ಲ. ಆದರೆ ಇಂಗ್ಲೀಷ್ ನನಗಷ್ಟೇ ಅಲ್ಲ ಜಿಲ್ಲೆಗಳಲ್ಲಿ ಮಧ್ಯಮ ವರ್ಗದ ಮಹಿಳಾವರ್ಗಕ್ಕೆಲ್ಲ ತೊಂದರೆ ಯಾಕೆಂದರೆ, ಅಲ್ಲಿ ಅನೇಕ ಹೆಂಗೆಳೆಯರಿಗೆ ಫ್ಯಾಷನ್‌ಗೆ ಸಾಕಾಗುವಷ್ಟು ಇಂಗ್ಲೀಷ್ ಬರಬಹುದೇ ವಿನಾ ಗಹನ ವಿಷಯ ತಿಳಿಯುವಷ್ಟು ಅಲ್ಲವೆಂಬುದು ನನ್ನ ಅನುಭವ. ಕೆಲವು ರೋಟರಿ, ಲಯನ್ಸ್ ಕ್ಲಬ್‌ಗಳಲ್ಲಿ ಇಂಗ್ಲೀಷ್ ಭಾಷಣ ಮಾಡಿ ತಮ್ಮ ಪತ್ನಿಯರ ಪೆಚ್ಚುಮುಖಗಳನ್ನು ನೋಡುವ ಭಾಷಣಕಾರರಿಗೆ ನಮ್ಮವರು "ನಿಮ್ಮ ನಿಮ್ಮ ಪತ್ನಿಯರ ಮೆಚ್ಚುಗೆಗಾದರೂ ಕನ್ನಡ ಭಾಷಣ ಮಾಡಿರಿ" ಎಂದು ಹೇಳಿದ್ದಾರೆ. ಇತ್ತೀಚೆಗಂತೂ ಚಿತ್ರದುರ್ಗ ಮುಂತಾದ ಕಡೆ ಸಾವಿರಾರು ಸಭೆಗಳಲ್ಲಿ ಭಾಷಣಕಾರರು ಇಂಗ್ಲೀಷ್‌ನಲ್ಲಿ ಕಾರ್ಯಕಲಾಪ ನಡೆಸಲು ನಾಚಿ ಕನ್ನಡಕ್ಕೆ ತಿರುಗುವಂಥ ಪರಿಸ್ಥಿತಿ ಉಂಟಾಗಿತ್ತು. ನಮ್ಮವರು ಇಷ್ಟೊಂದು ಕನ್ನಡಕ್ಕೆ ತಿರುಗಿದುದು ನನಗೆ ಹೆಚ್ಚು ಖುಷಿ ತಂದಿತ್ತು. ಅವರ ಸಾಹಿತ್ಯಾಸಕ್ತಿ ಹೆಚ್ಚಿದಂತೆ ಸಾನ್ನಿಧ್ಯದ ಪ್ರಭಾವವೇನೋ, ನನಗೂ ಓದುವ ಹವ್ಯಾಸ ಹೆಚ್ಚಿತು.

ವೈದಿಕರ ಹುಡುಗನ ಕೈಹಿಡಿದು, ಕನಕಗಿರಿಯಲ್ಲಿ ಗುಡಿ ಬಾವಿಯ ನೀರು ಹೊತ್ತು, ಹಳ್ಳದಲ್ಲಿ ಬಟ್ಟೆ ಒಗೆದುಕೊಂಡು, ಉಡಸಾರಣೆ ಉಪಕರಣೆ ತಿಕ್ಕುತ್ತ, ಮಡಿ ಮೈಲಿಗೆಗಳ ಸುಳಿಯಲ್ಲಿ ಜೀವನ ನೂಕುವ ನಿರ್ಧಾರದಿಂದ ಮದುವೆಯಾದಂತೆ ನನಗೆ ಅಸ್ಪಷ್ಟ ನೆನಪು. ಅದೆಲ್ಲ ಕೀಳೆಂದೇನೂ ಅಲ್ಲ. ಅದು ಅಲ್ಲಿಯ ರೀತಿ ಅಷ್ಟೆ. ಆದರೆ ಜೀವನದಲ್ಲಿ ಬದಲಾವಣೆ ಬಂತು. ಎಲ್ಲರಿಗೂ ಅನಿರೀಕ್ಷಿತವಾಗಿ ಬಂತು. ಈರುಳ್ಳಿ ತಿನ್ನಲು ಹೆದರಿ ನನ್ನನ್ನು ಸಹ ಗದರಿಸುತ್ತಿದ್ದ ನಮ್ಮವರು ಇಂದು ಎಂಥ ಸುಧಾರಿತ ಸೊಸಾಯಿಟಿಯಲ್ಲಾದರೂ ಬೆರೆಯಬಲ್ಲವರಾಗಿದ್ದಾರೆ. ಇದು ಪ್ರಗತಿಯೇ? ಎಂದು ಕೇಳಬೇಡಿರಿ. ನಾನಷ್ಟು ಓದಿಕೊಂಡವಳಲ್ಲ.

ಅವರ ವಿದ್ಯಾಭ್ಯಾಸದ ದಿನಗಳೆಂದರೆ, ಸ್ವಂತ ರೆಕ್ಕೆ ಪುಕ್ಕ ತೆರೆದು ಹಾರಾಡುವ ದಿನಗಳಲ್ಲಿ ನಾನೂ, ಅವರೂ ಪರಾವಲಂಬನದ ಸಂಕೋಚದಲ್ಲಿ ಮೈ ಮನಸ್ಸುಗಳನ್ನು ಕುಗ್ಗಿಸಿಕೊಂಡು, ಆದರೂ ನಗೆಮೊಗದಿಂದ ಕಳೆದ ದಿನಗಳು. ಆದರೆ ಅವೆಲ್ಲ ಘನ ವಲ್ಲದಿದ್ದರೂ ಒಂದು ನಿರ್ದಿಷ್ಟ ಸಾಧನೆಯಲ್ಲಿ ಮುಗಿದಿದ್ದರಿಂದ ಸಮಾಧಾನವಾಗಿದೆ. ಬದಲಾವಣೆ ಖುಷಿಯನ್ನು ತಂದಿದೆ.

ಹಳೆಯ ಸಂಪ್ರದಾಯದ ಮನೆಗಳಲ್ಲಿ ಅತ್ತೆ, ಮಾವ, ಮೈದುನರು ಇವರೊಂದಿಗೆ ನಡೆಯುವಾಗ ಅಷ್ಟೋ ಇಷ್ಟೋ ವಿರಸ, ಕಷ್ಟಕಾರ್ಪಣ್ಯಗಳ ಅನುಭವದ ಕ್ಷಣಗಳು, ಸೊಸೆಯಾದವಳಿಗೆ ಬಂದೇ ಬರುತ್ತವೆ. ಕೆಲವು ಹಿರಿಯರು ಹೊರಗೆ ಕಾಣುವಷ್ಟು ಸರಳ ಮನೆಯಲ್ಲಿ ಇರುವುದಿಲ್ಲ. ನನ್ನ ಪಾಲಿಗೂ ಅಂಥ ಕಷ್ಟದ ದಿನಗಳು ಬಂದಾಗ ನನ್ನವರು ನನ್ನ ಬೆಂಗಾವಲಿಗೆ ಇದ್ದರೆಂದೇ ತಾಳಿಕೊಂಡೆ. ನನ್ನ ಪತಿ, ಮಕ್ಕಳು, ಅವರ ಭವಿಷ್ಯ ಇವೆಲ್ಲ ಎದುರಿಗಿದ್ದಾಗ ಉಳಿದದ್ದಕ್ಕೇನು ಮಹತ್ವ ? ಆದರೂ ಯೌವನದ ಬೆಳದಿಂಗಳಿಗೆ ಈ ಸ್ಥಿತಿ ರಾಹು ಬಡಿದ ಹಾಗಿರುತ್ತದೆ. ಈಗ ಅತ್ತೆಯಾಗಿರುವ ನನಗೆ ಅಂಥ ಬುದ್ಧಿ ಬರದಿರಲೆಂದೇ ನನ್ನ ಪ್ರಾರ್ಥನೆ.

ಮುಖ್ಯವಾಗಿ ನನ್ನ ಪತಿಯ ಭವಿಷ್ಯ ಅಂದರೆ ನನ್ನದೇ ಭವಿಷ್ಯವೆಂಬುದು ಪದೇ ಪದೇ ನೆನಪಾಗಿ ಅದಕ್ಕೆ ಪೂರಕವಾಗುವಂತೆ ನಾನು ಬಾಳಲು ಹೆಣಗಿದ್ದೇನೆ. ಈ ಹೆಣಗಾಟದ ಶ್ರಮವೆಲ್ಲ ನಮ್ಮವರ ಯಶಸ್ಸಿನ ಕ್ಷಣಗಳನ್ನು ಕಂಡಾಗ, ಅವರ ಸಂತಸದಲ್ಲಿ ಪಾಲುಗೊಂಡಾಗ ಕರಗಿಹೋಗಿದೆ. ಮನೆತುಂಬ ಮಕ್ಕಳು, ಮೊಮ್ಮಕ್ಕಳು. ಹೊರಗೆ ನಮ್ಮವರನ್ನು ಪ್ರೀತಿಯಿಂದ ಕಾಣುವ ಹತ್ತಾರು ಜನ ಒಳ್ಳೆಯ ಸ್ನೇಹಿತರು, ಹಿರಿಯ ಅಧಿಕಾರಿಯೆಂದಲ್ಲ, ಕನ್ನಡದ ಕೆಲಸಗಾರರೆಂದು, ಬರಹಗಾರರೆಂದು. ಇನ್ನೇನು ಬೇಕು ? ಯಾಕೆ ಬೇಕು ?

# ನಮನ

**ಶಿವಲಿಂಕ**
ರಾಯಚೂರು

ಜಯತೀರ್ಥ ಕಲ್ಪನಾ ಲೋಕದಲಿ ಮಹಾರಾಯ್ತಿ
ಜನಿಸಿ ಗೈದಳು ಭಾರಿ ಪಾರವ್ವ ಪಂಚಾಯ್ತಿ
ಇವಳ ಬಾಳ್ – ಆಗಸದಿ ಕರಿಮೋಡ ನೂರೆಂಟು
ಮುಗಿಲಮರೆಯಲಿ ಸತ್ಯ ನಿತ್ಯ ಬೆಳಕೂ ಉಂಟು.

ಜಯತೀರ್ಥ ಸಾಹಿತ್ಯ ಮರದೊಳಿಹ 'ಹಾಲ್ಜೇನು'
ಹಂಪಿ – ಪೀರಗೆ ಮಾತ್ರ ಮೀಸಲೇನು ?
ಅಲ್ಲ ; ನುಡಿ ಭಕ್ತರೇ ನೀವೆಲ್ಲರೂ ಕೂಡಿ
ಕುಳಿತು ಒಂದೆಡೆ ಅದರ ಮಧುರ ರುಚಿ ನೋಡಿ.

ಕನ್ನಡದ ಕುಲಕೆಲ್ಲ 'ಸುಧಾ' ಕೊಟ್ಟ ಆಹ್ವಾನ
ಸ್ವೀಕರಿಸಿ ಗಿಟ್ಟಿಸಿದ ಜಯತೀರ್ಥ ಬಹುಮಾನ
ರಾಯಚ್ಚೂರು ಜಿಲ್ಲೆಯಾ ನೆಲದ ಪುಣ್ಯದ ರಾಶಿ
'ಸುಳಿಗಾಳಿ' ಸೃಜಕನಿಗೆ ಇಂದು ಸನ್ಮಾನ

ಕನ್ನಡದ ಜನಮನವ ಸೂರೆಗೊಂಡಿದೆ ನಿಮ್ಮ
'ತುಂಗೆಯುಂಗಳದಲ್ಲಿ' ಬೆಳೆದ ಕಾವ್ಯದ ಸುಮನ
ನಿಮ್ಮ ಕೃತಿಗಳನೋದಿ ನವಿರೆದ್ದಿತೆನ್ನ ಮನ
ಜಯತೀರ್ಥ ನಿಮಗಿದೋ ನೂರ್ಕೋಟಿ ನಮನ.

# ಪದ್ಯ ಮಾಲಿಕಾ

ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
ಮೈಸೂರು

ಜಯತೀರ್ಥ ನಾಮಾ ವರಪುಣ್ಯಶಾಲೀ
ವಿದ್ಯಾವಿಭಾಗಾಧಿಪತಿಃ ಪ್ರಶಾಸ್ತಿ ।
ಕರ್ನಾಟರಾಜ್ಯಾಂಗ ಗತೇಚ ಶಾಸ್ತ್ರೇ
ಸುಶಿಕ್ಷಣಂ ಸಾನುಭವಂಹ್ಯವಾಪ್ತಃ ॥೧॥

ನಕೇವಲಂ ಶಕ್ತ ಇಹೈಷನೇತಾ
ಭಕ್ತ್ಯೋऽಸಿ ದಿವ್ಯಾನುಭವ ಪ್ರಶಾಂತಃ ।
ಸಾರಸ್ವತಂ ವೈಭವಮಾತ್ಮ ಶಕ್ತ್ಯಾ
ಸಂಪ್ರಾಪ್ಯಚಿತ್ತೇತಪಸ್ಯಾऽಭಿ ಶೇತೆ ॥೨॥

ವಿದ್ವದ್ವರೇಣ್ಯಃ ಪ್ರಥಮೋऽಧಿವಾಕ್ಯಾ
ನ್ಯಾಯೈಕ ದೃಷ್ಟ್ಯಾ ಪರಿಶೀಲನಾಢ್ಯಃ ।
ಬದ್ಧಾದರೋऽಸೌ ನಿರತೋऽಸ್ತಿ ಯೋಗೇ
ಶ್ರೀವಿಶ್ವವಿದ್ಯಾಲಯು ಕೀರ್ತಿಕಾರ್ಯೇ ॥೩॥

ವಿವಾಹಕಾರ್ಯೇऽಭಿಗತಃ ಪುರೋಹಿತಃ
ಸರ್ವಂ ಯಥಾಸಾಧಯತೇ ಸ್ವಲೀಲಯಾ ।
ತಥಾಪ್ರಧಾನೋ ಗುರುಕಾರ್ಯ ಭಾರಂ
ಸ್ವಮೇಧಯಾ ನಿರ್ವಹತೇ ಪುರೋಹಿತಃ ॥೪॥

ಮಹಾಮತೇ ! ಶ್ರೀಯುತ ! ಪುಣ್ಯರೂಪ !
ಸುನಿರ್ಮಲಾತ್ಮನ್ ! ವಿಭುಶಕ್ತಿಯುಕ್ತ
ತವಾಸ್ತು ದಿವ್ಯಾಪ್ರಗತಿಃ ಸುಖಂಚ
ನವ್ಯೇऽಪಿವರ್ಷೇಭಿವಾತಾತ್ ಪ್ರಶಾಂತಿಃ ॥೫॥

ಸಿದ್ಧಪ್ಪಾರಾಧ್ಯ ವಿದುಷಾ ರಚಿತಾ ಪದ್ಯಮಾಲಿಕಾ ।
ಕರೋತು ಸುಖಿನಂ ಶಾಂತಂ ಜಯತೀರ್ಥ ಪುರೋಹಿತಂ॥

# ಜಯತೀರ್ಥ

ಶಂ. ಗು. ಬಿರಾದಾರ

ತುಂಗೆಯುಂಗಳದಲ್ಲಿ ಮಂಗಳವ ಪಾಡುತ್ತ
ಬೆಳೆದ ಧೀಮಂತ

ಬೆಂಗಳೂರಿನ ವಿಧಾನ ಸೌಧದಲಿ ಕುಳಿತು
ನಾಡಿನೆಲ್ಲೆಡೆಯಲ್ಲಿ ತಾಯ್ನುಡಿಯ ಕೆಚ್ಚನ್ನು
ಮೂಡಿಸಿದ ಛಲವಂತ

ಕನ್ನಡದ ಬನಸಿರಿಗೆ ವಸಂತೋದಯವನು ತಂದ
ಚಿನ್ನುಡಿಯ ಚೇತನಕೆ ಹೊನ್ನುಡಿಯ ಹೂವಿತ್ತು
ಸಾಹಿತ್ಯ ಸಂಸ್ಕೃತಿಯು ಏಳ್ಗೆಯಲಿ ಹಿರಿಪಾತ್ರ
ಕನ್ನಡದ ವರಪುತ್ರ

ಶ್ರೀಜಯತೀರ್ಥ ರಾಜಪುರೋಹಿತರಿಗೆ
ಅರ್ಪಿತವೀ ಜಯತೀರ್ಥ

ನ್ಯಾಯಾಂಗ ಬೆಳವಣಿಗೆಗೆ ಹೊಸ ತಿರುವು ತೀಡಿರುವ
ಮನ್ನಣೆಯ ಮಣಿಮಾಲೆ ಕೊರಳಲ್ಲಿ ನೀಡಿರುವ
ಕನ್ನಡದ ತೀರ್ಪುಗಳು

ನುಡಿದೇವಿ ಗುಡಿಗಿಟ್ಟ ಹೊಳೆವ ಹೊಂಗಳಸ
ಸೂಳ್ನುಡಿಯ ಸುಳಿಗಾಳಿ ನಾಡಿನಲಿ ಹರಡಿದ
ಹಾಲ್ಜೇನು ಹರಿಸಿದ

ಸರಸ ಸಾಹಿತ್ಯ ಸಂಪದಕೆ ತಲೆವಾಗಿ
ಸಾಹಿತ್ಯ ಸೌಗಂಧ ತುಂಬಿದೀ ಗ್ರಂಥವನು
ಆದರದಿ ನೀಡುವೆವು

ಅಧಿಕಾರ ಹಿರಿದುಂಟು ಸಾಹಿತ್ಯ ಸಿರಿಯುಂಟು
ನಾಡಿನೆಲ್ಲೆಡೆಯಲ್ಲಿ ಸಚ್ಚರಿತ ಸಖರುಂಟು
ಕಾಯಕದ ಜೊತೆಯಲ್ಲೆ ಕನ್ನಡವು ಕಗ್ಗಂಟು
ಜಯತೀರ್ಥ ಹೆಸರಿನಲಿ ಏನೆಲ್ಲ ಉಂಟು

# 'ಕನ್ನಡ ತೀರ್ಪುಗಳು'—ಒಂದು ಮೈಲಿಗಲ್ಲು

**ಪ್ರೊ. ಪ್ರಧಾನಗುರುದತ್**
ಮಾನಸಗಂಗೋತ್ರಿ, ಮೈಸೂರು

1975ರ ಆಗಸ್ಟ್ ತಿಂಗಳಲ್ಲಿ ಒಮ್ಮೆ ಶ್ರೀ ಜಯತೀರ್ಥ ರಾಜಪುರೋಹಿತರು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಗೆ ಭೇಟಿಕೊಟ್ಟಿದ್ದಾಗ, ಒಂದು ಕಡತವನ್ನು ನನ್ನ ಕೈಯಲ್ಲಿರಿಸಿ, "ನಿಮಗೆ ಬಿಡುವಾದಾಗ ಇದನ್ನು ನೋಡಿ. ಈ ವಾರಾಂತ್ಯದಲ್ಲಿ ಮತ್ತೆ ಮೈಸೂರಿಗೆ ಬರಲಿದ್ದೇನೆ. ನಿಮಗೆ ತೊಂದರೆಯಾಗದಿದ್ದರೆ, ಭಾನುವಾರ ಬೆಳಿಗ್ಗೆ ಇದರ ಬಗ್ಗೆ ಚರ್ಚಿಸೋಣ" ಎಂದರು. "ಇದೇನು?" ಎಂದಾಗ, "ನಾನು ಚಿತ್ರದುರ್ಗದಲ್ಲಿ ನೀಡಿದ ಕನ್ನಡ ತೀರ್ಪುಗಳು" ಎಂದರು. ನಾನು ಕುತೂಹಲ ಮತ್ತು ಆಸಕ್ತಿಗಳಿಂದ ಆ ಕಡತವನ್ನು ತೆಗೆದುಕೊಂಡೆ. ಭಾನುವಾರದಂದು ಮತ್ತೆ ಸೇರೋಣವೆಂಬ ಸೂಚನೆಯನ್ನು ಒಪ್ಪಿಕೊಂಡೆ.

ನನ್ನ ಕುತೂಹಲ ಮತ್ತು ಆಸಕ್ತಿಗಳು ಅಕಾರಣವೇನೂ ಆಗಿರಲಿಲ್ಲ. 1974ರ ರಾಜ್ಯೋತ್ಸವದ ಸಮಯದಲ್ಲಿ ತಾವು ನೀಡಿದ ಮೊದಲ ಕನ್ನಡ ತೀರ್ಪಿನಿಂದ ಅವರು ವಾಸ್ತವವಾಗಿ ಇತಿಹಾಸವನ್ನೇ ನಿರ್ಮಿಸಿದ್ದರು. ಅವರ ಈ ವಿಕ್ರಮ ಇತರ ಕನ್ನಡಿಗರಂತೆ ನನ್ನನ್ನು ಪುಲಕಿತನನ್ನಾಗಿಸಿತ್ತು. ಇಂಥ ವಿಕ್ರಮವನ್ನು ಸಾಧಿಸಿದ ಆ ಸಾಹಿತ್ಯರಾಶಿ ನನ್ನ ಕೈಸೇರಿದ್ದು ನನಗೆ ತುಂಬ ಸಂತೋಷವನ್ನು ಉಂಟುಮಾಡಿತು. ಆ ತೀರ್ಪುಗಳನ್ನು ಓದುತ್ತ ಹೋದಂತೆ ಹೊಸ ಲೋಕವೊಂದನ್ನು ಪ್ರವೇಶಿಸಿದ ಅನುಭವ ನನಗೆ ಉಂಟಾಯಿತು. ಅಷ್ಟೇ ಅಲ್ಲ, ಈ ತೀರ್ಪುಗಳ ಮೂಲಕ ಅವರು ಹೊಸ ಹಾದಿಯೊಂದನ್ನು ತೆರೆಯುತ್ತಿರುವಂಥ ಅನುಭವವೂ ಆಯಿತು.

ತೀರ್ಪಿಗೆ ಸಂಬಂಧಿಸಿದ ಎರಡು ಮುಖ್ಯ ಅಂಶಗಳೆಂದರೆ ಪಾರಿಭಾಷಿಕ ಪದಗಳು ಮತ್ತು ಅದರ 'ಜಾರ್ಗನ್' ಅಥವಾ ವಿಷಯನಿಷ್ಠ ಶೈಲಿ. ಪಾರಿಭಾಷಿಕ ಪದಗಳು ಯಥೇಚ್ಛವಾಗಿ ಲಭ್ಯವಾಗಿರುವ ಹಾಗೂ ವಿಷಯನಿಷ್ಠ ಶೈಲಿಯ ಸಮಸ್ಯೆಗಳನ್ನು ಬಗೆಹರಿಸಿದ ಮಾದರಿಗಳು ನಮ್ಮ ಮುಂದೆ ಇದ್ದಾಗ, ಇಂಥ ಪೂರಕ ಸಾಹಿತ್ಯದ ನೆರವಿನಿಂದ ತೀರ್ಪನ್ನು ರಚಿಸುವದು ಕಷ್ಟವೇನೂ ಅಲ್ಲ. ಆದರೆ ಅಂಥ ಯಾವ

ನೆರವೂ ದೊರೆಯದೆ ಇದ್ದಾಗ, ವ್ಯಕ್ತಿಯೊಬ್ಬ ತನ್ನ ಸ್ವಂತ ಶ್ರದ್ಧೆ, ಪ್ರವೃತ್ತಿ ಮತ್ತು ಅನುಭವಗಳ ಬಂಡವಾಳವನ್ನು ಆಧರಿಸಿ, ಕೆಲಸ ಮಾಡಬೇಕಾಗುತ್ತದೆ. ಇಂಥ ಸವಾಲಿನ ಕಾರ್ಯಕ್ಕೆ ಕೈ ಹಾಕಬೇಕಾದರೆ ಎಂಟೆರ್ದೆಯೂ ಬೇಕಾಗುತ್ತದೆ. ಏಕೆಂದರೆ ಇದು ಜಾರುತ್ತಿರುವಂಥ ಏರನ್ನು ಹತ್ತುವ ಸಾಹಸ ; ಸೋಲು ಇಲ್ಲಿ ತುಂಬ ಸುಲಭವಾಗಿ ನಮಗೆದುರಾಗುವ ಸಂಗತಿ; ಎದೆಗೆಡಿಸುವ ಸಂಗತಿಯೂ ಹೌದು. ಯಶಸ್ಸು ತುಂಬ ಅಪೂರ್ವವಾಗಿ ಮಹಾ ಸಾಹಸಿಯೊಬ್ಬನ ಚರಣವನ್ನು ಚುಂಬಿಸಬಹುದು. ರಾಜಪುರೋಹಿತರು ಅಂಥ ಅಪೂರ್ವ—ಯಶಸ್ವಿ ಸಾಹಸಿಗರಾದದ್ದು, ಆದ್ಯಪ್ರವರ್ತಕರಾದದ್ದು ಅವರ ವೈಯಕ್ತಿಕ ಅದೃಷ್ಟವೂ ಹೌದು; ಒಟ್ಟಾರೆ ಕನ್ನಡ ಕುಲಕೋಟಿಯ ಸೌಭಾಗ್ಯವೂ ಹೌದು.

ರಾಜಪುರೋಹಿತರು ಈ ತೀರ್ಪುಗಳಲ್ಲಿ ಪಾರಿಭಾಷಿಕ ಪದಗಳ ಸಮಸ್ಯೆಯನ್ನು ಬಗೆಹರಿಸಿಕೊಂಡಿದ್ದರು ; ವಿಷಯನಿಷ್ಠ ಶೈಲಿಯ ಸಮಸ್ಯೆಗಳಿಗೂ ಪರಿಹಾರವನ್ನು ಕಂಡುಕೊಂಡಿದ್ದರು. ಇವನ್ನೆಲ್ಲ ಸಾಧಿಸುವಾಗ ಕನ್ನಡದ ಜಾಯಮಾನಕ್ಕೆ ಹೊಂದಿಕೊಳ್ಳುವಂತೆ ನೋಡಿಕೊಂಡಿದ್ದುದು ಅವರ ಮತ್ತೊಂದು ವೈಶಿಷ್ಟ್ಯ. ಒಂದೆರಡು ಶಬ್ದಗಳು (ಉದಾಹರಣೆಗೆ 'ಅಧಿಷ್ಠಿತರು' (ಪ್ರಿಸಾಯಿಡಿಂಗ್ ಆಫೀಸರ್), 'ಪ್ರಖ್ಯಾಪನ (ಪ್ರೋಕ್ಲೇಮೆಷನ್ ಇತ್ಯಾದಿ) ಅಗತ್ಯಕ್ಕಿಂತ ಹೆಚ್ಚು ಸಂಸ್ಕೃತಮಯವಾಗಿವೆ ಎಂದು ತೋರುತ್ತಿದ್ದುವಾದರೂ, ಒಟ್ಟಿನಲ್ಲಿ ತೀರ್ಪಿನ ಶೈಲಿಯ ಸಮಸ್ಯೆ ತೃಪ್ತಿಕರವಾಗಿ ಬಗೆಹರಿದಿತ್ತು. ಆದ್ದರಿಂದ, ನಾವು ಮತ್ತೆ ಚರ್ಚೆಗೆ ಕಲೆತಾಗ, ಆಡಳಿತ ಮತ್ತು ನ್ಯಾಯಾಂಗದ ಭಾಷೆಯಾಗಿ ಕನ್ನಡದ ಬಳಕೆಯನ್ನು ಕುರಿತಂತೆ ಹಾಗೂ ತೀರ್ಪಿನ ರಚನಾ ವಿಧಾನದ ವಿಶ್ಲೇಷಣೆಯನ್ನು ಒಳಗೊಂಡಂತೆ ಒಂದು ಪ್ರಸ್ತಾವನೆಯನ್ನು ಕೊಡಬೇಕೆಂದೂ, ತೀರ್ಪುಗಳನ್ನು ತೀರ್ಪುನೀಡಿಕೆಯ ಕಾಲಾನುಕ್ರಮದಲ್ಲಿ ಕೊಡುವದಕ್ಕೆ ಬದಲಾಗಿ ವಿಷಯಾನುಗುಣವಾಗಿ ವರ್ಗೀಕರಿಸಿ ಸಾದರ ಪಡಿಸುವದು ಉತ್ತಮವೆಂದೂ, ಅನುಬಂಧರೂಪವಾಗಿ ಹಳೆಯ ಕನ್ನಡ ತೀರ್ಪುಗಳೇನಾದರೂ ಇದ್ದಲ್ಲಿ ಸೇರಿಸಬಹುದೆಂದೂ, ಈ ತೀರ್ಪುಗಳಲ್ಲಿ ಬಂದಿರುವ ಪಾರಿಭಾಷಿಕ ಪದಗಳ ಅಕಾರಾದಿ ಪಟ್ಟಿಯೊಂದನ್ನು ಕೊನೆಯಲ್ಲಿ ಕೊಡಬಹುದೆಂದೂ ಸೂಚಿಸಿದೆ. ಇವು ಬಹುಶಃ ಅವರ ಮನಸ್ಸಿನಲ್ಲಿ ಮೂಡದೆ ಇದ್ದ ಆಲೋಚನೆಗಳೇನೂ ಅಲ್ಲ; ಆದರೂ ಅದನ್ನೇ ಅವರು ತೋರಗೊಡದೆ, ತಮ್ಮ ಸಹಜ ವಿನಯದಿಂದ ಈ ಸೂಚನೆಗಳನ್ನು ಮಾನ್ಯ ಮಾಡಿದರು.

ಆದರೆ, ನನಗೆ ಆಶ್ಚರ್ಯವೆಂದು ತೋರಿದ್ದೆಂದರೆ, ಇವುಗಳ ವಿಷಯದಲ್ಲಿ ಅವರು ನಡೆಸಿದ ಆಳವಾದ ಅಭ್ಯಾಸ ಮತ್ತು ವ್ಯಾಪಕವಾದ ಸಂಶೋಧನೆ. ಈ ಗ್ರಂಥಕ್ಕೆ ಅವರು ಬರೆದಿರುವ ವಿಸ್ತಾರವಾದ ಪ್ರಸ್ತಾವನೆಯನ್ನು ನೋಡಿದರೆ ಅವರ ಅಭ್ಯಾಸದ ವ್ಯಾಪ್ತಿ ಮತ್ತು ಗಹನತೆಗಳು ನಮಗೆ ಮನದಟ್ಟಾಗುತ್ತವೆ. ಯಾವೊಬ್ಬ

ಸಂಶೋಧನ ವಿದ್ಯಾರ್ಥಿಯೂ ಇಷ್ಟು ಸೀಮಿತ ಅವಧಿಯಲ್ಲಿ ಇಷ್ಟೊಂದು ಮಾಹಿತಿಯನ್ನು ಸಂಗ್ರಹಿಸುವುದು ಕಷ್ಟಸಾಧ್ಯವೆನ್ನುವ ರೀತಿಯಲ್ಲಿ ಇಲ್ಲಿಯ ಮಾಹಿತಿ ಸಂಗ್ರಹಣ ನಡೆದಿತ್ತು. ಜೊತೆಗೆ ಅವರು ಇದಕ್ಕೆ ತಮ್ಮದೇ ಆದ ನಿರೂಪಣೆಯ ವೈಶಿಷ್ಟ್ಯವನ್ನೂ ಸಮನಿಸಿದ್ದರು. ಅನುಬಂಧಗಳಿಗೆ ಸಂಬಂಧಿಸಿದಂತೆ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಕೆಲವೊಂದು ಹಸ್ತಪ್ರತಿಗಳನ್ನೂ, ಎಪಿಗ್ರಾಫಿಯ ಕರ್ನಾಟಿಕ ವಿಭಾಗದಲ್ಲಿನ ಶಾಸನ ಸಂಪುಟಗಳನ್ನೂ ಜಾಲಾಡಿದ್ದು ಮಾತ್ರವಲ್ಲದೆ ಹಿರಿಯರಾದ ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅಂಥವರನ್ನು ಸಂಪರ್ಕಿಸಿ ಅವರಿಂದ ಶತಮಾನಕ್ಕೂ ಹಿಂದಿನ ಕನ್ನಡ ತೀರ್ಪುಗಳನ್ನು ಸಂಗ್ರಹಿಸಿದ್ದರು. ಇವೆಲ್ಲ ಕನ್ನಡ ಭಾಷೆ ಮಡಿವಂತಿಕೆಯನ್ನು ಹೇಗೆ ಬದಿಗಿರಿಸಿ ಶಬ್ದ ಶ್ರೀಮಂತಿಕೆಯನ್ನು ಸಾಧಿಸಿತು. ಪ್ರಾದೇಶಿಕ—ವಿಭಾಗಿಕ ಅಗತ್ಯಗಳನ್ನು ಈಡೇರಿಸುವಲ್ಲಿ ಅದು ಎಂಥ ಹೊಂದಾಣಿಕೆಯನ್ನು. ಜೀವಂತಿಕೆಯನ್ನು ಪ್ರದರ್ಶಿಸಿದೆ ಎಂಬುದನ್ನು ಅಸಂದಿಗ್ಧ ರೂಪದಲ್ಲಿ ತೋರಿಕೊಡಬಲ್ಲಂಥ ನಿದರ್ಶನಗಳಾಗಿವೆ. ನಿದರ್ಶನಗಳನ್ನು ಆಯುವಲ್ಲಿಯೂ ರಾಜಪುರೋಹಿತರು ಎಂಥ ಸೂಕ್ಷ್ಮ ದೃಷ್ಟಿಯನ್ನು ಮೆರೆಯಬಲ್ಲರು ಎಂಬುದಕ್ಕೆ ಇವು ಸಾಕ್ಷಿಯಾಗಿವೆ.

ಪಾರಿಭಾಷಿಕ ಪದಗಳ ಆಯ್ಕೆಯಲ್ಲಿಯೂ ರಾಜಪುರೋಹಿತರು ತುಂಬ ಎಚ್ಚರ ವಹಿಸಿದ್ದಾರೆ. ಒಂದು ಪದ ಯಾವ ಯಾವ ಸಂದರ್ಭಗಳಲ್ಲಿ, ಯಾವ ಯಾವ ಅರ್ಥಛಾಯೆಗಳಲ್ಲಿ ಬಳಕೆಗೆ ಬರುತ್ತದೆ ಎಂಬುದನ್ನೆಲ್ಲ ಗಮನಿಸಿ ಅವರು ಶಬ್ದಗಳನ್ನು ರೂಪಿಸಿದ್ದಾರೆ. ಪ್ರಚಲಿತ ಶಬ್ದಗಳಿಗೆ ನಿರ್ದಿಷ್ಟ ಅರ್ಥಛಾಯೆಯನ್ನು ಆರೋಪಿಸಿದ್ದಾರೆ; ಹೊಸ ಅರ್ಥಗಳನ್ನು ಕೊಟ್ಟಿದ್ದಾರೆ; ಅಗತ್ಯವಾದ ಸಂದರ್ಭಗಳಲ್ಲಿ ಶಬ್ದಗಳನ್ನು ಎರವಲಾಗಿಯೂ ಸ್ವೀಕರಿಸಿದ್ದಾರೆ. ಸಂಸ್ಥೆಯ ವತಿಯಿಂದ ನಾವು ಅವರನ್ನು ಇಂಥ ವಿಷಯಗಳಲ್ಲಿ ಪ್ರಶ್ನಿಸಿದಾಗ "ಪ್ರಕರಣ, ಅಪೀಲ್‌ಗೆ ಸಂಬಂಧಿಸಿದ್ದಾದರೆ, 'ಅಪೀಲುದಾರ' ಮತ್ತು 'ಪ್ರತಿವಾದಿ' ಎಂದು ಹೇಳಿದರೆ ಸರಿಯಾಗುತ್ತದೆ. ಆದರೆ ಪ್ರಕರಣ 'ರಿವಿಜನ್ ಪಿಟಿಷನ್' ಅಥವಾ 'ಒರಿಜಿನಲ್ ಪಿಟಿಷನ್' (ಪುನರ್ವಿಮರ್ಶನ ಅರ್ಜಿ, ಮೂಲ ಅರ್ಜಿ) ಅಂಥ ಅರ್ಜಿಗಳಿಗೆ ಸಂಬಂಧಿಸಿದ ಪ್ರಕರಣಗಳಾಗಿದ್ದರೆ ಅಲ್ಲಿ ವಾದಿ ಹೆಸರನ್ನು ಅಪೀಲುದಾರ ಎನ್ನುವದು ಸರಿಯಾಗಲಿಕ್ಕಿಲ್ಲ. ಅಲ್ಲಿ ವಾದಿಗೆ ಅರ್ಜಿದಾರ ಎಂದು ಹೇಳಬಹುದು" ಈ ಬಗೆಯಾಗಿ ಅವರು ವಿವರಣೆಗಳನ್ನು ಕೊಟ್ಟಿರುವದೂ ಉಂಟು.

ಇಲ್ಲಿಯ ತೀರ್ಪುಗಳ ಭಾಷೆ ಕನ್ನಡದ ಜಾಯಮಾನಕ್ಕೆ ಎಷ್ಟು ಚೆನ್ನಾಗಿ ಹೊಂದಿಕೊಂಡಿದೆ ಎಂಬುದು ಅವರ ಬಹುಭಾಷಾ ಪ್ರಭುತ್ವವನ್ನು ಮಾತ್ರವಲ್ಲದೆ, ಕನ್ನಡದ ಅಂತಃಶಕ್ತಿಯನ್ನೂ ತೆರೆದು ತೋರುವಂಥದಾಗಿದೆ. **"ಭಾರತೀಯ ಅವಧಿಯ ಅಧಿನಿಯಮದ 5ನೇ ಕಲಮು ನ್ಯಾಯಾಲಯಕ್ಕೆ ಅನಿಯಂತ್ರಿತ ಅಧಿಕಾರವನ್ನೇನೂ**

ಕೊಡುವುದಿಲ್ಲ" (ಪುಟ. 42). "ಆದಕಾರಣ ಈ ವಿಷಯದಲ್ಲಿ ನಮ್ಮ ತೀರ್ಮಾನ ವೇನೆಂದರೆ ವಾದಗ್ರಸ್ತ **ಜಮೀನು ಅಬಕಾರಿ ಖರಾಬು** ಇದ್ದರೂ ಸಹ ಭೂಕಂದಾಯ ಶಾಸನದ 94ನೆಯ ಕಲಮಿನಲ್ಲಿ ಸೂಚಿಸಿದ ವರ್ಗಕ್ಕೆ ಸೇರಿದ್ದು" (ಪುಟ. 63). "ಅದನ್ನು ಮತ್ತೊಮ್ಮೆ ಅಪೀಲುದಾರನ ಬೇಡಿಕೆಯಂತೆ ಪೂರ್ವಸ್ಥಿತಿಗೆ ತಂದು ವಿಚಾರಣೆ ಮುಂದುವರಿಯಿತು. **ಮತ್ತೆ ಅದೇ ಗೈರುಹಾಜರಿಗಳ ಪರಂಪರೆ**" (ಪು. 72). "ಆ ಆಜ್ಞೆಯ ವಿರುದ್ಧ ತೇಲ್ಕರ **ಸಹಾಯಕ ಕಮಿಷನರ ಹತ್ತಿರ ಅಪೀಲು ದಾಖಲೆ** ಮಾಡಿದಾಗ ಅವರು ದಿನಾಂಕ 24-9-71 ರಂದು ಆಜ್ಞೆ ಮಾಡಿ ಈ ಪ್ರಕ ರಣದ **ಮರು ವಿಚಾರಣೆಗಾಗಿ** ತಹಸೀಲ್ದಾರರಿಗೆ ವಾಪಸು ಮಾಡಿದರು" (ಪು.107). "**ಅಪೀಲನ್ನು ಭಾಗಶಃ ಅಂಗೀಕರಿಸಿ**, ವಾದಗ್ರಸ್ತ ಆಜ್ಞೆಯನ್ನು **ಬದಿಗೊತ್ತಲಾಗಿದೆ**" (ಪು. 117). "**ಸಂಬಂಧಿತ ದಾಖಲೆಗಳೊಂದಿಗೆ** ಅಪರಾಧಿ ನೌಕರನ ವಿವರಣೆಯನ್ನು **ಪರಾಂಬರಿಸಲಾಯಿತು.** ವಿವರಣೆಗಳು **ಸಮರ್ಪಕವಾಗಿಲ್ಲ. ಆಪಾದನೆಗಳು ಸಂಶಯಾತೀತವಾಗಿ ಸಾಬೀತಾಗಿವೆಯೆಂಬುದು** ನನ್ನ ನಿರ್ಧಾರವಾಗಿದೆ. ಆದಕಾರಣ, **ಜಿಲ್ಲಾಧಿಕಾರಿಯಾದ ನಾನು ಈ ಮೂಲಕ ಆಜ್ಞಾಪಿಸುವುದೇನೆಂದರೆ** ಗ್ರಾಮಲೆಕ್ಕಿಗ ರಾದ ಶ್ರೀ......**ಅವರಿಗೆ ಸಲ್ಲಿಸಿರುವ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತವಾಗಿ ಪರಿಣಾಮಕಾರಿಯಾಗದಂತೆ ತಡೆ ಹಿಡಿಯತಕ್ಕದ್ದು**" (ಪು. 1937)- ಹೀಗೆ, ಎಲ್ಲಿ ಯಾವದೇ ಪದವನ್ನು, ಪದಪುಂಜವನ್ನು, ನುಡಿಗಟ್ಟನ್ನು, ಇಡೀ ವಾಕ್ಯ ವನ್ನು ಹೆಕ್ಕಿ, ಹಿಂಜಿ ನೋಡಿದರೂ ಅವರ ಮಡಿವಂತಿಕೆಯಿಂದ ದೂರವಾದ ಉದಾರ ದೃಷ್ಟಿಕೋನ, ಭಾಷೆಯನ್ನು ಯಾವುದೇ ಬಗೆಯ ಅಭಿವ್ಯಕ್ತಿಗಾದರೂ ಕಸಿ ಮಾಡ ಬಹುದೆಂಬುದನ್ನು ಸಿದ್ಧಪಡಿಸುತ್ತದೆ.

ತಮ್ಮ ಕೃತಿಯನ್ನು ಕುರಿತು ಹೇಳುವಾಗ ರಾಜಪುರೋಹಿತರು 'ಕನ್ನಡ ತೀರ್ಪು ಗಳು' ಮುಖ್ಯವಾಗಿ ಸಾಹಿತ್ಯ ಕೃತಿ, ಸಾಹಿತ್ಯೇತರ ಪ್ರಯೋಜನ ಗೌಣ. ಅಕಸ್ಮಾತ್ ಸಾಧಿಸಿದರೆ ಸಂತೋಷ ಎಂದಿದ್ದಾರೆ." ಇಲ್ಲಿ ಇದನ್ನು ಅವರು ಆಡಳಿತ ಸಾಹಿತ್ಯ ಎಂಬ ದೃಷ್ಟಿಯಲ್ಲಿ ಬಳಸಿದ್ದಾರೆ ಎಂಬುದು ಗಮನಿಸಬೇಕಾಗಿರುವ ಸಂಗತಿ. ಆದರೆ, ಆಡಳಿತಗಾರರಿಗೆ ಆಗಬಹುದಾದ ಸದ್ಯಃಪ್ರಯೋಜನದ ವಿಚಾರವನ್ನು ಮರೆತರೂ, ಈ ಕೃತಿ ಆಡಳಿತಗಾರರಲ್ಲದವರೂ ಬೇಸರವಿಲ್ಲದೆ ಓದಬಹುದಾಗಿರುವಂಥ ವಿರಳ ಕೃತಿಗಳಲ್ಲಿ ಒಂದಾಗಿದೆ. ಇಲ್ಲಿ ನೊಂದವರ ನಿಟ್ಟುಸಿರಿದೆ; ಅಧಿಕಾರ ಮೋಹಿತರ ಅಟ್ಟಹಾಸ-ಆಡಂಬರಗಳ, ದಯೆ-ಕನಿಕರಗಳ, ಮಾನವೀಯತೆ-ಸಹೃದಯತೆಗಳ ನಿದರ್ಶನಗಳಿವೆ; ವಕೀಲರ ಶ್ರದ್ಧೆ, ಜಾಣ್ಮೆಗಳ, ಬೂಟಾಟಿಕೆ-ಸೋಗುಗಳ ಇಣುಕು ನೋಟಗಳಿವೆ; ಉಳ್ಳವರ ಕಾರ್ಯವೂ ಕಂಡು ಮರೆಯಾಗುತ್ತದೆ; ಇಲ್ಲದವರ ಹೋರಾಟ-ಹೊಡೆದಾಟಗಳ ಪ್ರಸಂಗಗಳಿವೆ; ನ್ಯಾಯ ನೀಡಿಕೆಯ ಕಷ್ಟಾನಿಷ್ಟಗಳ ಚಿತ್ರಗಳಿವೆ. ಹೀಗಾಗಿ ಇಲ್ಲಿ ಮಾನವ ಸಮಾಜದ ಒಂದು ಮಾರ್ಮಿಕ ಪಾರ್ಶ್ವ

ಚಿತ್ರವೇ ಅನಾವರಣಗೊಳ್ಳುತ್ತದೆ. ಆದ್ದರಿಂದ, ಇದು ಸಾರ್ವಜನಿಕ ಆಸಕ್ತಿಯ ಗ್ರಂಥವೂ ಆಗುತ್ತದೆ. ಶುದ್ಧ ಶಾಸ್ತ್ರ ಗ್ರಂಥವೊಂದು ಸಾಧಿಸಲು ಬಹುತೇಕ ಸಾಧ್ಯವಾಗದ ವಿಕ್ರಮ ಇದು.

ಪ್ರಸ್ತಾವನೆ, ನಿದರ್ಶನ ಮತ್ತು ಅನುಬಂಧಗಳೆಂಬ ಮುಮ್ಮುಖಗಳಿಂದ ಸುಯೋಜಿತವಾಗಿರುವ ಈ ಕೃತಿ ಸರ್ವ–ಸಮಗ್ರವಾದುದೆಂಬ ಭ್ರಮೆ ಲೇಖಕರಿಗೇನೂ ಇಲ್ಲ. ಅವರೇ ಈ ಮಾತನ್ನು ಹೇಳಿಯೂ ಇದ್ದಾರೆ. "ಇವು ರೆವಿನ್ಯೂ ನ್ಯಾಯಾಲಯದ ತೀರ್ಪುಗಳು. ಇವುಗಳ ಇತಿಮಿತಿ ನನಗೆ ಗೊತ್ತಿದೆ. ಸಿವಿಲ್ ಹಾಗೂ ಕ್ರಿಮಿನಲ್ ಸ್ವರೂಪದ ಪ್ರಕರಣಗಳ ವಿಚಾರಣೆಗಳು ಹೆಚ್ಚು ಹೆಚ್ಚು ಜಟಿಲವಾಗಿರುತ್ತವೆ. ಅಲ್ಲಿ ಕನ್ನಡವನ್ನು ಬಳಸುವಾಗ ಹೆಚ್ಚಿನ ಪರಿಶ್ರಮ ಬೇಕಾಗಬಹುದು. ಜಾಗರೂಕತೆಯೂ ಬೇಕಾಗುತ್ತದೆ." ಇಷ್ಟಾಗಿಯೂ, ಡಾ. ಹಾ. ಮಾ. ನಾಯಕರೆಂದಿರುವಂತೆ "ಇಲ್ಲಿ ಪ್ರಕಟವಾಗುತ್ತಿರುವ ತೀರ್ಪುಗಳು ಇನ್ನು ಮುಂದೆ ಕಛೇರಿಗಳಲ್ಲಿಯೂ, ನ್ಯಾಯಾಲಯಗಳಲ್ಲಿಯೂ ತೀರ್ಪುಗಳನ್ನು ಕನ್ನಡದಲ್ಲಿ ಬರೆಯುವವರಿಗೆ ನೆರವು ನೀಡುತ್ತವೆಂಬುದರಲ್ಲಿಯೂ ಒಂದು ಮಾದರಿಯನ್ನೊದಗಿಸುತ್ತದೆಂಬುದರಲ್ಲಿಯೂ ಸಂಶಯವಿಲ್ಲ."

'ಕನ್ನಡ ತೀರ್ಪುಗಳು' ಪ್ರಕಟವಾದಾಗ, ಅದರ ಮಹತ್ವವೆಷ್ಟೆಂಬುದು ಅನೇಕರಿಗೆ ಬಹುಶಃ ತಿಳಿದಿರಲಿಲ್ಲ. ಕೇಂದ್ರ ಸರ್ಕಾರದ ಅಧಿಕೃತ ಭಾಷಾ (ವಿಧಾಯೀ) ಆಯೋಗದ ಕಾರ್ಯದರ್ಶಿಗಳಾದ ಶ್ರೀ ಬಿ. ಕೆ. ಶರ್ಮರು ಮುಕ್ತಕಂಠದಿಂದ "ಬೇರೆ ಯಾವುದೇ ಭಾಷೆಯಲ್ಲಿಯೂ ಈ ಪ್ರಕಟಣೆಗೆ ಸಂವಾದಿಯಾದ ಕೃತಿ ನಿಜವಾಗಿಯೂ ಇಲ್ಲ" ಎಂದು ಪ್ರಶಂಸಿಸಿದ್ದಾರೆ. ಇತರ ಭಾರತೀಯ ಭಾಷೆಗಳಲ್ಲಿ ಇಂಥ ಕೃತಿಗಳನ್ನು ಹೊರತರಲು ನಡೆಯುತ್ತಿರುವ ಪ್ರಯತ್ನಗಳು ರಾಜಪುರೋಹಿತರಿಗೆ ಮಾತ್ರವಲ್ಲ, ಕನ್ನಡಿಗರಿಗೆಲ್ಲ ಸಂತೋಷದ, ಅಭಿಮಾನದ ಸಂಗತಿಯಾಗಿದೆ.

ನ್ಯಾಯ ನೀಡಿಕೆಯಲ್ಲಿ, ಕನ್ನಡ ಕಣ್ಮರೆಯಾದ ಅನಂತರದಲ್ಲಿ ಮತ್ತೆ ಹೊಸದಾಗಿ ಹೊಸ ಕನ್ನಡದಲ್ಲಿ 'ಮೊದಲ' ತೀರ್ಪನ್ನು ನೀಡಿ ಇತಿಹಾಸವನ್ನು ನಿರ್ಮಿಸಿದಂತೆ, ತೀರ್ಪುಗಳ ತಮ್ಮ ಈ ಪ್ರಕಟಣೆಯಿಂದಲೂ ರಾಜಪುರೋಹಿತರು ಇತಿಹಾಸವನ್ನು ನಿರ್ಮಿಸಿದ್ದಾರೆ. ಹೀಗಾಗಿ, ಅವರ ಈ ಕೃತಿ ಈ ಕ್ಷೇತ್ರದಲ್ಲಿನ ಕನ್ನಡ ಪ್ರಕಟಣೆಗಳ ಇತಿಹಾಸದಲ್ಲಿ ಮಹತ್ವದ ಕೃತಿಯಾಗಿದೆ, ಮೈಲಿಗಲ್ಲಾಗಿದೆ ಎಂಬುದರಲ್ಲಿ ಅನುಮಾನವಿಲ್ಲ.

# ಇನ್ನೊಂದು ಒಳ್ಳೆಯ ಕಾದಂಬರಿ – 'ಜೊಹರಾ'

ಡಾ. ಎಸ್. ಎಲ್. ಭೈರಪ್ಪ

ಮುಸಲ್ಮಾನರ ಸಂಸ್ಕೃತಿ, ರೀತಿ ರಿವಾಜುಗಳು ಈ ದೇಶದಲ್ಲಿ ಇತರ ಜನಾಂಗಗಳೊಡನೆ ಅವರ ಸಂಬಂಧ, ಸಮಸ್ಯೆಗಳು ಕನ್ನಡ ಸಾಹಿತ್ಯದಲ್ಲಿ ಅಭಿವ್ಯಕ್ತವಾಗಿರಲಿಲ್ಲ. ಶಾಲೆ ಕಾಲೇಜುಗಳಲ್ಲಿ ಸಾಧಾರಣವಾಗಿ ಮುಸಲ್ಮಾನರು ಉರ್ದುವನ್ನೇ ದ್ವಿತೀಯ ಭಾಷೆಯಾಗಿ ಆಯ್ದುಕೊಳ್ಳುವದು ಮತ್ತು ಆಂಗ್ಲ ಮಾಧ್ಯಮಗಳಲ್ಲಿ ತಮ್ಮ ಶಿಕ್ಷಣವನ್ನು ಮುಗಿಸುವದು, ಈ ಎರಡು ಮುಖ್ಯ ಕಾರಣಗಳಿಂದ ಕನ್ನಡ ನಾಡಿನ ಮುಸಲ್ಮಾನ ಪ್ರಜೆಗಳು ಕನ್ನಡ ಸಾಹಿತ್ಯ ರಚನೆಯಲ್ಲಿ ಪಾಲುಗೊಳ್ಳುತ್ತಿಲ್ಲ. ಇತ್ತೀಚೆಗೆ ಆ ಧರ್ಮದ ಎರಡು ಮೂರು ಜನ ಲೇಖಕರು ಕನ್ನಡದಲ್ಲಿ ಬರೆಯುತ್ತಿದ್ದಾರೆ.

ಉರ್ದುವಿನಲ್ಲಿ ದೊರೆತ ಶಿಕ್ಷಣ, ಹಳೆಯ ಹೈದ್ರಾಬಾದಿನ ಪ್ರದೇಶದಲ್ಲಿ ಹುಟ್ಟಿ ಬೆಳೆದ ಅನುಕೂಲ, ಸೂಕ್ಷ್ಮವಾಗಿ ಜೀವನವನ್ನು ನಿರುಕಿಸುವ ಪ್ರವೃತ್ತಿ ಮತ್ತು ಅವರ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಕ್ರಮಗಳನ್ನು ಅಭ್ಯಸಿಸುವ ಕುತೂಹಲಗಳಿಂದ ಶ್ರೀ ಜಯತೀರ್ಥ ರಾಜಪುರೋಹಿತರು ಈ ಕ್ಷೇತ್ರವನ್ನೂ ತಮ್ಮ ಸಾಹಿತ್ಯ ಕೃತಿಗಳ ವಸ್ತುವಾಗಿ ಬಳಸಿಕೊಳ್ಳುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದಾರೆ. ಪ್ರತಿಯೊಂದು ವಿವರದಲ್ಲಿಯೂ ಅವರಿಗಿರುವ ಸೂಕ್ಷ್ಮ ತಿಳಿವಳಿಕೆಯು ಅವರ ಬರಹಕ್ಕೆ ಖಾಚಿತ್ಯವನ್ನು ಕೊಡುತ್ತದೆ. 'ಹಾಲು – ಜೇನು', 'ಸುಳಿಗಾಳಿ' ಎಂಬ ಹೆಸರುಗಳಲ್ಲಿ ಎರಡು ಭಾಗಗಳಾಗಿ ಪ್ರಕಟವಾಗಿರುವ ಅವರ ಕಾದಂಬರಿಯು ಈ ಗುಣವನ್ನು ಸಾಧಿಸಿದೆ.

'ಜೊಹರಾ' ಕಾದಂಬರಿಯಲ್ಲಿ ಅವರು ಇದೇ ಜೀವನ ಕ್ಷೇತ್ರದ ಸುಮಾರು ಮುನ್ನೂರು ವರ್ಷಗಳಷ್ಟು ಹಿಂದಿನ ಒಂದು ಚಿತ್ರವನ್ನು ರಚಿಸಿದ್ದಾರೆ. ಮೆಡೋಸ್ ಟೇಲರ್ ಅವರ ಐತಿಹಾಸಿಕ ದಾಖಲೆಯ ಗ್ರಂಥಗಳಿಂದ ಮಾಹಿತಿಗಳನ್ನು ಸಂಗ್ರಹಿಸಿ, ಅವುಗಳಿಂದಲೇ ಪ್ರಚೋದನೆಯನ್ನು ಪಡೆದು ಜಲದುರ್ಗ, ಮುದಗಲ್, ಬಿಜಾಪುರ, ಕಲ್ಬುರ್ಗಿ ಮೊದಲಾದ ನವಾಬಷಾಹಿಗಳ ವಿಷಯವಾಗಿ ಇತರ ಮೂಲಗಳಿಂದಲೂ ವಿಷಯವನ್ನು ಸಂಗ್ರಹಿಸಿ ಬರೆದಿರುವ ಈ ಐತಿಹಾಸಿಕ ಕಾದಂಬರಿಯಲ್ಲಿ ಕೂಡ

ಅವರು ತಾವು ಬರೆದಿರುವ ಜೀವನ, ಅದರ ವಿವರಗಳ ಚಿತ್ರಣದಲ್ಲಿ ತಮ್ಮ ಮೊದಲ ಕಾದಂಬರಿಯಲ್ಲಿ ಸಾಧಿಸಿದ ಖಾಚಿತ್ಯವನ್ನೇ ಸಾಧಿಸಿದ್ದಾರೆ. ಸಮಕಾಲೀನ ಜೀವನ ವನ್ನು ಕುರಿತು ಗದ್ಯ ಸಾಹಿತ್ಯ ಕೃತಿಯನ್ನು ಬರೆಯುವಾಗ ಜೀವನಾನುಭವವಿರುವ ಲೇಖಕನು ವಿವರಗಳ ಜ್ಞಾನ ಮತ್ತು ಅವುಗಳನ್ನು ಸೂಚಿಸುವ ಸ್ಪಷ್ಟವಾದ ಆಡು ಮಾತುಗಳ ಕೊರತೆಯಿಂದ ಯಾವ ಭಾಗವನ್ನಾದರೂ ತೇಲಿಸಿ ಸಾಗುವ ಅಗತ್ಯವಾಗು ವುದಿಲ್ಲ. ಆದರೆ ಎಷ್ಟೇ ತಯಾರಿ ಮಾಡಿಕೊಂಡಿದ್ದರೂ ಐತಿಹಾಸಿಕ ವಸ್ತುಗಳನ್ನು ಕುರಿತು ಬರೆಯುವಾಗ ವಿವರಗಳ ಅಜ್ಞಾನವು ಅಲ್ಲಲ್ಲಿ ಅವನ ದೃಷ್ಟಿಯನ್ನು ಮಸುಕು ಮಾಡುವ ಸಂಭವವಿರುತ್ತದೆ. ಆದರೆ ಹಾಗೆ ತೇಲಿಸಿ ಸಾಗುವ ಅಗತ್ಯವು ರಾಜ ಪುರೋಹಿತರಿಗೆ ಎಲ್ಲಿಯೂ ಉಂಟಾಗಿಲ್ಲವೆಂದು ನನಗೆ ಅನಿಸುತ್ತದೆ. ಅಷ್ಟು ಮಾತ್ರವಲ್ಲ, ತಾವು ಸಂಪಾದಿಸಿರುವ ಮೂಲ ಸಾಮಗ್ರಿಯನ್ನೇ ಬಳಸಿಕೊಂಡು ಕಲ್ಪನೆಯ ನೆರವಿನಿಂದ ಇನ್ನಷ್ಟು ವಿಶದವಾಗಿ ಅವರು ಬರೆಯ ಬಹುದಾಗಿತ್ತು. ಹಲವು ಐತಿಹಾಸಿಕ ಕಾದಂಬರಿಗಳಲ್ಲಿ ಒಂದಂಶ ಐತಿಹಾಸಿಕ ಸಾಮಗ್ರಿ ಇದ್ದರೆ ನಾಲ್ಕಾರು ಅಂಶ ಕಲ್ಪನೆಯ ನೆಯ್ಗೆ ಇರುತ್ತದೆ. ಭಾಷೆಯು ಕೂಡ ಆ ಐತಿಹಾಸಿಕ ಅವಧಿಯ ವಾತಾವರಣಕ್ಕೆ ಕೆಲವು ಮಟ್ಟಿಗೆ ಹೊರಗಿನದಾಗಿರುತ್ತದೆ. ಇಂಥ ದೋಷಕ್ಕೆ ಪಕ್ಕಾಗದೆ ಬರೆದಿರುವದರಿಂದ ಈ ಕೃತಿಯ ವಿವರಗಳ ಚಿತ್ರಣವು ಕಥೆಯ ಅವಧಿಗೆ ಸಹಜವೆನಿಸುವಂತಿದೆ.

ಬರೀ ಐತಿಹಾಸಿಕ ನೈಜತೆಯಿಂದ ಸಾಹಿತ್ಯ ಕೃತಿಯಾಗುವದಿಲ್ಲ. ಇಲ್ಲಿ ಬರುವ ಪಾತ್ರಗಳು ಮುದುಕ ದರವೇಷ, ಉಸ್ಮಾನ್ ಬೇಗ್, ಅಬ್ಬಾಸ್ ಖಾನ್, ಚಾಂದ ಬೀಬಿ, ರಂಗನಾಯಕ, ಭರಮನಾಯಕ, ಜೋಹರಾ, ಮೇರಿಯಾ, ಅವಳ ಅಣ್ಣ... ಜೀವಂತವಾಗಿ ಕಾಣುತ್ತಾರೆ. ಇನ್ನೂರ ಮೂವತ್ತು ಪುಟಗಳ ಸಂಕ್ಷಿಪ್ತತೆಯಲ್ಲಿ ಇಷ್ಟೆಲ್ಲ ಪಾತ್ರಗಳನ್ನು ಜೀವಂತಗೊಳಿಸಿರುವದು ಮೆಚ್ಚಬೇಕಾದ ಅಂಶ. ಪೋರ್ಚ ಗೀಸರು, ಬಹಮ್ಮನಿ ದೊರೆಗಳು ಬೇಡರು ಮೊದಲಾದವರ ರಾಜಕೀಯ ಸಂಚು ಗಳೂ ಈ ಪಂಜಿನಲ್ಲಿ ಅಷ್ಟೇ ಸ್ಪಷ್ಟವಾಗಿ ಮೂಡಿವೆ.

ಕಥೆಗೆ ಎಲ್ಲಿಯೂ ನಿಲ್ಲದ ಓಟವಿದೆ. ತವಕ, ಭಾವನೆಯ ತೀವ್ರತೆಗಳನ್ನು ಹುಟ್ಟಿಸುವಂಥ ಸನ್ನಿವೇಶಗಳನ್ನು ಲೇಖಕರು ಇನ್ನಷ್ಟು ಕಲ್ಪನೆಯಿಂದ ಬೆಳಸಿಕೊಳ್ಳ ಬಹುದಾಗಿತ್ತು, ಎನಿಸುತ್ತದೆ. ಆದರೆ ನಾನು ಮೇಲೆ ಸೂಚಿಸಿದಂತೆ ಅವರು ಐತಿ ಹಾಸಿಕ ನೈಜತೆಗೆ ಹೆಚ್ಚು ನಿಷ್ಠೆ ತೋರಿರುವಂತೆ ಕಾಣುತ್ತದೆ. ಸಾಹಿತ್ಯಕ ರಸಗಳನ್ನು ಹಿಂಡುವ ಉದ್ದೇಶದಿಂದ ಐತಿಹಾಸಿಕ ಪಾತ್ರ, ಘಟನೆಗಳನ್ನು ಲೇಖಕನು ಯಾವ ಮಟ್ಟಿಗೆ ಬದಲಾಯಿಸಿಕೊಳ್ಳಬಹುದು ? ರಸ ಮತ್ತು ಅದನ್ನು ಸೂಸಬಲ್ಲ ಕಲ್ಪ ನೆಯ ಚಿತ್ರವೇ ಪ್ರಧಾನವಾಗುವದಾದರೆ ಅದನ್ನು ಒಂದು ಐತಿಹಾಸಿಕ ಘಟನೆಯ ಮೇಲೆ ಇಟ್ಟು ಅಮುಕಿ, ಇತಿಹಾಸವನ್ನು ವಿಕೃತಗೊಳಿಸಿ ಅನಂತರ ಅದನ್ನು ಐತಿ

ಹಾಸಿಕ ಸಾಹಿತ್ಯವೆಂದು ಕರೆಯುವದು ನ್ಯಾಯವೆ ? ಹಾಗಿದ್ದರೆ ಐತಿಹಾಸಿಕ ಸಾಹಿತ್ಯವನ್ನು ಯಾವ ಮಿತಿಯಲ್ಲಿ ಶುದ್ಧ ಸಾಹಿತ್ಯವೆನ್ನಬಹುದು ? ಎಂಬ ಪ್ರಶ್ನೆಗಳನ್ನು ನಾನು ಈ ಹಿಂದೆಯೇ ಒಂದು ಪ್ರಬಂಧದಲ್ಲಿ ಚರ್ಚಿಸಿದ್ದೇನೆ. ಈ ಬಗೆಗೆ ಇದೇ ಕೊನೆಯ ಉತ್ತರ ಎಂದು ನಾನು ಯಾವದನ್ನೂ ಹೇಳಲಾರೆ.

'ಜೊಹರಾ'ದಂಥ ಇನ್ನೊಂದು ಒಳ್ಳೆಯ ಕಾದಂಬರಿಯನ್ನು ಕೊಟ್ಟಿರುವ ರಾಜಪುರೋಹಿತರು ಸಾಹಿತ್ಯ ಪ್ರೇಮಿಗಳ ಹೆಚ್ಚಿನ ಅಭಿಮಾನಕ್ಕೆ ಪಾತ್ರರಾಗಿದ್ದಾರೆ.

# 'ಜೊಹರಾ' ಪಾತ್ರಗಳ ಸುತ್ತಮುತ್ತ

ಪ್ರೊ. ಚೆನ್ನಣ್ಣವಾಲೀಕಾರ
ರಾಯಚೂರು

ಶ್ರೀ ಜಯತೀರ್ಥ ರಾಜಪುರೋಹಿತರ 'ಜೊಹರಾ' ಕಾದಂಬರಿಯ ಮುನ್ನುಡಿಯಲ್ಲಿ ಇರುವ ಎಸ್. ಎಲ್. ಭೈರಪ್ಪನವರ ಈ ಕೆಳಗಿನ ಮಾತುಗಳು ಅರ್ಥಪೂರ್ಣವಾಗಿವೆ :

"ಕಥೆಗೆ ಎಲ್ಲಿಯೂ ನಿಲ್ಲದ ಓಟವಿದೆ. ತವಕ ಭಾವನೆಯ ತೀವ್ರತೆಗಳನ್ನು ಹುಟ್ಟಿಸುವಂಥ ಸನ್ನಿವೇಶಗಳನ್ನು ಲೇಖಕರು ಇನ್ನಷ್ಟು ಕಲ್ಪನೆಯಿಂದ ಬೆಳೆಸಿಕೊಳ್ಳಬಹುದಾಗಿತ್ತು ಎನ್ನಿಸುತ್ತದೆ. ಆದರೆ ನಾನು ಮೇಲೆ ಸೂಚಿಸಿದಂತೆ ಅವರು ಐತಿಹಾಸಿಕ ನೈಜತೆಗೆ ಹೆಚ್ಚು ನಿಷ್ಠೆ ತೋರಿರುವಂತೆ ಕಾಣುತ್ತದೆ. ಸಾಹಿತ್ಯಕ ರಸಗಳನ್ನು ಹಿಂಡುವ ಉದ್ದೇಶದಿಂದ ಐತಿಹಾಸಿಕ ಪಾತ್ರ, ಘಟನೆಗಳನ್ನು ಲೇಖಕನು ಯಾವ ಮಟ್ಟಿಗೆ ಬದಲಾಯಿಸಿಕೊಳ್ಳಬಹುದು ? ರಸ ಮತ್ತು ಅದನ್ನು ಸೂಸಬಲ್ಲ ಕಲ್ಪನೆಯ ಚಿತ್ರವೇ ಪ್ರಧಾನವಾಗುವದಾದರೆ ಅದನ್ನು ಒಂದು ಐತಿಹಾಸಿಕ ಘಟನೆಯ ಮೇಲೆ ಇಟ್ಟು ಅಮುಕಿ, ಇತಿಹಾಸವನ್ನು ವಿಕೃತಗೊಳಿಸಿ ಅನಂತರ ಅದನ್ನು ಐತಿಹಾಸಿಕ ಸಾಹಿತ್ಯವೆಂದು ಕರೆಯುವದು ನ್ಯಾಯವೆ ? ಹಾಗಿದ್ದರೆ ಐತಿಹಾಸಿಕ ಸಾಹಿತ್ಯವನ್ನು ಯಾವ ಮಿತಿಯಲ್ಲಿ ಶುದ್ಧ ಸಾಹಿತ್ಯವೆನ್ನಬಹುದು ?" ಎಂದು ಪ್ರಶ್ನಿಸಿದ್ದು ಬಹಳಷ್ಟು ಆಲೋಚನೆಗೆ ಹಚ್ಚುತ್ತದೆ. 'ಜೊಹರಾ' ಕಾದಂಬರಿಯ ತುಂಬ ಈ ಮಾತುಗಳು ನಮಗೆ ಮತ್ತೆಮತ್ತೆ ಕೇಳಿಸಿದಂತೆಲ್ಲ, ಕಾದಂಬರಿ ಓದುತ್ತಾ ಹೋದಂತೆಲ್ಲ ಓದುವದು ಅರ್ಥಪೂರ್ಣವಾಗಿ ಪರಿಣಮಿಸುತ್ತದೆ.

ಮೆಡೋಸ್ ಟೇಲರ್ ಅವರ ಐತಿಹಾಸಿಕ ದಾಖಲೆ ಗ್ರಂಥಗಳಿಂದ ಮಾಹಿತಿಗಳನ್ನು ಸಂಗ್ರಹಿಸಿ ಅವುಗಳಿಂದಲೇ ಪ್ರಚೋದನೆಯನ್ನು ಪಡೆದು ಈ ಕಾದಂಬರಿಯನ್ನು ಬರೆಯುವ ಸಂದರ್ಭದಲ್ಲಿ ರಾಜಪುರೋಹಿತರು ಏಕಕಾಲಕ್ಕೆ ಇತಿಹಾಸವನ್ನು ಸಾಹಿತ್ಯಕ್ಕೆ ಭಟ್ಟಿ ಇಳಿಸಿದ್ದಾರೆ ಎಂದೆನ್ನಿಸುತ್ತದೆ. ರುಚಿಕಟ್ಟಾದ ಜೊಹರಾ ಅಬ್ಬಾಸ್

ಖಾನ್‌ರ ಕಥೆ ಸಾಗಿದಾಗ ಮಧ್ಯ ಮಧ್ಯ ಇತಿಹಾಸ, ಸಮಾಚಾರ ಸುದ್ದಿ ಬಂದು ಭಾವುಕರಿಗೆ ಸ್ವಲ್ಪಮಟ್ಟಿಗೆ ರಸಭಂಗವಾಗುವಂತೆ ಅನ್ನಿಸುವದು ವಿಶೇಷವಲ್ಲ. ಕಾರಣ ಇದು ಕಲ್ಪನಾ ಕಾದಂಬರಿಯಲ್ಲ. ಇತಿಹಾಸದ ವಿದ್ಯಾರ್ಥಿಗಳು ಪಾಸಾಗಲು ಕಾಟಚಾರ ಕ್ಕಾಗಿ ಓದಬೇಕಾಗಿದ್ದ ಜಡ, ನೀರಸ ವಿಷಯವನ್ನು ಜಯತೀರ್ಥ ರಾಜಪುರೋಹಿತ ಅವರು ತಮ್ಮ ಕುಂಚದಿಂದ ಸಾಹಿತ್ಯಾಭ್ಯಾಸಿಗಳಿಗೆ ಕಲಾತ್ಮಕವಾಗಿ ಕಾದಂಬರಿಯ ರೂಪದಲ್ಲಿ ಬರೆದದ್ದು ಗಮನಿಸುವಂಥದ್ದಾಗಿದೆ. ಹೈದ್ರಾಬಾದ್ ಕರ್ನಾಟಕದ ಮುಸ್ಲೀಮ ಜನಗಳ ಭಾಷೆ, ವೇಷ, ರೀತಿ ರಿವಾಜ, ನಮಾಜ, ವ್ರತಾಚರಣೆ, ಜೀವನ ಧ್ಯೇಯಗಳನ್ನು ಬಿಂಬಿಸುವಲ್ಲಿ ರಾಜಪುರೋಹಿತರ ಕೃತಿಗಳು ಪ್ರಮುಖವಾಗಿವೆ.

'ಜೊಹರಾ' ಕಾದಂಬರಿಯನ್ನು ಲೇಖಕರು ಛಾಯಾ ಭಗವತಿ, ಯಾತ್ರಿಕ ದರವೇಷ, ಜಲದುರ್ಗದ ಜೊಹರಾ ಎಂಬ ಮೂರು ಭಾಗಗಳಲ್ಲಿ ವಿಂಗಡಿಸಿದ್ದಾರೆ. ಇಲ್ಲಿ ಕೆಲವು ಪ್ರಮುಖ ಪಾತ್ರಗಳಿದ್ದರೂ ಅಬ್ಬಾಸ್ ಖಾನ್ ಮತ್ತು ಜೊಹರಾ ಇಲ್ಲಿಯ ನಾಯಕ, ನಾಯಕಿಯರು. ಇಲ್ಲಿ ಬರುವ ಪ್ರತಿಯೊಂದು ಪಾತ್ರ ರೋಷ, ರೊಚ್ಚು, ಕಾಮ, ಪ್ರೇಮ, ತ್ಯಾಗ, ಬಲಿದಾನ, ಶೌರ್ಯ, ಧೈರ್ಯ, ಜ್ಞಾನ, ಮಾತ್ಸರ್ಯಗಳಿಗೆ ಪ್ರಸಿದ್ಧವಾಗಿವೆ. ಬಿಜಾಪುರದಲ್ಲಿ ರಾಣಿ ಚಾಂದಬೀಬಿ ಆಳುವ ಕಾಲಕ್ಕೆ, ಆ ಮನೆತನಕ್ಕೆ ಸಂಬಂಧಪಟ್ಟದ್ದು ಈ 'ಜೊಹರಾ' ಕಾದಂಬರಿಯ ವಸ್ತುವಾಗಿದೆ.

ಈ ಕಾದಂಬರಿಯಲ್ಲಿ ಬರುವ ಮುದಗಲ್ಲ, ಜಲದುರ್ಗ, ಕೊಡೆಕಲ್ಲ, ಕಕ್ಕೇರಿ, ವಾಗನಗೇರಿ ಇವೆಲ್ಲ ಬಿಜಾಪುರ ಅರಸೊತ್ತಿಗೆಗೆ ಸಂಬಂಧಪಟ್ಟ ಊರುಗಳು. ಮುದಗಲ್ಲ ರಾಣಿಯ ಸರದಾರನಾದ ದಿಲಾವರ ಖಾನನ ಜಾಣ್ಮೆ ಮೆಚ್ಚುವಂಥದ್ದು. ಮುದಗಲ್ಲಿಗೆ ಧರ್ಮೋಪದೇಶಕನಾಗಿ ಬಂದ ಅಲ್ಮೇದಾನ ರೂಪಸಿ ವಿಧವಾ ತಂಗಿಯ ಮೇಲೆ ಇಲ್ಲಿಯ ಧರ್ಮಕಾರ್ಯಗಳನ್ನು ವಿಚಾರಿಸಲು ಬಂದ ಡಾಮುಡಿಯಾಗೋನ ಕಣ್ಣು ಬೀಳುವದು. ಮೇರಿಯಾಳನ್ನು ತನ್ನವಳನ್ನಾಗಿ ಮಾಡಿಕೊಳ್ಳಲು ಅವಳ ಅಣ್ಣನ ಮೇಲೆ ಧರ್ಮದ ಆರೋಪಗಳನ್ನು ಹೊರಿಸಿ ಗೋವೆಯ ನ್ಯಾಯಾಸ್ಥಾನಕ್ಕೆ ಕಳಿಸುವ ವಿಚಾರ ಚೆನ್ನಾಗಿದೆ. ಆದರೆ ಅಲ್ಮೇದಾ ಇನ್ನೂ ಊರಿನಲ್ಲಿಯೇ ಇರುವಾಗಲೇ ಚರ್ಚಿನಲ್ಲಿ ಪ್ರಾರ್ಥನೆಗೆ ತೊಡಗಿದ್ದ ಮೇರಿಯೂ ಹೊರಬರುವಾಗ ಆಕೆಯ ಮೇಲೆ ಆಕ್ರಮಣ ಮಾಡುವದು ದುಡುಕಿನದಾಗುತ್ತದೆ. ಆದರೆ ಡಾಮುಡಿಯಾಗೋನಿಂದ ಉಳಿಸಲು ದಿಲಾವರ ಖಾನ್ ಮಾಡುವ ಹಂಚಿಕೆ ಸಕಾಲೀಕವಾದದ್ದು. ಪೋರ್ಚ್‌ಗೀಸ್ ಪಾದರಿಗಳ ಮೇಲೆ ಸಂಶಯ ಬಂದು ಬಿಜಾಪುರದ ಅರಸರು ಬರೆದ ಪತ್ರದ ಲಾಭ ಪಡೆದು ಅವರಿಬ್ಬರನ್ನು ಬಂಧಿಸಿ ಜಲದುರ್ಗದ ದರವೇಷರ ಹತ್ತಿರ ಕಳಿಸಿದ್ದು, ಬಂದ ಕುತ್ತಿನಿಂದ ಪಾರು ಮಾಡುವದು, ತನ್ನಲ್ಲಿಟ್ಟುಕೊಂಡರೆ ಯುದ್ಧದಿಂದ ಬರುವ ಯೌವನಮತ್ತ ತನ್ನ ಮಗ, ಮೇರಿಯಾಳ ರೂಪದಿಂದ ಕೆಡುವ ಅಂಜಿಕೆಯಿಂದ ಉಳಕೊಳ್ಳುವದು ಅತೀ ಜಾಣ್ಮೆಯದಾಗಿದೆ.

ಕೊಡೆಕಲ್ಲದ ರಂಗನಾಯಕ, ಕಕ್ಕೇರಿಯ ಭರಮನಾಯಕ, ವಾಗನಗೇರಿಯ ಪಾಮನಾಯಕ ಪರಮ ಸ್ವಾಮಿ ಭಕ್ತರು. ರಾಣಿ ಚಾಂದಬೀಬಿಯ ಸರದಾರನಾದ ಅಬ್ಬಾಸ್ ಖಾನ್ ರಣದಲ್ಲಿ ಗಾಯಗೊಂಡು ಕುದುರೆಯಿಂದುರುಳಿ ಬಿದ್ದಾಗ ಹೋಗಿ ಅವನನ್ನು ಎತ್ತಿ ತಂದು ಹೊಳೆದಾಟಿಸಿದ್ದು, ದರವೇಷನಲ್ಲಿದ್ದಾಗ ತನ್ನ ಗಾಯ ಗಳನ್ನು ಗಮನಿಸದೆ ಅಬ್ಬಾಸ್ ಖಾನನ ಗುಣಮುಖದ ಬಗ್ಗೆ ಚಿಂತಿಸಿದ್ದು ಮುಖ್ಯ ವಾದವುಗಳು. ಅಷ್ಟೆ ಅಲ್ಲ ಜಲದುರ್ಗದ ಉಸ್ಮಾನ್‌ಬೇಗ ಜೊಹರಾಳ ರೂಪಕ್ಕೆ ಹುಚ್ಚನಾಗಿ ಒತ್ತಾಯದಿಂದ ಅವಳನ್ನು ವಶಮಾಡಿಕೊಳ್ಳಲು ಬಯಸಿದಾಗ ಆ ಕುತ್ತಿ ನಿಂದ ಪಾರು ಮಾಡಿದವರು ಬೇಡರ ಈ ನಾಯಕರು.

ಡಾಮಡಿಯಾಗೊ ಮೇರಿಯಾಳಿಗಾಗಿ ತಾಳ್ಮೆ ತಪ್ಪಿದರೆ ಜಲದುರ್ಗದ ಸರದಾರ ನಾದ ಉಸ್ಮಾನ್‌ಬೇಗ ದರವೇಷನ ಮೊಮ್ಮಗಳಾದ ಜೊಹರಳಿಗಾಗಿ ಹುಚ್ಚನಾಗು ವನು. ಆದರೆ ಜೊಹರಾಳ ಮನಸ್ಸು ಮಾತ್ರ ಅಬ್ಬಾಸ್ ಖಾನನಲ್ಲಿ ನೆಟ್ಟಿರುವದು. ಅದಕ್ಕಾಗಿ ಆಕೆ ತನಗೆಷ್ಟೆ ಉಸ್ಮಾನ್‌ಬೇಗ ಆಶೆ–ಆಮಿಷಗಳನ್ನು ತೋರಿಸಿದರೂ ವಶಳಾಗುವದಿಲ್ಲ. ಮದುವೆಗೆ ಒಪ್ಪುವದಿಲ್ಲ. ಇಲ್ಲಿ ಅವಳ ಶೀಲದ, ಪವಿತ್ರ ಪ್ರೇಮದ ಅಗ್ನಿ ಪರೀಕ್ಷೆಯೆ ನಡೆದು ಹೋಗುವದು.

ಇಡೀ ಕಾದಂಬರಿಯ ಉದ್ದಕ್ಕೂ ಗಂಭೀರವಾಗಿ ಕಾಣಿಸುವ ಪಾತ್ರವೆಂದರೆ ರಾಣಿ ಚಾಂದ್‌ಬೀಬಿಯ ಸರದಾರನಾದ ಅಬ್ಬಾಸ್ ಖಾನನದು. ದಂಗೆಯೆದ್ದವರನ್ನು ಸದೆಬಡಿಯಲು ಹೊರಟಾಗ ತಮ್ಮ ಸೇನೆಯವನಾದ ಎಲಿಯಾಸ್ ಖಾನ್ ವೈರಿಗಳ ಕಡೆಯಾಗಿ ತಿರುಗಿಬಿದ್ದಾಗ ಸ್ವಾಮಿಭಕ್ತನಾದ ಅಬ್ಬಾಸ್ ಖಾನನಿಗೆ ತಡೆಯುವದಾಗ ಲಿಲ್ಲ. ದೇಶದ್ರೋಹಿಗಳನ್ನು ಇಡಬಾರದೆಂದು ಎಲಿಯಾಸ್ ಖಾನನ ಮೇಲೆ ಎರಗಿ ಯುದ್ಧ ಮಾಡಿ ಅವನನ್ನು ಮುಗಿಸಿದ್ದು ಅಬ್ಬಾಸ್ ಖಾನನ ಸ್ವಾಮಿನಿಷ್ಠೆ ಮತ್ತು ಶೂರತ್ವಕ್ಕೆ ಸಾಕ್ಷಿಯಾಗುವದು. ಯುದ್ಧದಲ್ಲಿ ಆದ ಗಾಯಗಳಿಗೆ ಶುಶ್ರೂಷೆ ಪಡೆ ಯಲು ಜಲದುರ್ಗದ ದರವೇಷನಲ್ಲಿರುವಾಗಲೇ ಅವನ ಮೊಮ್ಮಗಳಾದ ರೂಪಸಿ ಜೊಹರಾಳನ್ನು ನೋಡಿದ್ದು. ಅಬ್ಬಾಸ್ ಖಾನ್–ಜೊಹರಾಳ ಪ್ರೀತಿ ಸಿನೆಮಾದಲ್ಲಿ ಬರುವ ಪ್ರೀತಿಯಲ್ಲ. ಬರೀ ಒಬ್ಬರಿಗೊಬ್ಬರೂ ಕಣ್ಣಿಂದ ನೋಡಿದರೆ ಹೊರತು ಒಬ್ಬರೆದುರು ಒಬ್ಬರು ಬಾಯಿ ತೆರೆದು ಹೇಳಿದವರಲ್ಲ. ಅತ್ತು ಕರೆದು ಗೋಳಾ ಡಿದವರಲ್ಲ. ಕೊನೆಗೆ ರಾಣಿ ಚಾಂದಬೀಬಿಯೇ ಲಗ್ನದ ಮಾತೆತ್ತಿದಾಗ ಮಾತ್ರ ತನ್ನ ಮನಸ್ಸು ಅಬ್ಬಾಸ್ ಖಾನನ ಮೇಲಿರುವದೆಂದು ತಿಳಿಸುವಲ್ಲಿ ಜೊಹರಾ ಪ್ರೇಮದ ಬಗ್ಗೆ ಇಟ್ಟು ಕೊಂಡಿರುವ ಗೌರವ ಮತ್ತು ಹಿಡಿತ ಗೊತ್ತಾಗುವದು.

ಇಲ್ಲಿ ಬರುವ ಪಾತ್ರಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದಾಗ ಕೆಲ ಪಾತ್ರಗಳ ಬಗ್ಗೆ ಮರುಕ, ಅನುಕಂಪ ಕೆಲ ಪಾತ್ರಗಳ ಬಗ್ಗೆ ಆಶ್ಚರ್ಯ, ಆನಂದ ಏಕಕಾಲಕ್ಕೆ ಉಂಟಾಗುವುದು. ಮೇರಿಯಾಳ ಬಗ್ಗೆ ವಿನಾಕಾರಣ ಭ್ರಮೆಗೊಳ್ಳುವ ಡಾಮಡಿ

ಯಾಗೋ, ಜೊಹರಾಳ ಬಗ್ಗೆ ಹುಚ್ಚನಾಗುವ ಉಸ್ಮಾನ್‌ಬೇಗನ ಬಗ್ಗೆ ಮರುಕ ಉತ್ಪನ್ನವಾಗುವದು. ನಿಕಾ ಆಗಿರದಿದ್ದರೂ ಆಗಿದೆ ಎಂದು, ಆಕೆ ತನ್ನ ಹೆಂಡತಿ ಎಂದು ಬಿಜಾಪುರದ ಚಾಂದ್‌ಬೀಬಿ ಮತ್ತು ಇಬ್ರಾಹಿಮ್ ದೊರೆಯೆದುರು ತನ್ನ ವಿಚಾರಣೆ ನಡೆಸಿದಾಗ ಕೂಗಿಕೊಳ್ಳುವದು, ಅವನೆಷ್ಟು ಜೊಹರಾಳಿಗಾಗಿ ಭ್ರಮೆ ಗೊಂಡಿದ್ದನೆಂಬುದು ಗೊತ್ತಾಗುವದು.

ಇಲ್ಲಿ ದರವೇಷನ ಪಾತ್ರ ಮಾನವೀಯ ಗುಣಗಳಿಗೆ ತಕ್ಕಂತೆ ಏರಿಳಿವುಗಳಿಂದ ಕೂಡಿದೆ. ಮನುಷ್ಯನಾಗಿ ಎತ್ತರಕ್ಕೇರಿದರೂ, ಅವನಲ್ಲಿ ಕೆಲವು ದೌರ್ಬಲ್ಯಗಳಿರು ವದು ಎನ್ನಲಿಕ್ಕೆ ಜೊಹರಾಳ ಅಜ್ಜ ದರವೇಷನನ್ನು ನೋಡಬಹುದು. ಬಿಜಾ ಪುರದ ಮೊದಲನೆಯ ಇಬ್ರಾಹಿಮ್ ಆದಿಲ್‌ಶಾಹನಿಂದ ಕಣ್ಣು ಕೀಳಿಸಿಕೊಂಡು ಜಲ ದುರ್ಗದಲ್ಲಿ ತನ್ನ ಮೊಮ್ಮಗಳೊಂದಿಗೆ ಇದ್ದ ದರವೇಷ ತನ್ನ ಔಷಧೋಪಚಾರ ಗಳಿಂದ ಮುಸ್ಲೀಮ ಆಚಾರ ವಿಚಾರಗಳಿಂದ ಎಲ್ಲರಿಗೂ ಬೇಕಾದವನಾಗಿ 'ವಲಿ' ಯಾಗುವ ಎತ್ತರಕ್ಕೆ ಹೋಗಿದ್ದಾನೆ. ಆದರೆ ಜೊಹರಾಳನ್ನು ಗೋಳಾಡಿಸಿದ ಉಸ್ಮಾನ್ ಬೇಗನನ್ನು ಕೆಲಸದಿಂದ ತೆಗೆದ ಸುದ್ದಿ ಕೇಳಿದಾಗ: "ದೇವರೆ ನನ್ನನ್ನು ಉಳಿಸು. ಆ ಉಸ್ಮಾನ್‌ಬೇಗನಿಗೆ ಶಾಸ್ತಿಯಾಗುವಂತೆ ಮಾಡಿಸುವೆ" ನೆಂದದ್ದು (ಪುಟ. 180).

ಈ ಹಿಂದೆ ತನ್ನನ್ನು ಗೋಳಾಡಿಸಿದ, ಕಣ್ಣು ಕೀಳಿಸಿದ ಇಬ್ರಾಹಿಮ್ ಆದಿಲ ಶಾಹರ ಗೋರಿಯ ಹತ್ತಿರ ಮಂಡಿಯೂರಿ ಕುಳಿತಿದ್ದೇಕೆ ಎಂದು ಜೊಹರಾ ಕೇಳಿ ದಾಗ: "ಬೇಟಿ ನಿನಗೆ ಗೊತ್ತಿಲ್ಲ. ಸಮಯ ಬಂದಾಗ ತಿಳಿದೀತು. ಈ ಬಾದಷಹ ಇಬ್ರಾಹಿಮ್ ಆದಿಲ್ ನನ್ನನ್ನು ಯಾವ ದುಃಸ್ಥಿತಿಗೆ ತಂದ ಎಂಬುದು"(ಪುಟ 185) ಎಂದು ಸಿಟ್ಟಿಗೇಳುವ ಪ್ರಸಂಗ ನೋಡಿದಾಗ ಎಂಥ ಮಹಾತ್ಮನಲ್ಲೂ ದುರ್ಗುಣಗಳು ಸಂಪೂರ್ಣವಾಗಿ ಹೋಗಲಾರವು ಎಂದು ವಿದಿತಪಡಿಸುವದು.

ಜೊಹರಾ ಮತ್ತು ಅಬ್ಬಾಸ್‌ಖಾನರ ಗಂಭೀರ ಪ್ರೀತಿಯ ಮಧ್ಯ ರಾಣಿ ಚಾಂದ ಬೀಬಿ ಇಬ್ಬರ ತಾಯಾಗಿ ಬಂದು ಅವರಿಬ್ಬರನ್ನೂ ಒಂದುಗೂಡಿಸುವಳಾಗುತ್ತಾಳೆ. ಒಬ್ಬರ ಮಾತು ಕೇಳಿ ತಕ್ಷಣವೇ, ಮತಾಂಧಳಾಗಿ ಬೆಚ್ಚಿ ಬೀಳುವ ಮಹಾರಾಣಿ ಅಲ್ಲ, ಆಕೆ. ಪ್ರತಿಯೊಂದು ವಿಷಯವನ್ನು ಸಾರಾಸಾರವಾಗಿ ವಿಚಾರಮಾಡಿಯೇ ನ್ಯಾಯನಿರ್ಣಯಕ್ಕೆ ಬರುವಳು. ಅಲ್ಮೇದಾ ಮೇರಿಯಾರ ವ್ಯಕ್ತಿತ್ವ ಗುರುತಿಸಿ ತನ್ನಲ್ಲಿ ಇಟ್ಟುಕೊಳ್ಳುವ, ಅಬ್ಬಾಸ್ ಖಾನ್ ಜೊಹರಾರ ಪ್ರೀತಿ ಅರಿತು ಒಂದು ಗೂಡಿಸುವ, ದುಷ್ಟ ಉಸ್ಮಾನ್‌ಬೇಗನಿಗೆ ರಾಜ್ಯದ ಗಡಿಪಾರು ಮಾಡುವ, ದರ ವೇಷನಿಗೆ ಬಿಜಾಪುರದಲ್ಲಿಯೇ ನೆಲೆಯೂರುವಂತೆ ಆಶ್ರಯ ಕಲ್ಪಿಸುವ, ತನ್ನ ತವರು ಮನೆಯವರು ಬಂಡೆದ್ದಾಗ ಅವರ ಮೇಲೆ ದಂಡು ಕಳಿಸುವಾಗ ಮರುಗುವ ಚಾಂದ ಬೀಬಿ ಮಾನವೀಯ ಮೌಲ್ಯಗಳ ಗಣಿಯಾಗಿ ಕಾಣುತ್ತಾಳೆ.

'ಜೊಹರಾ'ದಲ್ಲಿ ಬರುವ ಕೇಶಮ್ಮ, ಮಾಮೂಲೂ, ಲತೀಫಾ, ಜಪೂರಾಬಿ, ಚಿಸ್ತಿ, ಪೀರನ್‌ಬಿ, ಗುಲಾಬಿ ಪಾತ್ರಗಳು ಸಣ್ಣ ಸಣ್ಣವಾಗಿದ್ದರೂ ಅವರು ವಹಿಸುವ ಪಾತ್ರಗಳಿಂದ ಕಾದಂಬರಿಯಲ್ಲಿ ಹೊಸ ತಿರುವು ತಂದು, ಹಾಸ್ಯ ಉಕ್ಕಿಸಿ ಬದುಕಿನ ವಿಚಿತ್ರಗಳ ಪರಿಚಯ ಮೂಡಿಸುವದು. ಒಬ್ಬ ವೀರ ತನ್ನ ಮೇಲೆ ಬಂದ ಅಪಾದನೆಯಿಂದ ಪಾರಾಗಬೇಕಾದರೆ ದ್ವಂದ್ವ ಯುದ್ಧ ಮಾಡುವ ಮಾತು, ಮುಸ್ಲೀಮ ಮತ್ತು ಹಬಸಿ ಜನಗಳಲ್ಲಿ ಇರುವ ವೈರದಿಂದ ಆಗುವ ಖೂನಿಗಳು ಗಾಬರಿ ಹುಟ್ಟಿಸುವುವು.

ತಾತ ದರವೇಷ ತಪ್ಪಿದಾಗಲೂ ಬೆಳೆಯುತ್ತ ಹೋಗುವ ಪಾತ್ರವಾದ ಜೊಹರಾ, ವೈರಿಗಳ ಕುತಂತ್ರಗಳನ್ನು ತನ್ನ ಶೂರತನದಿಂದ ಗೆಲ್ಲುತ್ತ ಹೋಗುವ ಅಬ್ಬಾಸ್ ಖಾನ್ ಎಂಥ ಪ್ರಸಂಗದಲ್ಲೂ ನ್ಯಾಯದ ದೇವತೆಯಾಗಿ ನಿಲ್ಲುವ ರಾಣಿ ಚಾಂದಬೀಬಿ, ಸದಾ ತಮ್ಮ ಸೇವೆ, ಸದ್ಗುಣಗಳಿಂದ ಎಂಥ ಸ್ಥಿತಿಯಲ್ಲೂ ವಿಚಲಿತರಾಗದಿರುವ ಪಾದರಿ ಅಲ್ಮೇರಾ, ಮೇರಿಯಾ, ಸ್ವಾಮಿ ಭಕ್ತರಾದ ರಂಗನಾಯಕ, ಭರಮನಾಯಕ, ಪಾಮನಾಯಕರ ಪಾತ್ರಗಳು ತಮ್ಮ ವಿಶಿಷ್ಟ ವ್ಯಕ್ತಿತ್ವದಿಂದ ಓದುಗರನ್ನು ಜಾಗೃತವಾಗಿಡುವುವು.

"ಅವಶ್ಯ ಮಗು. ನಿಜವಾದ ಇಸ್ಲಾಮಿನಲ್ಲಿ ಜಾತಿಯ ಬೇಧವಿಲ್ಲ ಕರುಣೆ ತೋರುವಲ್ಲಿ" (ಪುಟ. 4)

"ಹೌದು, ಅದು ನಿಜ. ಮಾನವೀಯತೆಗೆ ಮತೀಯ ಚೌಕಟ್ಟಿನ ಬಂಧನವೇಕಿರಬೇಕು" (ಪುಟ. 64)

"ನಾನು ನನ್ನದೆಂಬ ವಿಚಾರ ವೈಶಿಷ್ಟ್ಯಗಳಿಂದಲೇ ಇಷ್ಟೆಲ್ಲ ಕೊರಗು. ಆದ ಕಾರಣ ವ್ಯಕ್ತಿತ್ವದ ವೈಶಿಷ್ಟ್ಯವೇ ಬೇಡ. ನಾವು ಫಕೀರರು ಊರಿಂದೂರಿಗೆ ನಡೆಯಬೇಕು, ಭಿಕ್ಷೆ ಬೇಡಬೇಕು. ಬಂದರೆ ಬಂದಷ್ಟರಲ್ಲಿ ತಿನ್ನಬೇಕು" (ಪುಟ. 159) ಎನ್ನುವ ದರವೇಷ.

"ನಾವು ಹೋಗೋಣ ಬಾಬಾ. ಈ ಜಗತ್ತು ನಮ್ಮನ್ನು ನಾವಿರುವಂತೆ ಇರಗೊಡುವುದಿಲ್ಲ. ದೇವರೆ ಗತಿ. ನಾವೇನು ಸಾಯುವುದಿಲ್ಲ. ನಡೆ ಬಾಬಾ ಹೋಗೋಣ" (ಪುಟ. 70)

"ಸತ್ತವನ ಮೇಲೆ ಕೋಪವೇಕೆ ಬಾಬಾ ಕ್ಷಮಿಸಿ ಬಿಡು" (ಪುಟ. 185) ಎನ್ನುವ ಜೊಹರಾ

"ವಂಚಕರು ದುರಾಶೆಯವರು, ನಮ್ಮಲ್ಲಿಯೂ ಇದ್ದಾರೆ ತಾಯಿ. ಅವರಿಗೆ ಆಸ್ತಿ, ಆನೆ, ಕುದುರೆ, ಸಂಪತ್ತು ಎಲ್ಲಬೇಕು. ದೇವರೆ ಬೇಡ" (ಪುಟ. 141)

"ನಿನ್ನ ಪ್ರೀತಿಗಾಗಿ ಏನು ಹೇಳಲಿ ಖಾನ್. ನಾನು ನಿನಗಾಗಿ ವಿನಮ್ರನಾಗಿ ಪ್ರಾರ್ಥಿಸುತ್ತೇನೆ. ಶೂರರಾದರೂ ಅನವಶ್ಯಕ ಆಪತ್ತುಗಳನ್ನು ಎದುರಿಸಬಾರದು" (ಪುಟ. 144)

ಎನ್ನುವ ಅಲ್ಮೇಡಾ ಫಾದರಿಯಂಥವರ ಹಲವಾರು ಅನುಭವದ ಮಾತುಗಳಿಂದ ಈ ಕಾದಂಬರಿ ಶ್ರೀಮಂತವಾಗಿರುವುದು.

ಶ್ರೀ ರಾಜಪುರೋಹಿತರ ಕಾವ್ಯಶೈಲಿಗೆ 179ನೇ ಪುಟದಲ್ಲಿ ಬರುವ ಕೆಲವು ಸಾಲು ನೋಡಿ :

'ಸೆರಗನ್ನು ಟೊಂಕಕ್ಕೆ ಸುತ್ತಿ ಕೈಬೀಸಿ ಸಾರಿಸುವ ಬೇಡರ ಹುಡುಗಿಯರಿಗೆ ಕಿರಿ ಕುಬುಸದಡಿಯಿಂದ ತೂರಿ ಹೊರಕಾಣಿಸುವಷ್ಟು ಎದೆ ಏನೋ ಇದ್ದವು. ಆದರೆ ಭೀಮನಿಗೆ ನೋಡುವಷ್ಟು ಎದೆ ಇರಬೇಡವೆ? ಇದನ್ನು ಕೇಶಮ್ಮನಿಗೆ ಹೇಳುವ ಎದೆ ಯಾರಿಗೆ ?"

ಚಾಂದ ಬೀಬಿ, ಮತಾಂಧ ಚಿಷ್ತಿಗೆ ಹೇಳಿದ ಈ ಮಾತನ್ನು ಲೇಖಕರು ಭಾರತದ ಜನತೆಗೇ ಹೇಳುವಂತಿದೆ.

"ಎಚ್ಚರಿಕೆ ! ನಿನ್ನ ಧರ್ಮನಿಷ್ಠೆ ಇಸ್ಲಾಮಿಗೆ ಕಲಂಕ ತರುವಷ್ಟು ಕುರುಡಾಗದಿರಲಿ. ಈ ದೇಶದಲ್ಲಿ ಇಸ್ಲಾಂ ಉಳಿಯುವದಾದರೆ ಇತರ ಧರ್ಮಗಳೊಡನೆಯೇ ಉಳಿದೀತು" (ಪುಟ. 135)

ಈ ಕಾದಂಬರಿ ನಮ್ಮನ್ನು ಸೆಳೆಕೊಳ್ಳಲು ಕಾರಣ ಇತಿಹಾಸದ ಘಟನೆಗಳ ಜೊತೆಗೆ ಅದೇ ಜನಾಂಗದ ಭಾಷೆಯನ್ನು ಕನ್ನಡದಲ್ಲಿ ಸೇರಿಸಿ ಬರೆದದ್ದು ಅಥವಾ ಉರ್ದುವನ್ನು ಹೇಳಿಸಿ ನಂತರ ಬ್ರಾಕೆಟ್‌ನಲ್ಲಿ ಕನ್ನಡದಲ್ಲಿ ಅನುವಾದಿಸಿದ್ದಕ್ಕೆ ಒಂದು ಉದಾಹರಣೆ :

"ಅಚ್ಛಾ, ಜರೂರ್ ಆವೂಂಗಿ. ಬಾಜಾಭಿ ಲಾವೂಂಗಿ. ಗಾನಾಭೀ ಸುನಾವೂಂಗಿ ಠೀಕ್ ? ಅಬ್ ಚಲೋ ಖುದಾ ಹಾಫೀಜ್." (ಒಳ್ಳೇದು, ಅವಶ್ಯ ಬರುವೆ. ವಾದ್ಯವನ್ನೂ ತರುವೆ, ಹಾಡನ್ನೂ ಹಾಡುವೆ. ಆಯಿತೊ ? ಈಗ ನಡೆಯಿರಿ).

ಯಾವಾಗಲೂ ಕಾದಂಬರಿಕಾರ ದೊಡ್ಡವನಾಗುವದು ವಸ್ತುವಿನಿಂದ ದೂರ ನಿಂತುಕೊಂಡು, ಮೋಹಗೊಳ್ಳದೆ ಅನ್ಯನಾಗಿ ಬರೆಯುತ್ತ ಹೋದಾಗ ಅಂಥ ಸಂದರ್ಭದಲ್ಲಿಯೇ ಲೇಖನಿಯಲ್ಲಿ ತೂಕತಪ್ಪುವ ಸಾಧ್ಯತೆಗಳು ಕಡಿಮೆ ಇರುವುವು. ಒಂದೆರಡು ಕಡೆ ಪಾತ್ರ ಪ್ರಸಂಗಗಳಲ್ಲಿ ತೂಕ ತಪ್ಪುವಂತೆ ಕಂಡುಬಂದರೂ ಇಡೀ ರಾಜಪುರೋಹಿತರ ಬರಹ – ಅನ್ಯವಾಗಿದ್ದುಕೊಂಡು ಬರೆದ ಕಾರಣ ಈ ಕೃತಿಯ ಬಂಧ ಹೆಚ್ಚಲು ಕಾರಣವಾಗಿದೆ.

# ಜೊಹರಾ

**ಪ್ರೊ. ಗೋಪಾಲ ಆಶ್ರಿತ**

ಬಿಜಾಪುರದ ಸುಲ್ತಾನರ ಇತಿಹಾಸದೊಳಗೆ ಇಣಿಕಿ ನೋಡುವ ಐತಿಹಾಸಿಕ ಕಾದಂಬರಿ 'ಜೊಹರಾ'. ಇದು ರಾಜಪುರೋಹಿತರ ಮೂರನೆಯ ಕಾದಂಬರಿ. 'ಜೊಹರಾ' ಇತಿಹಾಸದ ದೃಷ್ಟಿಯಿಂದ ಮಹತ್ವವಾದ ಪಾತ್ರವೇನಲ್ಲದಿದ್ದರೂ ಏನೂ ಅರಿಯದ ಮುಗ್ಧ ಚೆಲುವೆಯ ಜೀವನದಲ್ಲಿ ವಿಧಿಯ ಪ್ರವೇಶದಿಂದ ಬರಡಾಗುತ್ತಿದ್ದ ಬದುಕನ್ನು ಕೊನೆಗೆ ದೈವ ಸಹಾಯದಿಂದ ಬಂಗಾರವನ್ನಾಗಿ ಮಾಡಿಕೊಂಡಳೆಂಬುದನ್ನು ತಿಳಿಸುತ್ತದೆ. ಒಟ್ಟು ದುರ್ದೈವದ ಘಟನೆಗಳಿಂದ ಪ್ರಾರಂಭವಾಗುವ ಈ ಕಾದಂಬರಿ ದೈವದೊಲುಮೆಯಿಂದ ಮಂಗಳದಲ್ಲಿ ಮುಕ್ತಾಯವಾಗುತ್ತದೆ.

'ಜೊಹರಾ' ಎರಡು ಮುಗ್ಧ ಜೀವಿಗಳ ಅಥವಾ ಕುಟುಂಬಗಳ ಕಥಾವಸ್ತು. ಅನ್ಯಮತೀಯರಾದರೂ ಅನನ್ಯ ನಡವಳಿಕೆ, ಸದ್ಗುಣ, ಸಚ್ಚಾರಿತ್ರ್ಯ ಮೊದಲಾದ ದೃಷ್ಟಿಗಳಿಂದ ಮಾನವನಿಗೆ ಮೀರಿದ ಜಾತಿಗೆ ಸಂಬಂಧಪಟ್ಟವರು. ಗುಣ, ಸ್ವಭಾವ, ವೃತ್ತಿ-ಜೀವನ ಕ್ರಮ, ವರ್ತನೆ, ಸುಖ ದುಃಖ ಮುಂತಾದ ವಿಷಯಗಳಲ್ಲಿ ಸಹಭಾಗಿಗಳೂ ಸಮಾನ ಧರ್ಮಿಗಳೂ ಆದ ದರವೇಷೆ ಮತ್ತು ಆತನ ಮುದ್ದು ಮೊಮ್ಮಗಳು ಜೊಹರಾ ಒಂದು ಕುಟುಂಬ. ಇವರು ಜಲದುರ್ಗದಲ್ಲಿ ವಾಸಿಸುತ್ತಿದ್ದರು. ಪೋರ್ತುಗಾಲದಿಂದ ಮತಾಂತರಗೊಳಿಸುವ ಕಾರ್ಯಕ್ಕೆ ನೇಮಕವಾಗಿ ಮುದಗಲ್ ಚರ್ಚಿಗೆ ಪಾದ್ರಿಯಾಗಿ ಬಂದ ಫ್ರಾನ್ಸಿಸ್-ಡಿ-ಅಲ್ಮೇದಾ ಮತ್ತು ಆತನ ಅಕ್ಕರೆಯ ವಿಧವೆ ತಂಗಿ ಡೊನಾ ಮೇರಿಯಾ ಇನ್ನೊಂದು ಕುಟುಂಬ. ಈ ಎರಡೂ ಕುಟುಂಬಗಳಲ್ಲಿ ಜೀವಿಸುತ್ತಿದ್ದ ಚೆಲುವ ಜೀವಿಗಳು, ರೂಪು ನಡತೆಗಳಿಂದಲೂ ಚೆಲುವರಾಗಿದ್ದರಲ್ಲದೆ ಜನರ ಒಲವನ್ನೂ ಸಂಪಾದಿಸಿದ್ದರು. ಜಲದುರ್ಗ ಮತ್ತು ಮುದಗಲ್ ಕೋಟೆಗಳು ಬಿಜಾಪುರದ ಸುಲ್ತಾನರಾದ ಇಬ್ರಾಹೀಂ ಆದಿಲ್‌ಶಾನ ವಶದಲ್ಲಿದ್ದವು. ಪತಿ ತೀರಿದ ಮೇಲೆ ಚಾಂದಬೀಬಿ ರಾಜ್ಯಾಡಳಿತದ ಸೂತ್ರಗಳನ್ನು ತನ್ನ ಕೈಯೊಳಗೆ ತೆಗೆದುಕೊಂಡಿದ್ದಳು.

ಸೌಂದರ್ಯದ ಕುಡಿಯಾದ ಜೊಹರಾ ಜಲದುರ್ಗದ ಕಿಲ್ಲೇದಾರನಾದ

ಉಸ್ಮಾನ್ ಬೇಗನ ದೌರ್ಜನ್ಯಕ್ಕೆ,ಮತ್ತು ಚೆಲುವನ್ನು ಯೌವನವನ್ನು ಗೌಪ್ಯವಾಗಿರಿಸಿ ಕೊಂಡ ಮೇರಿಯಾ ಹೊಸ ಪಾದ್ರಿಯಾದ ಡಾವುಡಿಯಾಗೋನ ಬಲವಂತಕ್ಕೆ ಈಡಾಗಿ ಪರಿಪರಿಯ ಕಷ್ಟಗಳನ್ನನುಭವಿಸಿ ಕೊನೆಗೆ ಬಿಜಾಪುರದಲ್ಲಿ ಕೂಡಿದಾಗ ಕಥೆ ಸುಖಾಂತ ವಾಗಿ ಕೊನೆಗೊಳ್ಳುತ್ತದೆ. ಇವರ ಜೀವನದಲ್ಲಿ ಒದಗುವ ಸುಖ ದುಃಖಗಳಿಗೆ ಪೋಷಕವಾಗಿ ಅನೇಕ ಪಾಳೆಯಗಾರರ ಮತ್ತು ಸರದಾರರ ಚಿತ್ರಣ ಬರುತ್ತದೆ. ಅವರಲ್ಲಿ ಬಿಜಾಪುರದ ಸರದಾರನಾದ ಅಬ್ಬಾಸ್‌ಖಾನ್ ಮತ್ತು ಕೊಡೇಕಲ್ ರಂಗ ನಾಯಕ ಮುಖ್ಯರು. ಕಾದಂಬರಿಯ ಒಟ್ಟಂದದ ಸೌಂದರ್ಯವನ್ನು ಬೆಳಗಲು ಕಕ್ಕೇರಿಯ ಭರಮನಾಯಕ, ಮುದಗಲ್ಲಿನ ನಹಾಬ ದಿಲಾವರ್‌ಖಾನ್, ರಂಗ ನಾಯಕನ ಹೆಂಡತಿ ಕೇಶವ್ವ, ಕೆಂಭಾವಿಯ ಕಾಜಿ, ಸುಲ್ತಾನರ ಧರ್ಮಗುರು ಚಿಷ್ತಿ, ಬಿಜಾಪುರದ ರಾಣಿ ಚಾಂದಬೀಬಿ ಮತ್ತು ಆಕೆಯ ಸೊಸೆ ತಾಜುನ್ನಿಸಾ, ಬಿಜಾಪುರದ ಮತ್ತೊಬ್ಬ ಸರದಾರ—ಅಬ್ಬಾಸ್‌ಖಾನನ ಕಕ್ಕ—ಹಿಮಾಯತ್ ಖಾನ್ ಮತ್ತು ಆತನ ಹೆಂಡತಿ ಫಾತಿಮಾ ಮುಂತಾದ ಪಾತ್ರಗಳು ಬರುತ್ತವೆ. ಇವುಗಳಲ್ಲದೆ ಪಾನವಾಲಿ ಗುಲಾಬಿ ಮತ್ತು ಆಕೆಯ ಸಂಗಾತಿ ಪಿರೀನಬಿ ದರವೇಷನ ಸೇವಕನಾದ ಅಹಮದ್, ಮಾಮುಲಾ ಮತ್ತು ವಾಗನಗೇರಿಯ ನಾಯಕ ಮುಂತಾದ ಚಿಕ್ಕಪುಟ್ಟ ಪಾತ್ರಗಳೂ ತಮ್ಮ ಸ್ಥಾನಗಳಲ್ಲಿ ಬೆಳಗುತ್ತವೆ.

ಕಾದಂಬರಿಯಲ್ಲಿ ಸಮಾವೇಶವಾದ ಮತ್ತು ಚರಿತ್ರೆಯ ದೃಷ್ಟಿಯಿಂದ ಉಲ್ಲೇಖಿಸಿದ ಪ್ರದೇಶಗಳೆಂದರೆ ಮುದಗಲ್, ಜಲದುರ್ಗ, ಕೊಡೇಕಲ್, ಕಕ್ಕೇರಿ, ವಾಗನ ಗೇರಿ, ಶಹಪೂರ, ಗೋಗಿ, ಗುಲ್ಬರ್ಗಾ, ಅಫಜಲಪುರ, ಸಿನ್ನೂರು, ಹಿಪ್ಪರಗಿ ಬಿಜಾಪುರ. ಈ ಪ್ರದೇಶಗಳ ಸ್ಥಳ ಮಹಾತ್ಮ್ಯೆ, ಕೋಟೆಗಳ ನೈಸರ್ಗಿಕ ವರ್ಣನೆ ಕಾದಂಬರಿಯಲ್ಲಿ ಬರುವವಲ್ಲದೆ ಗೋಲ್ಕುಂಡಾ ಮತ್ತು ಅಹಮ್ಮದ್ ನಗರಗಳ ಚರಿತ್ರೆಯೂ ಸ್ಥೂಲವಾಗಿ ಬರುತ್ತದೆ. ಆಗಿನ ಕಾಲದ ಕಾಳಗದ ವಿಧಾನಗಳನ್ನು ಯೋಧರು ಉಪಯೋಗಿಸುತ್ತಿದ್ದ ಉಡುಪು ಮತ್ತು ಶಸ್ತ್ರಾಸ್ತ್ರಗಳನ್ನೂ, ದರಬಾರು ನಡೆಸುತ್ತಿದ್ದ ರೀತಿಗಳನ್ನೂ, ಮುಸಲ್ಮಾನರ ಧಾರ್ಮಿಕ ಪದ್ಧತಿಗಳನ್ನೂ ರಾಜ ಪುರೋಹಿತರು ಚೆನ್ನಾಗಿ ವರ್ಣಿಸಿದ್ದಾರೆ.

ಕಥೆ ಚಿಕ್ಕದಾದರೂ ವರ್ಣನೆಗಳು ಮನೋಜ್ಞವಾಗಿ ಚರಿತ್ರೆಯ ದೃಷ್ಟಿಯಿಂದ ಮಹತ್ವಪೂರ್ಣವಾಗಿವೆ. ವರ್ಣನೆಗಳು ಕಾದಂಬರಿಯ ಶರೀರವನ್ನು ಸುಪುಷ್ಟವಾಗಿ ತುಂಬಿಕೊಂಡಿವೆ. ಮುಸಲ್ಮಾನರ ಸಂಪ್ರದಾಯವನ್ನರಿಯದವರಿಗೆ ದರವೇಷನು 'ಲತಿಫಾವಲಿ' ಆಗುವ ಭಾಗ ಕಿಂಚಿತ್ ಬೇಸರ ತರಬಹುದಾದರೂ, ಅರಿಯಬೇಕೆಂಬ ಕುತೂಹಲಿಗಳಿಗಾಗಲಿ ಅಥವಾ ಅರಿತವರಿಗಾಗಲಿ ಬೇಸರ ತರುವದಿಲ್ಲ.

ಚರಿತ್ರೆಯ ದೃಷ್ಟಿಯಿಂದ ಉಲ್ಲೇಖಿಸಬೇಕಾದ ಇನ್ನೊಂದು ಸಂಗತಿಯೆಂದರೆ

ಸುಲ್ತಾನರ ಧರ್ಮಗುರುವಾದ ಚಿಷ್ತಿ ಮೊದಲು ಫ್ರಾನ್ಸಿಸ್-ಡಿ-ಅಲ್ಮೈಡಾನ ಮತವನ್ನು ಹಳಿದು ತರುವಾಯ ಕೂಡಿಕೊಂಡು ಸಹಬಾಳ್ವೆ ಮಾಡುವದು.

ಐತಿಹಾಸಿಕ ವಿಷಯುಗಳಲ್ಲಿ ವಿಶೇಷ ಆಸಕ್ತಿ ಹೊಂದಿರುವ ರಾಜಪುರೋಹಿತರು ಐತಿಹಾಸಿಕ ಸನ್ನಿವೇಶಗಳನ್ನು ಚೆನ್ನಾಗಿ ಹೆಣೆಯಬಲ್ಲರೆಂಬುದಕ್ಕೆ 'ಜೊಹರಾ' ಒಂದು ನಿದರ್ಶನ.

# 'ಹಾಲು-ಜೇನು' ಒಂದು ಸುಂದರ ಪ್ರಾದೇಶಿಕ ಕಾದಂಬರಿ

**—ರಾ. ಪ್ರ.**
**ಕರ್ಮವೀರ**

ಹಾಲು-ಜೇನು 'ನಿಜಾಮ್ ರಾಜ್ಯದ ಸ್ಥಿತ್ಯಂತರವನ್ನು ಚಿತ್ರಿಸುವ ಮೊದಲ ಕಾದಂಬರಿ'. ಇದನ್ನು ಬರೆದ ಶ್ರೀ ಜಯತೀರ್ಥ ರಾಜಪುರೋಹಿತ ತಮ್ಮ ಈ ಕಾದಂಬರಿಯಿಂದ ಕನ್ನಡ ಕಾದಂಬರಿ ಪ್ರಪಂಚಕ್ಕೆ ಇರುವ ಒಂದು ಅರೆಯನ್ನು ಒಂದಿಷ್ಟು ತುಂಬಿಕೊಡುವ ಯತ್ನದಲ್ಲಿ ಸಫಲರಾಗಿದ್ದಾರೆ ಎಂದು ಹೇಳಬಹುದು.

ಲೇಖಕರೇ ಹೇಳುವಂತೆ, ಇದೊಂದು ಪ್ರಾದೇಶಿಕ ಕಾದಂಬರಿ- ಇಪ್ಪತ್ತು ವರುಷಗಳ ಕೆಳಗೆ ಹೈದ್ರಾಬಾದ್ ಸಂಸ್ಥಾನ ಪಡೆದ ಸ್ಥಿತ್ಯಂತರವನ್ನು, ಅದಕ್ಕೆ ಹಿಂದೆ ಇದ್ದ ನಿಜಾಮ್ ಆಡಳಿತದ ವಾತಾವರಣವನ್ನು ಹಿನ್ನೆಲೆಯಾಗಿಟ್ಟುಕೊಂಡು ಚಿತ್ರಿಸುವ ಕಾದಂಬರಿ ಇದು. ಈ ವಸ್ತುವನ್ನು ಕುರಿತ ಕಾದಂಬರಿ ಹೋಗಲಿ, ಕಥೆ-ಕವನ ಮುಂತಾದ ಬರಹ ಕೂಡ ಅಷ್ಟಿರಲಿಲ್ಲ. ಇದರಿಂದಾಗಿ ಇಪ್ಪತ್ತು ವರುಷಗಳ ಹಿಂದೆ ನಿಜಾಮ್ ರಾಜ್ಯದಲ್ಲಿದ್ದ ರಾಜಕೀಯ ಸಾಮಾಜಿಕ ಜೀವನದ ಚಿತ್ರ ಕೇವಲ ವದಂತಿಯಂತೆ, ಊಹಾ ಪ್ರಪಂಚಕ್ಕೆ ಸೇರಿಹೋಗಿತ್ತು. ಪತ್ತೇದಾರಿ ಕಾದಂಬರಿಯ ವಸ್ತುವಾಗಿ ಒಮ್ಮೆ, ಒಂದಿಷ್ಟು ಸಣ್ಣ ಕಥೆಗಳ ವಸ್ತುವಾಗಿ ತುಣುಕು ಮಿಣುಕಾಗಿ ಕನ್ನಡ ವಾಚಕಲೋಕದೆದುರು ಸುಳಿದಿತ್ತು. ಆದರೆ ಅವಾವೂ ಬಹುಕಾಲ ಮನಃಪಟಲದ ಮೇಲೆ ನಿಲ್ಲಬಲ್ಲಷ್ಟು ಸಮರ್ಥವಾಗಿರಲಿಲ್ಲ. ಈ ದೃಷ್ಟಿಯಿಂದ ಈ ಕಾದಂಬರಿಯ ಅಢ್ಯತೆ, ಹೆಚ್ಚಿದೆ. ಆಕಸ್ಮಿಕಗಳಂತೆ ಒಂದರ ಮೇಲೊಂದು ಐತಿಹಾಸಿಕ ಘಟನೆಗಳು ಜರುಗಿ ಆಗಿನ ಚಿತ್ರಗಳೆಲ್ಲ ಈಗ ಮರೆಯಾಗಿ ಹೋಗಿವೆ. ತೆರೆಯ ಮರೆಗೆ ಸರಿದ ಆ ಜೀವನ ಸನ್ನಿವೇಶಗಳಲ್ಲಿ ಪಾಲ್ಗೊಂಡು ಹೋರಾಡಿದ ತರುಣರಲ್ಲಿ ಶ್ರೀ ರಾಜಪುರೋಹಿತರೂ ಒಬ್ಬರು, ಪ್ರಮುಖರು. ಅಂತೆಯೇ ಕ್ಲಿಷ್ಟವೆನಿಸಬಹುದಾದ ವಸ್ತು ಇವರ ಕೈಯಲ್ಲಿ ಸಹಜವಾಗಿ, ನಿರಾಳವಾಗಿ ದೊರೆಕೊಂಡು ಸುಂದರವೂ ಸಾರ್ಥಕವೂ ಆಗಿದೆ. ಅಂದರೆ ಇಲ್ಲಿ ಅನುಭವ ಹಾಗೂ ಸಂವೇದನೆಗಳ ಯಮಳ ಪ್ರಜ್ಞೆ ಅಭಿವ್ಯಕ್ತವಾಗಿದೆ, 'ಹಾಲು-ಜೇನಾ'ಗಿ ಹರಿದುಬಂದಿದೆ. ಅಂತೆಯೆ ಕಥನ

ದಲ್ಲಿ ಕಸುವು ಇದೆ; ಶೈಲಿಯಲ್ಲಿ ಮಾಧುರ್ಯವಿದೆ, ತಂತ್ರದಲ್ಲಿ ಬಿಗುವಿದೆ. ಹೀಗಾಗಿ ಇದು ಓದುಗರಿಗೆ ರಂಜನೀಯವೂ ಮನನೀಯವೂ ಆಗಿದೆ. ಇಲ್ಲಿಯ ಅಚ್ಚ 'ಹೈದ್ರಾಬಾದಿ ಕನ್ನಡ'ದಿಂದ ಆ ಹೈದ್ರಾಬಾದ್ ಕನ್ನಡಿಗರಿಗೆ ಅರ್ಥ - ಸ್ವಾರಸ್ಯ ಗಳನ್ನು ಗ್ರಹಿಸುವದರಲ್ಲಿ ತೊಡಕು ಇದೆ. ಆ ಮಾತು ಬೇರೆ. ಆದರೆ ಅದು ಸಹಜವೂ ಆಗಿದೆ. ಈ ತೊಡಕು ಎಲ್ಲ ಪ್ರಾದೇಶಿಕ ಕಾದಂಬರಿಗಳಲ್ಲಿ ಇರಬೇಕಾದ್ದೆ. ಇದನ್ನು ತೊಡಕು ಎನ್ನುವದಕ್ಕಿಂತ, ಕನ್ನಡದ ಅಲ್ಪ ಪರಿಚಿತ ಇನ್ನೊಂದು ಮುಖ ಎಂದು ಹೇಳಿದರೆ ಸರಿಯಾದೀತು. ಇತರ ಭಾಗಗಳಲ್ಲಿ ಹೇಗೋ, ಹಾಗೆ ಇದು ಹೈದ್ರಾಬಾದ ಕರ್ನಾಟಕದಲ್ಲಿಯ ಬಳಕೆಗನ್ನಡ - ಆಗ. (ಈಗಲೂ ಕೂಡ – ಅಷ್ಟಿಷ್ಟು !)

ಹಾಲು - ಜೇನು ಇದು ಈ ಕಾದಂಬರಿಯ ಅನೇಕ ಮುಖಗಳನ್ನು ಬೆಳಗಿಸುವ ಸುಂದರ ಪ್ರತೀಕ. ಪೀರ- ಹಂಪಿ- ಫಾತಿಮಾ ಇವರ ಪ್ರೇಮ ಸಂಬಂಧಗಳಿಗೆ ಒಮ್ಮೆ ಇದು ಪ್ರತೀಕವಾದರೆ, ಹಳ್ಳಿಯ ಬಾಳಿನಲ್ಲಿಯ ಎರಡು ಧರ್ಮ–ಪಂಗಡಗಳ ಮಧುರ ಸಂಬಂಧಕ್ಕೆ ಇನ್ನೊಮ್ಮೆ ಪ್ರತೀಕವಾಗುತ್ತದೆ. ರಾಜಕೀಯ ಸ್ಥಿತ್ಯಂತರಗಳನ್ನು ಗಮನಿಸಿ ಈ ಪ್ರತೀಕವನ್ನು ವಿವೇಚಿಸಿದಾಗ ಈ ಕಾದಂಬರಿ ಐತಿಹಾಸಿಕತೆಯ ಮುಖ ಧರಿಸುತ್ತದೆ. ಧರ್ಮವನ್ನು ರಾಜಕೀಯಕ್ಕೆ ಬಳಸಿಕೊಂಡಾಗ, ಅದು ಹೇಗೆ ಹಾಸಿಗೆಯಲ್ಲಿ ಹೊಕ್ಕ ಹಾವಾಗಿ ಪರಿಣಮಿಸುತ್ತದೆ ಎಂಬುದನ್ನೂ ಇದು ಚೆನ್ನಾಗಿ ಚಿತ್ರಿಸುತ್ತದೆ. ಆದರೆ ಎಷ್ಟು ಹುಳಿ ಹಿಂಡಿದರೂ ಕೆಡದ ಹಾಲು, ಹಳಸದ ಜೇನು ನಮ್ಮ ಶ್ರೀಸಾಮಾನ್ಯ ಸಂಸ್ಕೃತಿ ಎಂಬುದಕ್ಕೆ ಪೀರ ದೊಡ್ಡ ಸಾಕ್ಷಿ; ಹಂಪಿ ಆತನ ಆತ್ಮ ಸಾಕ್ಷಿ, ಆತನ ಗೆಳೆಯ ದ್ವೈಪಾನಾಚಾರ್ಯ ಇನ್ನೊಂದು ಸಾಕ್ಷಿ!

ಹೇಮಗಿರಿಯ ಹೇಮಾಚಲ ದೇವಾಲಯದಿಂದ ಆರಂಭವಾದ ಕಥೆ ಹೇಮಗಿರಿಯಲ್ಲಿಯೇ ಪೀರ–ಫಾತಿಮಾ ಮಿಲನದಲ್ಲಿ ಮುಕ್ತಾಯಗೊಳ್ಳುತ್ತದೆ. ಈ ನಡುವೆ ಆ ಹಳ್ಳಿಯಲ್ಲಾದಂತೆ ಹೈದ್ರಾಬಾದ್ ಸಂಸ್ಥಾನದ ತುಂಬೆಲ್ಲ ವರ್ಣಮಯ, ಗೊಂದಲಮಯ ಸನ್ನಿವೇಶಗಳು ಜರುಗುತ್ತವೆ. ನಿಜಾಮ್‌ರ ರಾಯಚೂರ ಸಂದರ್ಶನದ ಚಿತ್ರ ಆ ನಿಜ ನಿಜಾಂ ವೈಭವ, ದರ್ಬಾರ– ಕಾರುಭಾರಗಳಿಗೆ ಹಿಡಿದ ಕನ್ನಡಿಯಂತಿದೆ. ಹಾಗೆಯೇ ಜಲಾಲ್, ತನ್ನ ನೆಲೆ, ಗುರಿ ಗೊತ್ತಿರಲಾರದೆ, ಯಾವದೋ ಬರಿ ರಾಜಕೀಯ ಬಿಸಿಲುಗುದುರೆಯ ಕಣ್ಣು ಕುಕ್ಕಿಸುವ ಹೊಳಪಿಗೆ ಮಾರು ಹೋಗಿ ಅಲೆಯುತ್ತಿರುವದನ್ನು ನೋಡಿದರೆ, ಬೇರಿರದ ಬಳ್ಳಿಯನ್ನು ನೆಡುವ ಹುಡುಗಾಟವು ನೆನಪಾಗುತ್ತದೆ. ಮರ್ಯಾದೆ ಮುಚ್ಚುವ ಸಂಸ್ಕಾರವಿದ್ದರೂ ಅದನ್ನು ಕಳಚಿ ಬೆತ್ತಲೆಯಾಗುವ ಹುಚ್ಚು–ಹಂಬಲ ಅವನಿಗೆ. ಇದಲ್ಲದೆ ಅಮರವ್ವನ ಖಾನಾವಳಿ, ಪೀರನ ಎತ್ತು ಕಾರಹುಣ್ಣಿಮೆ ಕರಿಹರಿದದ್ದು, ಜೋಯಿಸ ಶೀನಪ್ಪಾಚಾರ್ಯರು ಹಂಪಿಗೆ ಬಸವಿದೀಕ್ಷಾ ನೀಡಿದ್ದು, ಜಲಾಲ್ ವಕಾಲತ್ತಿಗೆ ಪ್ರವೇಶ ಪಡೆದದ್ದು, ಜಮಾಬಂದಿ

ರಾಘವೇಂದ್ರರಾಯರ ಮನೆಯಲ್ಲಿ ಪೀರ ಆತಿಥ್ಯ ಪಡೆದದ್ದು ಮುಂತಾದ ಸನ್ನಿವೇಶ ರಸವತ್ತಾಗಿ ಬಂದಿವೆ. ಒಟ್ಟಿನಲ್ಲಿ ಶ್ರೀ ರಾಜಪುರೋಹಿತ ಅವರಿಗೆ ಜೀವನಾನುಭವ –ಲೋಕಾನುಭವ ಎರಡೂ ಮೈಗೂಡಿ ನಡೆದ ಐತಿಹಾಸಿಕ ಘಟನೆಗಳನ್ನು ವಿಚಾರ ಪರತೆಯಿಂದ ತೂಗಿ ನೋಡುವ ರಸದೃಷ್ಟಿ ಸಹಜವಾಗಿ ಕರಗತವಾಗಿದೆ ಎಂಬುದನ್ನು ಇಲ್ಲಿ ನಾವು ಕಾಣುತ್ತೇವೆ. ಈಗ ನಾವು ಸಾಮಾನ್ಯವಾಗಿ ಸಾಮಾಜಿಕ ಕಾದಂಬರಿ ಗಳಲ್ಲಿ ಕಾಣುವ ಕೃತ್ರಿಮತೆ, ಅವಾಸ್ತವಿಕತೆ, ಮುಂತಾದ ಲೋಪಗಳಿಂದ ಮುಕ್ತ ವಾಗಿರುವ ಈ ಕಾದಂಬರಿ ಹೆಸರಿನಂತೆ, ಓದುಗರಿಗೆ 'ಹಾಲು - ಜೇನು' ಸ್ವಾದವನ್ನು ಒದಗಿಸುತ್ತದೆ. ವಸ್ತು ನಿರೂಪಣೆಯಲ್ಲಿ 'ಜಳಿಪಿಳಿ' ಇಲ್ಲ. ಆದರೂ ಒಂದೆರಡು ಕಡೆ ಅಧ್ಯಾಯಗಳು, ನಾಟಕಗಳಲ್ಲಿ ತೆರೆಯಮುಂದೆ ನಡೆಯುವ ದೃಶ್ಯಗಳಂತೆ ಅನಾವಶ್ಯಕವಾಗಿ ಮೂಲ ಕಥಾ ಪ್ರವಾಹದಿಂದ ಸಿಡಿದು ವಿಷ್ಕಂಭಕಗಳಾಗಿವೆ ; 'ಹೆಣಿಕೆ' ಸ್ವಲ್ಪ ಸಡಿಲು ಆಗಿದೆ. ಇದರಿಂದ ಕಾದಂಬರಿಯ ರಸಸ್ವಾದನೆಗೆ ಎಳ್ಳಷ್ಟೂ ಭಂಗ ಉಂಟಾಗುವದಿಲ್ಲ ಎಂಬುದು ಸಂತೋಷದ ಸಂಗತಿ. ಪರಿಣಿತ ಪ್ರಜ್ಞೆಯ ರಾಜಪುರೋಹಿತರಿಂದ ಇನ್ನೂ ಅನೇಕ ಸಮರ್ಥ ಕೃತಿಗಳನ್ನು ನಿರೀಕ್ಷಿಸಬಹುದಾಗಿದೆ. ಆ ಭರವಸೆಯನ್ನು ಅವರು ತಮ್ಮ ಈ ಕಾದಂಬರಿಯಿಂದ ನಮ್ಮಲ್ಲಿ ಹುಟ್ಟಿಸಿದ್ದಾರೆ.

# 'ಸುಳಿಗಾಳಿ' ಒಂದು ಅಭಿಪ್ರಾಯ

ಪ್ರೊ. ನಾಗರಾಜ ಕಾಳೆ
ರಾಯಚೂರು

ಅಧಿಕಾರಿ ಸಾಹಿತಿಗಳಾದ ಶ್ರೀ ಜಯತೀರ್ಥ ರಾಜಪುರೋಹಿತರ ಒಂದು ಅತ್ಯಂತ ಶ್ರೇಷ್ಠ ಕೃತಿ 'ಸುಳಿಗಾಳಿ'. ಪ್ರಾದೇಶಿಕ ಕೃತಿಗಳ ಪಂಕ್ತಿಯಲ್ಲಿ ಇದಕ್ಕೆ ಅತ್ಯಂತ ಶ್ರೇಷ್ಠವಾದ ಸ್ಥಾನವಿದೆ. ಐತಿಹಾಸಿಕ ಹಿನ್ನೆಲೆಯ ಪರದೆಯ ಮೇಲೆ ಶ್ರೀ ರಾಜಪುರೋಹಿತರ ಕಲ್ಪನೆಯ ಕುಂಚ ತುಂಬಾ ಸೊಗಸಾದ ನಯನ ಶ್ರವಣ ಮನೋಹರವಾದ ಚಿತ್ರವನ್ನು ಬಿಡಿಸಿದೆ. ಈ ಕೃತಿಯಲ್ಲಿ ಇಂಥ ಕೃತಿಗಳಿಗೆ (Periodical Novels) ಎಂದೂ ಹೆಸರಿಸಬಹುದು. ಹೈದ್ರಾಬಾದ ಕರ್ನಾಟಕದ ನಿಜಾಮಶಾಹಿ ಆಡಳಿತದ ಅವನತಿಯೊಂದಿಗೆ ಜನಜೀವನದ ಸೂಕ್ಷ್ಮ ಎಳೆಗಳನ್ನು ಕೂಡ ಲೇಖಕರು ತುಂಬಾ ಕಲಾತ್ಮಕವಾಗಿ ನೇಯಿಸಿದ್ದಾರೆ. ದ್ವಿರಾಷ್ಟ್ರವಾದದಿಂದ ಪಾಕೀಸ್ತಾನದ ಉದಯದ ನಂತರದ ಮನ ತಲ್ಲಣಿಸುವ ಸಾಮಾಜಿಕ ಅಶಾಂತಿ ಸ್ವಾತಂತ್ರ್ಯಾನಂತರ ಜೀವನ ಮೌಲ್ಯಗಳ ಅಧಃಪತನ ಅಧಿಕಾರಲಾಲಸೆ, ಲಂಚಗುಳಿ ತನ ಹಿಂದೂ-ಮುಸ್ಲಿಮರಲ್ಲಿ ಬೆಳೆಯುತ್ತಿರುವ ವೈಷಮ್ಯ, ಧಾರ್ಮಿಕ ದಬ್ಬಾಳಿಕೆ ಯಲ್ಲಿ ಮಂದಿರಗಳು ಮಸೀದಿಗಳಾಗಿ ಬದಲಾವಣೆಗೊಂಡದು, ಇದರೊಂದಿಗೆ ನವಾಬಶಾಹಿ ವಿಲಾಸ ಜೀವನದ ದಾರುಣ ಕೊನೆ ಈ ಸಂಗತಿಗಳು ಕೃತಿಯ ಮುಖ್ಯ ಎಳೆಗೆಗಳಾಗಿವೆ. ತಾವು ಸ್ವತಃ ಈ ನೆಲದವರಾಗಿದ್ದರಿಂದ ಮತ್ತು ಆ ಜೀವನದ ಪ್ರೇಕ್ಷಕರಾಗಿದ್ದುದರಿಂದ ಶ್ರೀ ರಾಜಪುರೋಹಿತರ ಬರವಣಿಗೆಯಲ್ಲಿ ಎಲ್ಲಿಲ್ಲದ ಸತ್ವ ಮೂಡಿ ಬಂದಿದೆ. ಅವರ ಭಾಷೆಯಂತೂ ಜಳಪಿಸುವ ಕತ್ತಿ ಇದ್ದಂತೆ. ಅದರ ಮೊನೆಯೂ ಅಷ್ಟೇ ಹರಿತ. ಅವರ ಭಾಷೆಯ ಅಲುಗಿನ ಪ್ರಹಾರಕ್ಕೊಳಗಾದ ವರು ಶಾಂತಿಯುತವಾಗಿ ಕುಳಿತುಕೊಳ್ಳಲಾರರು. ಒಂದು ತರಹದ ಅಳುಮಳ ಅವರಲ್ಲಿ ಉಂಟಾಗುತ್ತದೆ. ಆಂಗ್ಲ ಸಾಹಿತಿ ಬರ್ನಾಡ ಶಾ ಅಥವಾ ಹಿಂದಿ ವ್ಯಂಗ್ಯ ಸಾಹಿತಿ ಹರಿಶಂಕರ ಪರಸಾಯಿಯವರ ಮೊನಚಾದ ವ್ಯಂಗ್ಯವನ್ನು ಇವರ ಶೈಲಿ ಒಗ್ಗೂಡಿಸಿಕೊಂಡಿದೆ. ಅದಕ್ಕಾಗಿ ಕನ್ನಡದ ವ್ಯಂಗ್ಯ ಸಾಹಿತಿಗಳಲ್ಲಿ ಅವರನ್ನು ನಾವು

ಒಬ್ಬ ಶ್ರೇಷ್ಠರೆಂದು ಪರಿಗಣಿಸಬಹುದು. ಟೋಪಿವಾಲಾಗಳ ಬಗ್ಗೆ ಅವರ ಈ ಮಾತು ಇದಕ್ಕೆ ನಿದರ್ಶನವಾಗಿದೆ.

"ಮುಸಲ್ಮಾನರು ಅಂಜಿಕೆಯಿಂದ ಟೋಪಿ ಬಿಟ್ಟಿದ್ದರು. ಆದರೆ ಪ್ರಜಾರಾಜ್ಯದ ಲಾಭ ಪಡೆಯುವ ಸ್ವಾರ್ಥಕ್ಕಾಗಿ ಟೋಪಿ ಬದಲಾಯಿಸುವವರನ್ನು ಮಾತ್ರ ನಂಬುವದು ಕಷ್ಟ ನೋಡು. ಇವರಿಗೆ ತತ್ವ ಇಲ್ಲ ಸಿದ್ಧಾಂತ ಇಲ್ಲ."

ಮಹಾತ್ಮಾಜಿಯವರ ಸತ್ಯಾಗ್ರಹದಂಥ ಪವಿತ್ರ ಅಸ್ತ್ರದ ಗತಿ ಇಂದು ಏನಾಗಿದೆ? ಶ್ರೀ ರಾಜಪುರೋಹಿತರ ಶಬ್ದದಲ್ಲಿ ಸ್ಪಷ್ಟವಾಗಿ ಮೂಡಿದೆ.

"ಶ್ರಾದ್ಧ, ಸತ್ಯಾಗ್ರಹ, ಇನ್ನು ಸತ್ಯವೂ ಇಲ್ಲಾ, ಆಗ್ರಹವೂ ಇಲ್ಲ ಅಂತ ಕಾಣಸ್ತದ. ಬಹುಶಃ ಸತ್ಯಾಗ್ರಹದ ಶ್ರಾದ್ಧ ಮಾತ್ರ ಆದೀತು."

"ಜ್ಯೋತಿಷ್ಯ ? ಅಲ್ಲಿಯೂ ನಿಮ್ಮ ಪ್ರಜಾರಾಜ್ಯ ಪ್ರಾರಂಭ ಆಗೇದ. ಆಯಾ ಕುಲದವರಿಗೆ ಅವರೇ ಯಾಕೆ ತಾಳಿಕಟ್ಟಬಾರದು ? ಹಾರುವರ ಪುರೋಹಿತನೇ ಯಾಕಬೇಕು ? ಅಂತ ನಡೆದಿದೆ ಏನಪಾ." ದ್ವೈಪಾಯನಾಚಾರಿಯ ಈ ಮಾತಿನಲ್ಲಿ ಸಮಾಜ ವ್ಯವಸ್ಥೆಯ ನೆಲೆಗಟ್ಟಿನಲ್ಲಿ ಬಿಟ್ಟಿರುವ ದೊಡ್ಡದಾದ ಬಿರುಕು ಕಂಡುಬರುತ್ತದೆ. ಜಾತಿಯ ಭೂತ ಇಂದು ನಮ್ಮೆಲ್ಲರನ್ನು ಹೇಗೆ ಕಬಳಿಸುತ್ತಿದೆ ಎಂಬುದಕ್ಕೆ ನಿದರ್ಶನವಾಗಿದೆ.

ಅತ್ಯಾಧುನಿಕರು ಜೀವನವನ್ನು ಎಷ್ಟು ಹಗುರಾಗಿ ತೆಗೆದುಕೊಳ್ಳುತ್ತಾರೆ ಎಂಬುದಕ್ಕೆ ಲೇಖಕರ ಈ ಮಾತು:

"ನಿನಗೆ ಜೀವನ ಮೋಟಾರು ಕಾರಿಗಿಂತ ಮಹತ್ವದ್ದೇನೂ ಅಲ್ಲ, ನೀನು ಧಾರ್ಮಿಕ, ಆರ್ಥಿಕ ವಿಷಯಗಳಿಗೆ ಲಿಪ್‌ಸ್ಟಿಕ್‌ಗಿಂತ ಹೆಚ್ಚು ಮಹತ್ವಕೊಟ್ಟಿಲ್ಲ." ಒಂದು ಸುಂದರ ದೃಷ್ಟಾಂತವಾಗಿದೆ.

ಬರುಬರುತ್ತಾ ರಾಜಮಹಾರಾಜರ ದುಃಸ್ಥಿತಿ ಹೇಗಾಗಿದೆ ಎಂಬುದರ ಬಗ್ಗೆ ಲೇಖಕರ ಈ ಮಾತು ಮನಬಾಗುವಂತಿದೆ.

"ನಮ್ಮ ಕಡೆಗೆ ಒಂದು ಸಣ್ಣ ಸಂಸ್ಥಾನ ಅದ ಏನಪಾ, ಈಗ ಹೋಗೆದ ಅನ್ನು. ಅಲ್ಲಿಯ ರಾಜನ ವಂಶಾನುವಂಶದವರೆಲ್ಲ ರಾಜರು. ಮುಂಜಾನೆ ಅಡವಿಗೆ ಹೋಗಿ ಕಟ್ಟಿಗೆ ಹೊರೆ ತಗೊಂಡು ಬರ್ತಿರ್ತಾರೆ. ಎದುರಿಗೆ ಓಲೇಕಾರ ಬಂದಕೂಡಲೇ ಆ ಕಟಿಗಿ ಹೊರೆ ಕೆಳಗೆ ಒಗೆದು ನಿಂದಿರ್ತಾರೆ. ಇವ ಅವರಿಗೆ ರಾಜಸಾಬ ಅಂತ ಸಲಾಮ್ ಹಾಕಬೇಕು. ಹೀಗಿದ್ದಾರೆ ಕಟಗಿ ಹೊರೀ ಹೊರೊ ರಾಜರು." ಈ ಅಧಃಪತನದ ಸ್ಪಷ್ಟೀಕರಣವನ್ನು ಲೇಖಕರು ದೇವೇಂದ್ರರಾಯನ ಮಾತುಗಳಿಂದ ಹೀಗೆ ಪ್ರಕಟಿಸಿದ್ದಾರೆ :

"ಇಟ್ ಈಜ್ ಎ ಫ್ಯಾಕ್ಟ್ ಲೆವಲಿಂಗ್ ಡೌವನ್. ನೆಲ ಸಮತಳ ಮಾಡಲಿಕ್ಕೆ ಮಿಟ್ಟಿಗಳನ್ನು ಕಡಿಮೆ ಮಾಡಬೇಕಾಗುತ್ತದೆ. ಅದರೊಳಗೆ ಕರಾಮತ್ ಮಂಜಿಲ

ಹೋಗಿ ದಿಲ್‌ಸುಖಿ ಹೋಟೆಲ್ ಆದರ, ಎಚ್ಚರಗೇಡಿ ನವಾಬರ ಹೆಂಗಸರು ಹಾಳಾಗಿ ಬೀದಿಗೆ ಬಂದರೆ, ಕಟಿಗಿ ಹೊರೆ ಮಾರಿ ಬದುಕುವ ರಾಜನನ್ನು ಕಂಡರೆ, ಆಶ್ಚರ್ಯ ವೇನೂ ಅಲ್ಲ."

ಅದರಲ್ಲೂ ಫೋಟೆ ನವಾಬನ ಮುದ್ದಿನ ಬಿಗುಮಾನದಿಂದ ಬೀಗುವ ರಾಣಿ ಜಮರದ್ ಬೇಗಮ್ ಸೌಂದರ್ಯದ ಕಟ್‌ಗ್ಲಾಸ್ ಷಿರೀನ್ ತಮ್ಮ ವಿಲಾಸ ಜೀವನಕ್ಕಾಗಿ ಬೀದಿಗಿಳಿದು ಬೆಲೆವೆಣ್ಣಾಗಿ ಮಾರ್ಪಡುವುದು ಕರಳು ಕತ್ತರಿಸುವ ಚಿತ್ರ.

ಇಡೀ ಕಾದಂಬರಿಯಲ್ಲಿ ನವಾಬ ಬೇಗಮಳ ತೈಲ ಚಿತ್ರ ಮಹತ್ವದ ಪಾತ್ರವನ್ನು ಆಡಿದೆ. ನವಾಬಶಾಹಿಯ ಏಳು ಬೀಳುಗಳನ್ನು ಲೇಖಕರು ಪದೇ ಪದೇ ತೈಲಚಿತ್ರದ ಸ್ಥಿತಿಗತಿಯ ಸಂಕೇತದ ಮೂಲಕ ಅತ್ಯಂತ ಪ್ರಭಾವಯುತವಾಗಿ ವ್ಯಕ್ತಪಡಿಸಿದ್ದಾರೆ. 'ಕರಾಮತ್ ಮಂಜಿಲ್' ದಿಲ್‌ಸುಖಿ ಹೋಟೆಲ್ ಆಗುವ ಮುನ್ನ ಗುಲಾಬಿ ನವಾಬ ಬೇಗಮಳ ತೈಲ ಚಿತ್ರ ದಿಲಾವರನ ಕೈಯಿಂದ ಕೆಳಗುರುಳಿ ನವಾಬರ ಭೋಗ ವಿಲಾಸದ ಜೀವನದ ಕೊನೆಯನ್ನು ಸಾಂಕೇತಿಕವಾಗಿ ಸೂಚಿಸುತ್ತದೆ. ಆಂಗ್ಲ ಸಾಹಿತಿಗಳಂತೆ ಶ್ರೀ ಜಯತೀರ್ಥ ರಾಜಪುರೋಹಿತರು ಈ ತೈಲ ಚಿತ್ರದ ಸಂಕೇತವನ್ನು ಮೂಲದ ಮೇಲೆ ಬಳಸಿ ಅದಕ್ಕೊಂದು ಪ್ರಾಮುಖ್ಯ ಪಾತ್ರವನ್ನು ಕೊಡಮಾಡಿದ್ದಾರೆ.

ಛೋಟ ನವಾಬ, ಜಮುರದ ಬೇಗಮ್ ಹಾಗೂ ಷಿರೀನಳ ಅಧಃಪತನದ ಕಾರಣವನ್ನು ಲೇಖಕರು ತಮಿಜಾಖಾನನಿಂದ ಹೀಗೆ ಹೇಳಿಸಿ ಕಾದಂಬರಿಯ ಶೀರ್ಷಿಕೆಯ ಔಚಿತ್ಯಕ್ಕೆ ಮೆರುಗು ಕೊಟ್ಟಿದ್ದಾರೆ.

"ಯಾರಿಂದ ಸಾಧ್ಯ ಬೇಗಮ್? ನೀನು ಬಿದ್ದ ಸೆಳುವಿನ ವೇಗದಲ್ಲಿ ನಿನ್ನ ಸಹಾಯಕ್ಕೆ ಯಾರಿಗೆ ಬರಲು ಸಾಧ್ಯವಿತ್ತು? ಈ ಸುಳಿಗಾಳಿಯಲ್ಲಿ ತಮ್ಮ ತಮ್ಮ ಸಮತೋಲ ಕಾಯ್ದುಕೊಳ್ಳುವ ಚಿಂತೆ ಎಲ್ಲರಿಗೆ."

ಈ ಕಾದಂಬರಿಯಲ್ಲಿ ಕೇವಲ ರಾಜಮಹಾರಾಜರು ನವಾಬ ಬೇಗಮರ ಕಥೆಯನ್ನಷ್ಟೆ ನಿರೂಪಿಸದೆ ಲೇಖಕರು ತಾತ್ಕಾಲಿಕ ರಾಜಕೀಯ ಚಳುವಳಿ, ಹಿಂದು ಮುಸ್ಲಿಮ್ ವೈಷಮ್ಯ, ಸಾಮಾಜಿಕ ಪರಿವರ್ತನೆಗಳ ಬಗೆಗೂ ಪ್ರಾಸಂಗಿಕವಾಗಿ ಅನೇಕ ಸುಂದರ, ವಿವರಣೆ ನೀಡಿದ್ದಾರೆ. ಸ್ವಾತಂತ್ರ್ಯಾನಂತರದ ಪರಿಸ್ಥಿತಿಯ ಈ ವಿಶ್ಲೇಷಣೆ ಬೇರೆ ಕಡೆಗೆ ದೊರೆಯುವದು ವಿರಳ.

ಹಿಂದು ಮುಸ್ಲಿಮ ಏಕತೆಯ ಬಗ್ಗೆ ಪೀರ ಕನಸು ಕಾಣುತ್ತ ನುಡಿಯುತ್ತಾನೆ. "ಹೌದು ಯಾಕಾಗಬಾರದು? ಈ ದೇಶದ ಎರಡು ದೊಡ್ಡ ಮತಗಳ ಜನ ಒಂದೇ ಬಂದೂಕಿನ ಜೋಡು ನಳಿಗೆಯಂತಿದ್ದರೆ ಎಷ್ಟು ಚೆನ್ನಾ? ಯಾವ ಆಕ್ರಮಣಕಾರಿ ಬೇಟೆ ಈ ಬಂದೂಕನೆದುರಿಗೆ ನಿಂತೀತು? ಆದರೆ ಅವನ ತಮ್ಮ ಜಲಾಲ ಈಗಿನ ಟ್ಯಾಕ್ಟಫುಲ್ ರಾಜಕಾರಣಿಯ ಪ್ರತಿನಿಧಿ. ಹಿಂದೂ ದ್ವೇಷ ಅವನ ನರಗಳಲ್ಲಿ

ಹೊತ್ತಿಕೊಂಡು ಉರಿಯುತ್ತಿದೆ. "ಇತಿಹಾಸ ಸ್ವಲ್ಪ ಜಾಡು ಬದಲಿಸಿದ್ದರೆ ? ಈ ಹಿಂದೂಗಳು ಹಾರಾಡುವುದನ್ನು ನೋಡುತ್ತಿದ್ದೆ. ಯಾವುದೋ ಕಾಲದ ದೇವಾಲಯ ವೆಂಬ ನೆಪ, ಮಸೀದೆ ಮಾರ್ಪಾಡಾಗಿ ಸಮಾಜ ಮಾಡಲು ಸ್ಥಳವಿಲ್ಲದ ದುರವಸ್ಥೆ ಈ ಜನಾಂಗಕ್ಕೆ. ಎಡಗೈಯಲ್ಲಿ ಕುರಾನ್, ಬಲಗೈಯಲ್ಲಿ ಕತ್ತಿ ಜಳಪಿಸಿ ಬೆಳೆಯಿಸಿದ ಧರ್ಮಕ್ಕೆ ಈ ದುರವಸ್ಥೆ ಏನು ಮಾಡುವುದು ?" ಇಂಥ ಪುಢಾರಿಗಳಿಂದಲೇ ದೇಶದ ದುರವಸ್ಥೆ ಹೀಗಾಗಿದೆ ಎಂಬ ಭವಿಷ್ಯವನ್ನು ಲೇಖಕರು ಈ ಮೂಲಕ ಸಾರಿದ್ದಾರೆ.

ಪೋಲಿಸ್ ಕಾರ್ಯಾಚರಣೆಯ ಚಿತ್ರವಂತೂ ಅತ್ಯಂತ ಹೃದಯವಿದ್ರಾವಕವಾಗಿ ಮೂಡಿಬಂದಿದೆ. ಈ ಚಿತ್ರಣವನ್ನು ಒಳಗೊಂಡ ಕೃತಿ ಇದೊಂದೇ ಎಂದು ಕಾಣು ತ್ತದೆ. ಅಸಂಖ್ಯರಿಗೆ ಕೊಳ್ಳೆ ಹೊಡೆದು ಧನಿಕರಾಗಲು ಒಂದು ಸುವರ್ಣ ಅವಕಾಶ. ಆದರೆ ಇಂಥದರಲ್ಲಿಯೂ ದೇವೇಂದ್ರರಾಯನಂಥವನ ಪ್ರಾಮಾಣಿಕತೆ ಅಂಧಕಾರ ದಲ್ಲಿ ಮಿಂಚು ಮಿಂಚಿದಂತೆ ಭಾಸವಾಗುತ್ತದೆ. ಸೌದಾಗಾರ ಹಮೀದಖಾನ ಗದ್ಗದಿತ ನಾಗಿ ನುಡಿಯುತ್ತಾನೆ.

'ಧಣಿ ಎಂಥ ಮಾತಾಡ್ತಿರಿ, ನಾನು ಎಣಿಸಿಕೊಟ್ಟಿದ್ದೇನು ಧಣಿ ? ನೀನು ಮನಿಷ್ಯಾ ಅಲ್ಲ, ದೇವರಪ್ಪಾ. ಖಾಂದಾನಿ ರಕ್ತ ಅಂದ್ರ ಹಿಂಗೆ ಇರ್ತೈತೆ. ಇದು ಹಲ್ಕಾ ಮಿನಿಸ್ಯಾರ ಕೈಯ್ಯಾಗ ಬಿದ್ದಿದ್ರೆ ?"

ಇಂದಿನ ರಾಜಕೀಯ ವಾತಾವರಣ ಎಷ್ಟು ಕಲಷಿತವಾಗಿದೆ ಅಂದರೆ ಪ್ರತಿ ಯೊಬ್ಬರು ಶೀಲ ಚಾರಿತ್ರ (ಇನ್ನೊಬ್ಬರ) ಬಗ್ಗೆ ಮಾತನಾಡುವದು ತಮ್ಮ ಹಕ್ಕು ಎಂದು ತಿಳಿದಿದ್ದಾರೆ. ಅವರೆಲ್ಲ ಬಡವರ ಲೂಟಿ ಮಾಡಿ ಬಂದವರೇ. ಈ ಬಗ್ಗೆ ರಾಜಪುರೋಹಿತರ ವ್ಯಂಗ್ಯ ಹೇಗೆ ತೀಕ್ಷ್ಣವಾಗಿದೆ ಎಂಬುದನ್ನು ಇಲ್ಲಿ ನೋಡ ಬಹುದು.

'ಚಾರಿತ್ರ್ಯ ಕಟ್ಬ್ತಾನಂತ ನೋಡೋ ಈ ಮಗ ? ಯಾರನ್ನೊ ಲೂಟಿ ಮಾಡಿ ಗಡದ್ದಾಗ್ಯಾನ. ಶೀಲ ಚಾರಿತ್ರ್ಯಾದ ಮಾತಾಡ್ತಾನ."

ಮುಸ್ಲಿಮರ ಬಗ್ಗೆ ನಮ್ಮ ವರ್ತನೆ ಹೇಗಿರಬೇಕು ? ರಾಜಪುರೋಹಿತರು ತಾವೇ ರಾಜಣ್ಣನಾಗಿ ತಮ್ಮ ಸ್ಪಷ್ಟ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ.

"(ಮುಸ್ಲಿಮರನ್ನು) ಕಡೆಗಣಿಸುವುದು ಬೇಡ ಆದರೆ ಪುರಸ್ಕರಿಸುವಾಗ ಜಾಗರೂಕತೆ ಇರಬೇಕು ಅಷ್ಟೆ"

ಆಧುನಿಕ ಬಿನ್ನಾಣ ಬೆಡಗಿನಲ್ಲಿ ವಿವಾಹದ ಪವಿತ್ರವಾದ ಸಂಬಂಧ ಹೇಗೆ ವಿಚ್ಛಿದ್ರಗೊಳ್ಳುತ್ತದೆ ಎಂಬುದನ್ನು ಶಿರೀನ ಅಖಲಾಕ್ ವಿವಾಹ ವಿಚ್ಛೇದನದ ವಿರಸ ಪ್ರಸಂಗದಲ್ಲಿ ಕಾಣಬಹುದು. ಅವಳ ಬಗ್ಗೆ ಅಖಲಾಕ್ ಹುಸೇನರ ಈ ಅಭಿ ಪ್ರಾಯ ಆಧುನಿಕ ಯುವತಿಯರಿಗೆ ಒಂದು ಸವಾಲಾಗಿದೆ.

"ಇರಬೇಕು ! ನಾನೇ ಮೂರ್ಖನಿರಬೇಕು ! ಮೂರ್ಖ! ಶ್ರೀಮಂತ ವಂಶದಲ್ಲಿ ಕೇವಲ ರತ್ನಗಳೇ ಇರುವವೆಂದುಕೊಂಡು ವ್ಯವಹಾರ ಮಾಡಿದ ಮೂರ್ಖ. ಆದರೆ ಇದು ಮಾತ್ರ ಕೇವಲ ಗ್ಲಾಸ್. ಸುಂದರವಾದ ಕಟ್‌ಗ್ಲಾಸ್ ಹೊರಟಿತು. ಒಡೆದರೂ ಅಷ್ಟೇ ಎಸೆದರೂ ಅಷ್ಟೇ."

ಈ ರೀತಿ ರಾಜಪುರೋಹಿತರ ಸುಳಿಗಾಳಿ ತಾನೇ ಓದಿಸಿಕೊಂಡು ಹೋಗುತ್ತದೆ. ಅವರ ಈ ಪ್ರದೇಶದ ಉರ್ದು ಮಿಶ್ರಿತ ಭಾಷೆಯ ಸೊಗಸು ಬಹಳ ಪರಿಣಾಮಕಾರಿಯಾಗಿದೆ. ಅಲ್ಲಲ್ಲಿ ಉರ್ದು ಶಾಯರಿಯ ಕಣ್ಸೆಳೆವ ಮಿಂಚು ಬೇರೆ.

ಕುಛ ತೂ ಮಿಲ್ ಜಾಯೆ ಲಬೆ ಷೀರಿನ್‌ಸೆ
ಜಹರ ಖಾನೇಕಿ ಇಜಾಜತ ಹಿ ಸಹಿ !

ರಾಜಕೀಯ ಪರಿಸ್ಥಿತಿಯ ಸುಳಿಗಾಳಿಯ ವಿಶ್ಲೇಷಣೆಯೊಂದಿಗೆ ಶ್ರೀ ರಾಜ ಪುರೋಹಿತರ ಪರಿಸ್ಥಿತಿಯ ಪ್ರಜ್ಞೆ ಸ್ಫುಟವಾಗಿ ಮೂಡಿದೆ.

"ಇದೇ ಒಂದು ತರಹ ಅವನತಿಯ ಕಾಲ ಸ್ವಾಮಿ. ಹಳೆಯ ವತನದಾರಿ ಮನೆತನಗಳ ಬೇರು, ಕೊಳೆತಿದ್ದವೆಂದು ಕತ್ತರಿಸಿ ಒಗೆದೆವು. ಈ ಹೊಸ ಬೆಳೆಗೆ ಇನ್ನೂ ಬೇರು ಬಲಿತಿಲ್ಲ. ಹೂವೆಂಥದೊ, ಹಣ್ಣು ಎಂಥದೊ ಗೊತ್ತಿಲ್ಲ. ಗೊತ್ತು ಗುರಿ ಇಲ್ಲದೆ ಸಾಗಿದೀ ಸುಳಿಗಾಳಿ ಒಯ್ದಂತೆ. ಕಾಯಿದೆಗೆ, ನ್ಯಾಯಕ್ಕೆ, ಸತ್ಯಕ್ಕೆ, ಪುರಸ್ಕಾರ ಸಿಕ್ಕೀ ಸಿಕ್ಕೀತು. ಸದ್ಯಕ್ಕೆ ಮಾತ್ರ ತೊಂದರೆ ಆದೆ. ಈ ಪ್ರಸಂಗದೊಳಗೆ ಕನಿಷ್ಠ ಪಕ್ಷ ಈ ಸೆಳವಿನಿಂದ ನಮ್ಮನ್ನು ನಾವು ಉಳಿಸಿಕೊಂಡರೂನೂ ಸಾಕು. ಎಷ್ಟೋ ಸಾಧಿಸಿದಂತೆ ಅನ್ನಿರಿ."

ಕೊನೆಯದಾಗಿ ಶ್ರೀ ಎಂ. ಅಕ್ಬರ್ ಆಲಿಯವರ ಈ ಮಾತುಗಳೊಡನೆ ಈ ಸಂಕ್ಷಿಪ್ತ ಲೇಖನವನ್ನು ಕೊನೆಗೊಳಿಸುವೆ.

"ಭಾವೈಕ್ಯದ ಬಗ್ಗೆ ಒಣ ಭಾಷಣ ಮಾಡುವುದಕ್ಕಿಂತ ಇಂಥ ಸಮರ್ಥ ಲೇಖಕರು ಸಹೃದಯರು ಲೇಖನಿ ಎತ್ತಿದರೆ ಯಾವುದು ಅಸಾಧ್ಯ ಎಂದೆನಿಸುತ್ತದೆ."

# 'ಕಡಲ ತೋಳ' ಒಂದು ಸಾರ್ಥಕ ಅನುವಾದ

ಪ್ರೊ. ಸೂರ್ಯನಾರಾಯಣ ಭಟ್ಟ
ರಾಯಚೂರು

ಅವಿರತ ಶ್ರಮದ ಆಡಳಿತ ನಿರ್ವಹಣೆ ಹಾಗೂ ಅಷ್ಟೇ ಬೌದ್ಧಿಕ ಶ್ರಮದ ಸಾಹಿತ್ಯ ಸೃಷ್ಟಿ, ಇವೆರಡನ್ನೂ ಲೀಲಾಜಾಲವಾಗಿ ಮೇಳವಿಸಿಕೊಂಡ ಪ್ರತಿಭಾವಂತ ಸವ್ಯಸಾಚಿಗಳಲ್ಲಿ ಶ್ರೀ ರಾಜಪುರೋಹಿತರೊಬ್ಬರು. ಇಂಥವರು ಬಹಳ ಜನರೇ ನಿಲ್ಲ. ರಾಜಪುರೋಹಿತರು ಸೃಜನಾತ್ಮಕ ಕಥೆ, ಕಾದಂಬರಿ, ನಾಟಕಗಳಂತೆಯೇ ಸಮರ್ಥವಾದ ಅನುವಾದಗಳನ್ನೂ ನೀಡಬಲ್ಲರೆಂಬುದನ್ನು ಈಗ ದೃಢಪಡಿಸಿದ್ದಾರೆ. ಅಂಥ ಒಂದು ಸುಂದರ ಕನ್ನಡ ಅನುವಾದವೇ 'ಕಡಲ ತೋಳ'. ಇಂಗ್ಲೀಷ್ ಮೂಲ ಕೃತಿಯನ್ನು ಸ್ವಲ್ಪದರಲ್ಲಿ ಸಮೀಕ್ಷಿಸೋಣ.

'ಕಡಲ ತೋಳ' (Sea wolf) ದ ಮೂಲ ಕರ್ತೃ ಜಾಕ್ ಲಂಡನ್. (1876-1916). ಲಂಡನ್ ಜಾನ್ ಗ್ರಿಫಿತ್ ಎಂಬುದು ಆತನ ನಿಜ ನಾಮ. ಆದರೆ, ತನ್ನ ಲೇಖನ ನಾಮ 'ಜಾಕ್ ಲಂಡನ್' ಮೂಲಕವೇ ವಿಶ್ವಾದ್ಯಂತ ಪರಿಚಿತನಾಗಿರುವ ಈತ, ಅಮೆರಿಕನ್ ಸಾಹಿತ್ಯದ ಈ ಶತಮಾನದ ಪ್ರಸಿದ್ಧ ಕಾದಂಬರಿಕಾರರಲ್ಲಿ ಒಬ್ಬ. ವಿಶಾಲವಾದ ಸ್ವಚ್ಛಂದ ಸಮುದ್ರ ಹಾಗೂ ಹೆದ್ದಾರಿಗಳೆಂದರೆ ಆತನಿಗೆ ಅತೀವ ಅಚ್ಚುಮೆಚ್ಚು. ಅನಿರ್ಬಂಧಿತ, ಸ್ವಚ್ಛಂದ ಹಾಗೂ ಅಲೆಮಾರಿ ಜೀವನ ಅವನದಾಗಿತ್ತು. ಒಟ್ಟು ಸುಮಾರು 50 ಕೃತಿಗಳನ್ನು ರಚಿಸಿದ ಈತ, ತನ್ನ ಕೆಲವು ಮಹತ್ವದ ಕಾದಂಬರಿಗಳ ಮೂಲಕ ಕೊಳೆಗೇರಿ (Slums) ಜೀವನ, ಸಮಾಜವಾದ ಹಾಗೂ ನಗರದಲ್ಲಿಯ ಕೆಲಸಗಾರರ ಪರಿಸ್ಥಿತಿ ಮುಂತಾದ ಅನೇಕ ಸಾಮೂಹಿಕ ಹಾಗೂ ಸಮಕಾಲೀನ ಸಮಸ್ಯೆಗಳಿಗೆ ಪರಿಣಾಮಕಾರಿ ರೀತಿಯಲ್ಲಿ ಸ್ಪಂದಿಸಿದ.

'ಕಡಲ ತೋಳ'ದ ಕಥೆಯು ಹಂದರ ವಿಸ್ತಾರದ್ದಲ್ಲ. ಹಂಫ್ರಿ ವಾನ್ ವೇಡೆನ್‌ನನೇ ಇದರ ನಾಯಕ. ಆತ ತನ್ನ ಗೆಳೆಯ ಚಾರ್ಲ್ಸ್ ಫುರುಸೆಟ್‌ನಲ್ಲಿಗೆ ಪ್ರತಿ ವಾರಾಂತ್ಯವೂ ಹೋಗುತ್ತಿರುತ್ತಾನೆ. ಅಂತೆಯೇ, ಒಂದು ಸೋಮವಾರ

ಮುಂಜಾನೆ, ತನ್ನ ಗೆಳೆಯನಿಗೆ ವಿದಾಯ ಹೇಳಿ, 'ಮಾರ್ಟಿನಿಜ್' ಎಂಬ ಪ್ರಯಾಣಿಕರ ಉಗಿ ಹಡಗಿನ ಮೂಲಕ ಸ್ಯಾನ್‌ಫ್ರಾನ್ಸಿಕೊಕ್ಕೆ ಅಂದರೆ ತನ್ನ ಸ್ವಸ್ಥಾನಕ್ಕೆ ಪಯಣಿಸುತ್ತಿದ್ದಾಗ ಸಮುದ್ರ ಮಧ್ಯದಲ್ಲಿ ನಡೆದ ಘಟನಾವಳಿಗಳ ಕಥನವೇ ಈ ಕಾದಂಬರಿಯ ವಸ್ತು. ದುರ್ದೈವವಶಾತ್ 'ಮಾರ್ಟಿನಿಜ್' ಹಡಗು ಮಂಜಿನ ಮುಸುಕಿನ ಮೂಲಕ ಹಾಯುತ್ತಿದ್ದಾಗ ಇನ್ನೊಂದು ಸಾರಿಗೆ ಹಡಗಿಗೆ ಢಿಕ್ಕಿ ಹಾದು ಕ್ರಮಕ್ರಮವಾಗಿ ನೀರಿನಲ್ಲಿ ಮುಳುಗಹತ್ತಿತು. ಯಾವ ಆಪತ್ಕಾಲೀನ ಕ್ರಮವೂ ಜನರನ್ನು ರಕ್ಷಿಸಲು ಸಮರ್ಥವಾಗಲಿಲ್ಲ. ಹಂಫ್ರಿ ವಾನ್ ವೇಡನ್ ಜೀವ ರಕ್ಷಕ ಕವಚ ಧರಿಸಿ, ಅದು ಹೇಗೋ ಹಡಗಿನಿಂದ ನೀರಿಗೆ ನುಸುಳಿದ್ದ. ಎಷ್ಟೋ ಹೊತ್ತಿನ ಮೇಲೆ ಇನ್ನೊಂದು ಹಡಗು 'ಭೂತ' ಅದೇ ಸ್ಥಳಕ್ಕೆ ಬಂದುದರಿಂದ ಆತ ಮರಣಹೊಂದುವುದರಿಂದ ಪಾರಾಗುತ್ತಾನೆ. ಈ 'ಭೂತ' ಒಂದು ಬೇಟೆಯ ಹಡಗು. ಜಪಾನಿನ ತೀರದಲ್ಲಿಯ ಸೀಲ್ ಪ್ರಾಣಿಗಳ ಬೇಟೆಗಾಗಿ ಹೊರಟ ಈ ಹಡಗಿನ ಕಪ್ತಾನ ವುಲ್ಫ್ ಲಾರ್ಸೆನ್. ಸಾರಸ್ವತ ಪ್ರಪಂಚದ ಗೌರವಾನ್ವಿತ ವ್ಯಕ್ತಿಯಾಗಿದ್ದ ವಾನ್ ವೇಡನ್‌ಗೆ ಈ ಹಡಗದಲ್ಲಿನ ಭಯಾನಕ, ಹಿಂಸೆ ಹಾಗೂ ಒರಟು ವಾತಾವರಣ ಒಂದು ಹೊಸ ಜಗತ್ತಿನ ಪರಿಚಯು ಮಾಡಿಕೊಟ್ಟಿತು. ಕಪ್ತಾನನಿಂದ ಹಿಡಿದು ಬೇಟೆಗಾರ, ಅಡಿಗೆಯವನವರೆಗೆ ಎಲ್ಲರೂ ನಾಗರೀಕತೆ, ಸಂಸ್ಕೃತಿ ಹೀನರಾಗಿದ್ದರು. ಆದರೆ, ವಿಚಿತ್ರವೆಂದರೆ ಕಪ್ತಾನ ಕೇವಲ ರಾಕ್ಷಸೀ ಆಕಾಂಕ್ಷೆಯ, ಪಾಶವೀವರ್ತನೆಯ ಸಾಕಾರ ಮೂರ್ತಿಯಷ್ಟೇ ಅಲ್ಲ, ಅಪ್ರತಿಮ ಬುದ್ಧಿಶಾಲಿ ! ಪ್ರಚಂಡ ಇಚ್ಛಾಶಕ್ತಿ ಉಳ್ಳವ ಕೂಡ ! ಅನಕ್ಷರಸ್ಥ ತಾಯಿತಂದೆಗಳ ನಡುವೆ ಬೆಳೆದು, ಯಾವ ಶಾಲೆಯ ಮೆಟ್ಟಲನ್ನು ತುಳಿಯದೆಯೂ, ಸ್ವಂತ ಪರಿಶ್ರಮದ ಮೂಲಕ ಸಾರಸ್ವತ ಪ್ರಪಂಚದ ದಿಗ್ಗಜರನ್ನು ಪರಿಚಯಿಸಿಕೊಂಡಿದ್ದ. ಅಷ್ಟೇಕೆ ವಾನ್ ವೇಡನ್‌ನೊಡನೆ ಅತ್ಯಂತ ಸಮರ್ಥ ರೀತಿಯಲ್ಲಿ ಬೌದ್ಧಿಕ ವಾದ – ವಿವಾದಕ್ಕೆಳಸುತ್ತಾನೆ ಕೂಡ. ಈ ಬೌದ್ಧಿಕ ಸಮಾನ ವ್ಯಸನವೇ ಅವರಿಬ್ಬರನ್ನೂ ಮುಂದೆ ಮಾವುಡ್ ಬ್ರೂಸ್ಟರಳನ್ನೂ ಆತ್ಮೀಯತೆಯ ಕೊಂಡಿಯಲ್ಲಿ ಸಿಲುಕಿಸುತ್ತದೆ. ಹಡಗಿನಲ್ಲಿ ನಡೆಯುವ ಅನೇಕಾನೇಕ ಘಟನೆಗಳು ಕಪ್ತಾನ ವುಲ್ಫ್ ಲಾರ್ಸೆನ್ನನ ವ್ಯಕ್ತಿತ್ವವನ್ನು ಅತ್ಯಂತ ಸಮರ್ಥವಾಗಿ ಚಿತ್ರಿಸುತ್ತವೆ.

ಏತನ್ಮಧ್ಯೆ, ಹಡಗಿನೊಳಗೆ ಇನ್ನೊಂದು ಮಹತ್ವದ ಪಾತ್ರದ ಪ್ರವೇಶವಾಗುತ್ತದೆ. ಈ ಪಾತ್ರವೇ ಮಾವುಡ್ ಬ್ರೂಸ್ಟರಳದು. ಇಲ್ಲಿಂದ ಕಾದಂಬರಿ ಇನ್ನೊಂದು ರೋಚಕ ಆಯಾಮವನ್ನು ಪಡೆಯುತ್ತದೆ. ಈ ಮಹಿಳೆ ಹವಾ ಬದಲಾವಣೆಗಾಗಿ ಜಪಾನಿಗೆ ಹೊರಟವಳು, ಟೋಕಿಯೋದಿಂದ ಯಾಕೋಹಾಮಾಕ್ಕೆ ಹಡಗಿನ ಮೂಲಕ ಹೊರಟಿದ್ದಳು. ಸಮುದ್ರ ಮಧ್ಯೆ ಸುಂಟರಗಾಳಿಗೆ ಸಿಕ್ಕಿ ಹಡಗು ತತ್ತರಿಸಿತು. ಒಂದು ದೋಣಿಯ ಮೂಲಕ ಈ ಮಹಿಳೆ ಹಾಗೂ ನಾಲ್ವರಿತರರು

'ಭೂತ'ದೊಳಗೆ ಆಶ್ರಯ ಪಡೆದರು. ವಾನ್ ವೇಡನ್ ಹಾಗೂ ಮಾವ್ರಡ್ ಬ್ರೂಸ್ಟರ ಅದಾಗಲೇ ಪರಸ್ಪರರ ಕೃತಿಗಳ ಮೂಲಕ ಪರಿಚಿತರಾಗಿದ್ದರು. ಸಂವೇದನಾಶೀಲ ಬರಹಗಾರಳಾದ್ದರಿಂದ, ಮಾವ್ರಡ್ ಕಪ್ತಾನನನ್ನು ತನ್ನ ಬುದ್ಧಿಮತ್ತೆಯಿಂದ, ವಾದ ಪ್ರಯೋಗದಿಂದ ಆತನ ಮನೋಭೂಮಿಕೆಯನ್ನೇ ಬದಲಿಸುವ ಪ್ರಯತ್ನವನ್ನೂ ಮಾಡುತ್ತಾಳೆ. ಆದರೆ, ಆತ ತನ್ನ 'ನಾಣ್ಯದ ಸೂತ್ರ' ವನ್ನು ಬದಲಿಸಲು ಒಪ್ಪುವದಿಲ್ಲ. ಭಾವನಾಶಕ್ತಿಯ ಸಾಮರ್ಥ್ಯವನ್ನು ಗುರುತಿಸಿಯೂ ಕೂಡ ಅದಕ್ಕೆ ಕುರುಡಾಗಿರುತ್ತಾನೆ. ಇದು ಮಹಾಭಾರತದಲ್ಲಿಯ ದುರ್ಯೋಧನನ – "ಜಾನಾಮಿ ಧರ್ಮಂ, ನಚಮೇ ಪ್ರವೃತ್ತಿಃ; ಜಾನಾಮ್ಯಧರ್ಮಂ, ನಚಮೇ ನಿವೃತ್ತಿಃ" ಎಂಬ ಉಕ್ತಿಯನ್ನು ನೆನಪಿಸುತ್ತದೆ. ಈ ವಾದ ವಿವಾದಗಳು ಅತ್ಯಂತ ಆತ್ಮೀಯ ಸನ್ನಿವೇಶದಲ್ಲಿ ಮುಕ್ತಾಯಗೊಂಡ ರಾತ್ರಿಯೇ ಮಾವ್ರಡ್ ಬ್ರೂಸ್ಟರ ಕಪ್ತಾನನ ಪಾಶವೀ ಹಿಡಿತದಲ್ಲಿ, ಅಪ್ಪುಗೆಯಲ್ಲಿ ಸಿಕ್ಕಿ ನರಳಾಡಬೇಕಾದ ಪ್ರಸಂಗ, ಆಮೇಲೆ ಕ್ಲುಪ್ತ ಗಳಿಗೆಯಲ್ಲಿ, ಮಿದುಳುರೋಗದ ತಲೆನೋವಿನ ಕಾರಣ ಆತನ ಹಿಡಿತ ಸಡಿಲಗೊಂಡು, ಆತನೇ ಕುಸಿಯುವದು, ಆದರೂ ಮಾವ್ರಡಳ ಸಹಾನುಭೂತಿಪರ ದೃಷ್ಟಿ – ಇವೆಲ್ಲ ಅತೀವ ರೋಚಕವಾಗಿ ಮೂಡಿ ಬಂದಿವೆ. ಆ ರಾತ್ರಿಯೇ ವಾನ್ ವೇಡನ್ ಮತ್ತು ಮಾವ್ರಡ್ ಪಾರಾಗಿ ಸಾಹಸ ದ್ವೀಪ ಸೇರುತ್ತಾರೆ. 'ವುಲ್ಫ್'ನ ಹಡಗು ಅವರ ಅಣ್ಣನ ಹಡಗಿನ ದಾಳಿಗೆ ಸಿಕ್ಕಿ ವುಲ್ಫ್ ಅನಾಥನಾಗುತ್ತಾನೆ.

ಕೆಲವು ದಿನಗಳ ನಂತರ, ವುಲ್ಫ್ ಲಾರೆನ್ಸನ ಮುರಿದ ಹಡಗು ಸಾಹಸ ದ್ವೀಪದ ದಡ ಸೇರಿ ಮತ್ತೆ ಅವರೆಲ್ಲರ ಸಮಾಗಮವಾಗುತ್ತದೆ. ಆದರೂ ವುಲ್ಫ್‌ನ ಸ್ವಭಾವದಲ್ಲಿ ಬದಲಾವಣೆ ಇರಲಿಲ್ಲ. ಕೊನೆಯ ಉಸಿರಿರುವರೆಗೂ ಅದೇ ಪ್ರಚಂಡ ಇಚ್ಛಾಶಕ್ತಿ, ಕ್ರೌರ್ಯ, ಸ್ವತಂತ್ರ ಚೇತನ.

ಅಷ್ಟರಲ್ಲಿ, ಅಲ್ಲಿ ಬೇರೆ ಹಡಗು ಬರುವ ಸೂಚನೆ ಕಂಡುಬರಲು, ಇಲ್ಲಿಯವರೆಗೆ ಗುಪ್ತಗಾಮಿನಿಯಾಗಿ ಪ್ರವಹಿಸುತ್ತಿದ್ದ ಪ್ರೇಮ – ಸ್ರೋತ, ಪ್ರಥಮ ಬಾರಿ ವಾನ್ ವೇಡನ್ ಹಾಗೂ ಬ್ರೂಸ್ಟರರ ಚುಂಬನ ವಿನಿಮಯದ ಮೂಲಕ ವ್ಯಕ್ತವಾಗಿ ಪ್ರಕಟಗೊಳ್ಳುವಲ್ಲಿಗೆ ಕಾದಂಬರಿ ಮುಕ್ತಾಯವಾಗುತ್ತದೆ.

'ವುಲ್ಫ್', 'ಡೆಥ್ ಲಾರೆನ್ಸನ', 'ಭೂತ' ಹಾಗೂ 'ಸಾಹಸ ದ್ವೀಪ'ಮುಂತಾದವು ಕೇವಲ ಹೆಸರುಗಳಲ್ಲ. ಅನ್ವರ್ಥಕ ಸಾಂಕೇತಿಕವಾಗಿವೆ ಎಂಬುದೇ ಅವುಗಳ ಸ್ವಾರಸ್ಯ. ಅದಮ್ಯ ಸಂಕಲ್ಪಶಕ್ತಿಯ ಪಾಶವೀ ಪ್ರವೃತ್ತಿಯ ರಾಕ್ಷಸನಿಗೆ 'ಕಡಲ ತೋಳ' ನಿಶ್ಚಿತ. ಬೇರಾವ ಹೆಸರು ಇದಕ್ಕೂ ಚೆನ್ನಾಗಿ ಅನ್ವರ್ಥಕವಾಗಿರಲು ಸಾಧ್ಯ ?

ಅತಿಮಾನವತ್ವದೊಡನೆ, ಸಮಾಜವಾದ, ಸಾಮಾಜಿಕ ಮತ್ಸ್ಯನ್ಯಾಯ

(Social Darvinism) ಮುಂತಾದವುಗಳ ಬಗೆಗಿನ ಸಿದ್ಧಾಂತಗಳೂ ಕಾದಂಬರಿಯ ತುಂಬ ಹಾಸುಹೊಕ್ಕಾಗಿ ವ್ಯಾಪಿಸಿವೆ. ಆದರೆ, ಎಲ್ಲಿಯೂ ತತ್ವಜ್ಞಾನದ ಅಥವಾ ಬೌದ್ಧಿಕತೆಯ ಭಾರದಿಂದ ಕಾದಂಬರಿಯ ಕಲಾತ್ಮಕತೆಗೆ ಭಂಗ – ಕುಂದು ಬಂದಿಲ್ಲ. ಇದು ಲೇಖಕನ ಪ್ರತಿಭಾವಿಲಾಸದ ಹೆಗ್ಗುರುತು. ಒಟ್ಟಿನಲ್ಲಿ 'ಕಡಲ ತೋಳ' ಒಂದು ಗಮನಾರ್ಹ ಕೃತಿ.

ಭಾಷಾಂತರ ಒಂದು ಕಲೆ. ಅದಕ್ಕೆ ಬೇಕಾದ ಯಶಸ್ವಿ ಪರಿಕರವೆಂದರೆ ಉಭಯ ಭಾಷಾವಿಶಾರದತ್ವ. ಶ್ರೀಮಾನ್ ರಾಜಪುರೋಹಿತರು ಕನ್ನಡಾಂಗ್ಲ ಭಾಷೆಗಳಲ್ಲಿ ಉದ್ದಾಮ ಪಂಡಿತರು. ಮೇಲಾಗಿ, ಅವರ ಕನ್ನಡ ಗೀರ್ವಾಣ ಭಾಷೆಯ ಭದ್ರ ತಳಪಾಯವನ್ನು ಹೊಂದಿರುವದರಿಂದ, ಭಾಷಾಂತರದ ಕೆಲಸ ಇನ್ನಷ್ಟು ಹಗುರ. ಈ 'ಭಾಷಾ ತ್ರಿವಿಕ್ರಮ'ರಿಗೆ ಭಾಷಾಂತರ ಒಂದು ಸವಾಲು ಎಂಬ ಪ್ರಮೇಯ ಇನ್ನೂವರೆಗೆ ಎದುರಾದುದಿಲ್ಲ. ಆದರೂ ಒಂದು ವಿದೇಶಿ ಭಾಷೆಯಲ್ಲಿನ ಕೃತಿಯನ್ನು ಇನ್ನೊಂದು ಭಾಷೆಗೆ – ಅದು ಮಾತೃಭಾಷೆಯೇ ಇರಲೊಲ್ಲದೇಕೆ – ಅನುವಾದಿಸಬೇಕಾದರೆ ಕೆಲವು ಸೂಕ್ಷ್ಮ ತೊಡರುಗಳು ಎದುರಾಗುತ್ತವೆ. ಯಾಕೆಂದರೆ, ಭಾಷೆ ನಿರ್ಜೀವ ಸಂಗತಿಯಲ್ಲ. ಅದು ಸಂಸ್ಕೃತಿ– ವಾಹಕ. ಇನ್ನೂ ಖಚಿತವಾಗಿ ಹೇಳಬಹುದಾದರೆ, ಭಾಷೆಯೇ ಸಂಸ್ಕೃತಿ. ಪಾಶ್ಚಾತ್ಯ - ಸಂಸ್ಕೃತಿಯ ಅವಿಭಾಜ್ಯ ಅಂಗವಾದ ಇಂಗ್ಲೀಷ್ ಭಾಷೆಯಲ್ಲಿನ ಕೃತಿಗಳನ್ನು ಭಾಷಾಂತರಿಸುವದೆಂದರೆ ಒಂದು ಸಂಸ್ಕೃತಿಯ ಅನುವಾದವೇ ಆಗಿರುತ್ತದೆ. ಆದರೆ, ಸಂಸ್ಕೃತಿ ಎಂದೂ ಸಂಪೂರ್ಣವಾಗಿ ಅನುವಾದದ ತೆಕ್ಕೆಗೆ ಸಿಕ್ಕುವದಿಲ್ಲ. ಆದ್ದರಿಂದಲೇ ಶ್ರೀಮಾನ್ ರಾಜಪುರೋಹಿತರ ಯಶಸ್ವೀ ಅನುವಾದ 'ಕಡಲ ತೋಳ' ನಮ್ಮ ಕುತೂಹಲ ಪ್ರಶಂಸೆಯನ್ನು ಇಮ್ಮಡಿಸುತ್ತದೆ.

ಶ್ರೀಯುತರು ಕನ್ನಡ ಪರಿಸರಕ್ಕೆ ಅಪರಿಚಿತವಾಗಿ ಭಾರವಾಗಬಹುದಾಗಿದ್ದ ತಾಂತ್ರಿಕ ವಿವರಗಳನ್ನು ಬಿಟ್ಟು ಜಾಣ್ಮೆ ತೋರಿದ್ದಾರೆ. ಕನ್ನಡದ ಜಾಯಮಾನಕ್ಕೆ ಹೊಂದುವ ಶಬ್ದ ಪ್ರಯೋಗ ಹಾಗೂ ನುಡಿಗಟ್ಟುಗಳನ್ನು ಪ್ರಯೋಗಿಸುತ್ತ ಹೋಗುವದರಿಂದ ಎಲ್ಲಿಯೂ ಮೂಲದ 'ವಾಸನೆ' ಹೊಡೆಯುವದಿಲ್ಲವಷ್ಟೆ ಅಲ್ಲ, ಪಾತ್ರಗಳ ಹೆಸರುಗಳನ್ನಷ್ಟು ಭಾರತೀಕೃತಗೊಳಿಸಿದರೆ, ಈ ಕಾದಂಬರಿ ಒಂದು ಸೃಜನಾತ್ಮಕ ಸ್ವತಂತ್ರ ಕೃತಿಯೇನೊ ಎನ್ನುವಷ್ಟರಮಟ್ಟಿಗೆ ಅನುವಾದ ಸಹಜ, ಸಶಕ್ತವಾಗಿದೆ. ಲ್ಯಾಂಟರ್ನ್, ಬಕೆಟ್ ಹಾಗೂ ಫರ್ಸ್ ಮುಂತಾದ ಶಬ್ದಗಳನ್ನು ಹಾಗೆಯೇ ಇಟ್ಟು, 'ಭಾಷಾ ಮಡಿವಂತಿಕೆ'ಯ ವಿರುದ್ಧ ಪ್ರಾಯೋಗಿಕ ರೀತಿಯಲ್ಲಿ ತೀರ್ಪನ್ನಿತ್ತಿದ್ದಾರೆ. 'ನೀರತಡೆ', 'ಕೈಗವಸು' ಮುಂತಾದ ಶಬ್ದ ನಿರ್ಮಾಣದಲ್ಲಿ ಅವರ ಸೃಷ್ಟ್ಯಾತ್ಮಕ ಪ್ರತಿಭೆಯನ್ನೂ ಸೆಳಕನ್ನೂ ಗುರುತಿಸಬಹುದಾಗಿದೆ.

ವಾನ್ ವೇಡನ್ 'ಮಾರ್ಟಿನಿಜ್'ದಿಂದ ನೀರಿಗೆ ನುಸುಳಿದ ಮೇಲಿನ ಈ

ವಾಕ್ಯಗಳನ್ನು ಗಮನಿಸಿದರೆ ಅನುವಾದ ಎಷ್ಟು ಸಹಜವಾಗಿ ಬಂದಿದೆ ಎಂಬುದು ತಿಳಿಯುತ್ತದೆ. "ಹೇಗೆ ಎಷ್ಟು ಒರಲಿದೆನೋ ನೆನಪಿಲ್ಲ. ದಣಿದು ಕಣ್ಮುಚ್ಚಿರಬೇಕು. ಎಚ್ಚರಾದಾಗ ಎಷ್ಟೋ ವರ್ಷಗಳಾದಂತೆ." ಕಪ್ತಾನ 'ಕಡಲ ತೋಳ' ವನ್ನು ಮೊದಲ ಬಾರಿಗೆ ನೋಡಿದಾಗ ವಾನ್ ವೇಡನ್‌ನ ಮನದಲ್ಲಿ ಉಂಟಾಗುವ ಪ್ರತಿಕ್ರಿಯೆ ನೋಡಿ—"ಆಕಸ್ಮಿಕವಾಗಿ ನೋಡಿ, ನನ್ನನ್ನು ಸಮುದ್ರದಿಂದ ಪಾರು ಮಾಡಿದ ಆ ಮನುಷ್ಯ ಚುರುಟೊಂದನ್ನು ಬಲವಾಗಿ ಕಚ್ಚುತ್ತ ಬಾಗಿಲ ದಾರಿಯಲ್ಲಿ ಅತ್ತಿಂದಿತ್ತ, ಹೆಜ್ಜೆ ಹಾಕುತ್ತಿದ್ದ. ಆತ ಸುಮಾರು ಆರು ಫೂಟು ಎತ್ತರವಿರಬಹುದು. ಅದಕ್ಕಿಂತ ಹೆಚ್ಚಾಗಿ ನನಗೆ ಮೊದಲು ಬಂದ ಕಲ್ಪನೆ ಆತನ ಶಕ್ತಿ–ಸಾಮರ್ಥ್ಯದ್ದು. ಹರವಾದ ಭುಜಗಳು, ಆಳವಾದ ಎದೆ, ಇವುಗಳಿಂದ ಪರಿಪುಷ್ಟ ದೇಹವೆನಿಸಿದರೂ, ಆ ಸಾಮರ್ಥ್ಯ ಒಂದು ರೀತಿಯಲ್ಲಿ ವನ್ಯ ಪ್ರಾಣಿಗಳಲ್ಲಿ ಕಾಣುವ ಕ್ರೂರ, ಭಯಾನಕ ಸತ್ವದ್ದೆನಿಸುತ್ತಿತ್ತು. ಬಲವಾದ ಹಾವಿನಂತೆ, ತಲೆ ಕತ್ತರಿಸಿ ಬೇರೆಯಾಗಿದ್ದರೂ ಉಳಿದ ದೇಹಕ್ಕೆ ಒಂದು ಬೆರಳು ತಗುಲಿದರೂ ಚೇತರಿಸಿಕೊಂಡು ಹಾರಾಡುವ ಶಕ್ತಿ ಇರುತ್ತದಲ್ಲ, ಹಾಗೆ." ಹಾಗೆಯೇ "ಆತನ ದೇಹವಷ್ಟೇ ಅಲ್ಲದೆ ಎಂಥ ಮನುಷ್ಯನೆಂಬ ಒಗ್ಗೆ ಮೊದಲ ಕಲ್ಪನೆ ಮಾಡಿಕೊಂಡೆ; ಮುಖ, ದೇಹ, ಬಲವಾದ ಅಂಗಾಂಗಗಳು, ನಿಲುವು—ಅವೆಲ್ಲ ತಮ್ಮಷ್ಟಕ್ಕೆ ಬಲಿಷ್ಠವಾದುವೇ. ಆದರೂ ಅದರಾಚೆ,—ಅವೆಲ್ಲವುಗಳ ಹಿಂದೆ, ಅತುಲವಾದ ಪ್ರಖರವಾದ ಬೌದ್ಧಿಕ ಹಾಗೂ ಆತ್ಮಬಲವಿರುವ ಅನುಭವವಾಯಿತು. ಇಂಥ ಬಲದ ವಿವರಣೆ ವರ್ಗೀಕರಣ, ಅಳತೆ, ಅಶಕ್ಯ." ಲಾರೆನ್ಸನ್ನು ದೇಹ–ಸೌಷ್ಠವದ ಬಗ್ಗೆ ಈ ಕೆಳಗಿನ ವಾಕ್ಯಗಳನ್ನು ಓದಿದಾಗ ಇದು ಭಾಷಾಂತರ ಎಂಬ ಭ್ರಮೆ ಎಳ್ಳಿನಿತೂ ಅನಿಸುವದಿಲ್ಲ. "ನಾನು ಸಾಮಾನ್ಯವಾಗಿ ದೈಹಿಕ ಸೌಷ್ಠವಕ್ಕೆ ಅಷ್ಟು ಮಾರುಹೋಗುವವನಲ್ಲವಾದರೂ ಲಾರೆನ್ಸನ ಪ್ರಮಾಣಬದ್ಧವಾದ ದೇಹದ ಆಕೃತಿ ನೋಡಿ ಚಕಿತನಾದೆ. ಮುಖ ಬಿಸಿಲಿನ ತಾಪಕ್ಕೆ ತುಸು ಕಂದು ಬಣ್ಣಕ್ಕೆ ತಿರುಗಿದ್ದರೂ ಇಡೀ ದೇಹ ಶುಭ್ರಕಾಂತಿಯಿಂದ ಹೊಳೆಯುತ್ತಿತ್ತು. ಆದರೆ ಅವನ ಪೌರುಷ ಸೌಂದರ್ಯ ಅವನ ಮಾಂಸಖಂಡಗಳಲ್ಲಿ ಕಾಣುತ್ತಿತ್ತು. ತನ್ನ ತಲೆಯ ಗಾಯ ನೋಡಿಕೊಳ್ಳಲು ಕೈಯೆತ್ತಿದಾಗ ಆದ ಆ ರಟ್ಟೆಯ ಮಾಂಸಖಂಡದ ಚಲನೆ ಜೀವಂತವೆನಿಸಿತು. ಇಲ್ಲಿ ಎಲ್ಲ ಸಪ್ರಮಾಣ. ಗ್ರೀಕ್ ದೇವತೆಯ ಹಾಗೆ ಕಂಡ ಆತ". ವಾನ್ ವೇಡನ್ನನ "ನನ್ನ ಕಾಲ ಮೇಲೆ ನಿಲ್ಲಲು ನಾನು ಕಲಿತಿರಬಹುದು. ಆದರೆ ನಾನಿನ್ನು ಆ ಕಾಲುಗಳಿಂದ ಇತರರನ್ನು ಮೆಟ್ಟಿ ನಿಲ್ಲಬೇಕಾಗಿದೆ" ಎಂಬ ಸಶಕ್ತ ಮಾತುಗಳಲ್ಲಿಯ ಅನುವಾದದ ಶಕ್ತಿಯನ್ನು ಗಮನಿಸಬಹುದು.

ಕಾದಂಬರಿಯಲ್ಲಿಯ ಕೆಲವು ನವುರಾದ ಹಾಸ್ಯ ಪ್ರಸಂಗಗಳಲ್ಲಿ ಅನುವಾದ ಎಷ್ಟು ಸಮರ್ಥವಾಗಿ ಮೈದುಂಬಿ ಬಂದಿದೆ ಎನ್ನುವದನ್ನು ಎತ್ತಿ ತೋರಿಸಬಹುದು.

"ನಿನ್ನ ಶ್ರಮದಿಂದ ಎಂದಾದರೂ ಒಂದು ಡಾಲರ್ ಗಳಿಸಿದೀಯಾ ?" ಎಂಬ ಲಾರೆನ್ಸನ ಪ್ರಶ್ನೆಗೆ ಮಾವುಡ್ ಬ್ರೂಸ್ಟರಳ ಉತ್ತರ ನೋಡಿ. "ಹೌದು ಗಳಿಸಿದ್ದೆ. ನನ್ನ ತಂದೆ, ನಾನು ಚಿಕ್ಕ ಮಗುವಿದ್ದಾಗ ಐದು ನಿಮಿಷ ಸುಮ್ಮನೇ ಇದ್ದುದಕ್ಕೆ ಒಂದು ಡಾಲರ್ ಕೊಟ್ಟಿದ್ದ." ಮುಂದುವರಿದು "ಆದರೆ ಅದು ಬಹಳ ವರ್ಷಗಳ ಹಿಂದೆ. ಈಗ ... ಸದ್ಯ ವರ್ಷಕ್ಕೆ 1800 ಡಾಲರ್ ಗಳಿಸುತ್ತಿದ್ದೇನೆ." ಕೆಲವು ಪದ್ಯಗಳ ಭಾಷಾಂತರವಂತೂ ಅತ್ಯಂತ ಹೃದಯಂಗಮವಾಗಿ ಬಂದಿದೆ. ಉದಾ : "ಇಷ್ಟೊಂದು ವರುಷಗಳ ಮಹಿಳಾ ಪ್ರಪಂಚದಲಿ ನಿನ್ನನರಸುತ್ತಲೇ ತಿರುಗಾಡಿದೆ" ಎಂಬ ಸೈಮನ್ ಕವಿಯ ಸಾಲುಗಳಾಗಲೀ, ಶ್ರೀಮತಿ ಬೌನಿಂಗ್‌ಳ—

"ಕಣಸುಗಳ ಸಂಗದಲಿ ಸಾಹಚರ್ಯವದಾಯ್ತು ಸ್ತ್ರೀ ಪುರುಷರನೆ ಮರೆತು
ಕಾಲಗತಿಸಿತ್ತು । ಕಣಸಿಗರೂ ? ನಯವಂತರ್ ಅವರ ಸಂಗೀತವೇ
ಮಧುರತರ ಸಂಗೀತವಿನ್ನಿಲ್ಲವೆನಿಸಿತ್ತು" ಹಾಗೂ ಮಾವುಡ್ ಹಾಡುವ—

"ಮತ್ತವಳ ಕಂಗಳೇ, ನನ್ನ ಬೆಳಕಾಗಿರಲಿ ಸೂರ್ಯ ಹಿಂದಕೆ ದೂರ ಸಾಗಿದಾಗ,
ಅವಳ ದನಿ ತಂತಿಗಳ ಕಂಪನವೇ ನನ್ನ ಕಿವಿಯಲಿ ಸುಳಿವ ಕೊನೆಯ
ಇಂಚರವಾಗಲಿ"

ಎಂಬಲ್ಲಿಯ ಸಹಜ ಸೌಂದರ್ಯವನ್ನು ಆನಂದಿಸಿಯೇ ಕಂಡು ಕೊಳ್ಳಬೇಕು. ವುಲ್ಫ್ ಲಾರ್ಸ್ನನ ಈ ವಾದದಲ್ಲಿಯ ಅನುವಾದ ಶಕ್ತಿಯನ್ನು ಅದೆಂತು ಮರೆಯಲು ಸಾಧ್ಯ ? "ತರ್ಕದ ನಿರರ್ಥಕತೆಯ ಬಗ್ಗೆ ನನಗೆ ಅನೇಕ ಸಲ ಸಂದೇಹ ಬಂದಿದೆ. ಕನಸುಗಳು ಹೆಚ್ಚು ಸಮಾಧಾನ ತರುವಂತಿರಬೇಕು. ಬೌದ್ಧಿಕ ಸಂತೋಷಕ್ಕಿಂತ ಭಾವನಾತ್ಮಕ ಸಂತೋಷ ಹೆಚ್ಚು ಪೂರಕ ಹಾಗೂ ಶಾಶ್ವತ. ಇಂಥ ಆನಂದದಿಂದ ನಿಮಿಷಗಳ ನಂತರ ಇಂದ್ರಿಯಗಳು ಜಡವಾದಂತೆನಿಸಿದರೂ ಅವು ಮತ್ತೆ ವೇಗವಾಗಿ ಪುನರುಜ್ಜೀವಿತಗೊಳ್ಳುತ್ತವೆ. ನಿಮ್ಮನ್ನು ನೋಡಿದರೆ, ನನಗೆ ಅಸೂಯೆಯಾಗುತ್ತದೆ, ಅಸೂಯೆ." ಅಲ್ಲದೆ ಲುಸಿಫರ್‌ನ ಬಗ್ಗೆ ಆತನ ವಾದ "ಅವನು ಕಡಿಮೆ ಶೂರನಿದ್ದನೆಂತಲೂ ಅಲ್ಲ. ಕಡಿಮೆ ಮಹತ್ವಾಕಾಂಕ್ಷಿಯೇದೂ ಅಲ್ಲ. ತನ್ನ ಕಾಲಮೇಲೆ ತಾನು ನಿಲ್ಲುವ ಸ್ವತಂತ್ರ ವ್ಯಕ್ತಿ" ಎಂಬುದು ಆತನ ಮನೋಭೂಮಿಕೆಯನ್ನೂ ಸಂಕೇತಿಸುತ್ತದೆ.

"ಇಲ್ಲಿ ನಾವೇ ಸ್ವತಂತ್ರರು, ಸರ್ವಶಕ್ತ ಹೆಮ್ಮೆ
ಗಿಲ್ಲಿನಿತು ಇಂಬಿಲ್ಲ. ನಮಗೆ ಕಿರುಕುಳವಿಲ್ಲ
ಆಳೋಣ ಸುಖವಾಗಿ ನನ್ನಿಚ್ಛೆಗನುವಾಗಿ ಆಳುವಾಸೆಯೇ ಹಿರಿದು,
'ನರಕವಾದರು ಸರಿಯೆ ಸಗ್ಗದೂಳಿಗಕಿಂತ ನರಕದಾಳಿಕೆ ಲೇಸು"

ಎಂಬುದು ಲಾರ್ಸ್ನನ ಧೋರಣೆಯನ್ನು ಎಷ್ಟು ಚೆನ್ನಾಗಿ ಅಭಿವ್ಯಕ್ತಿಸುತ್ತದೆ ! "ನನ್ನ ಪ್ರೇಮ ಪ್ರಪಂಚದಲ್ಲಿ ಚರ್ಮ ಮಾಂಸಗಳ ಸಂಬಂಧದ ಪಾತ್ರ ತೀರ ಗೌಣ

ವಾಗಿತ್ತು. ಆತ್ಮ ತನ್ನ ಅಭಿವ್ಯಕ್ತಿಯನ್ನು ದೇಹದ ಮೂಲಕ ಚರ್ಮಮಾಂಸಗಳ ಮೂಲಕವೇ ಸಾಧಿಸುತ್ತದೆಯೆಂಬ ಮಧುರವಾದ ಪಾಠವನ್ನು ನನ್ನಷ್ಟಕ್ಕೆ ನಾನೇ ಕಲಿಯತೊಡಗಿದ್ದೆ" ಎಂಬ ವಾನ್ ವೇಡನ್‌ನ ಮಾತು ಪ್ರೇಮ ಮೀಮಾಂಸೆಯನ್ನು ಎಷ್ಟು ಸುಲಭ ಶಬ್ದಗಳಲ್ಲಿ ನಮ್ಮ ಮುಂದಿಡುತ್ತಿದೆ! ಪ್ರೇಮದ ಶಕ್ತಿಯನ್ನು ಆದು ಬಾಳಿಗೆ ಕೊಡುವ ಸ್ಫೂರ್ತಿಯ ತಾಕತ್ತನ್ನು ವಾನ್ ವೇಡನ್ನ್‌ನ ಮಾತುಗಳು ಎಷ್ಟು ಚೆನ್ನಾಗಿ ಮನದಟ್ಟುಮಾಡಿಕೊಡುತ್ತವೆ! "ಮರಣವೆಂದರೆ ಬೇಸರಿಸುವಷ್ಟು, ಬಾಳು ಬೆಲೆಯುಳ್ಳದ್ದೆನಿಸುವದಾದರೆ ಪ್ರೀತಿಸಲ್ಪಡುವದಕ್ಕಿಂತ ಪ್ರೀತಿಸುವದೇ ಉತ್ತಮ ಮಾರ್ಗ. ಇನ್ನೊಂದು ಜೀವನವನ್ನು ಪ್ರೀತಿಸುವ ಭರದಲ್ಲಿ ನನ್ನ ಸ್ವಂತ ಜೀವವನ್ನೇ ಮರೆಯುತ್ತೇನೆ. ಆದರೂ ನನ್ನ ಬದುಕು ಈಗ ಅಂದರೆ ನನ್ನ ಜೀವಕ್ಕೆ ತೀರ ಕಡಿಮೆ ಬೆಲೆ ಕೊಡುವಾಗ, ಇರುವಷ್ಟು ಬಲವಾಗಿ ಹಿಂದೆಂದೂ ಇರಲಿಲ್ಲ." ಕಾದಂಬರಿಯ ಕೊನೆಯ ತೀರ ರೋಮ್ಯಾಂಟಿಕ್ ಆಗಿ ಚಿತ್ರಿತವಾದ ಸನ್ನಿವೇಶವಂತೂ ಅತೀವ ಆಪ್ಯಾಯಮಾನವಾಗಿ ಮೂಡಿಬಂದಿದೆ. "ಅವಳ ತುಟಿಗಳಿಗೆ ನನ್ನ ತುಟಿಗಳನ್ನು ಒತ್ತಿದೆ. ಅದೇನು ಕಲ್ಪನಾಶಕ್ತಿಯ ಚಮತ್ಕಾರವೊ ತಿಳಿಯದು—'ಭೂತ'ದ ಕ್ಯಾಬಿನ್‌ನಲ್ಲಿ ನನ್ನ ತುಟಿಗಳನ್ನು ಆಕೆ ತನ್ನ ಬೆರಳುಗಳಿಂದ ಒತ್ತಿ 'ಹುಶ್ ಹುಶ್' ಎಂಬ ದೃಶ್ಯ ಮಿಂಚಿ ಹೋಯಿತು." "ನನ್ನ ಹೆಂಗಸು... ಚಿಕ್ಕ ಹೆಂಗಸು" ಎನ್ನುತ್ತ ನಾನು ಎಲ್ಲ ಪ್ರೇಮಿಗಳೂ ಯಾವ ಶಾಲೆಯಲ್ಲಿಯೂ ಕಲಿಯದೆಯೇ ತಿಳಿದುಕೊಂಡಿರುವ ರೀತಿಯಲ್ಲಿ ನನ್ನ ಇನ್ನೊಂದು ಕೈಯಿಂದ ಅವಳ ಭುಜಗಳನ್ನು ಸವರುತ್ತಿದ್ದೆ" ಎಂಬಲ್ಲಿಯ ಸಹಜ ಅಭಿವ್ಯಕ್ತಿ ಅದೆಷ್ಟು ಸಶಕ್ತವಾಗಿ ಮೂಡಿ ಬಂದಿದೆ! ಇನ್ನೂ ಎಷ್ಟೋ ಇಂಥ ಸಾರ್ಥಕ ಅನುವಾದಗಳ ಅಸಂಖ್ಯ ಸಾಲುಗಳನ್ನು ಈ ಕೃತಿಯ ತುಂಬ ಕಾಣುತ್ತೇವೆ. ಅವೆಲ್ಲವನ್ನೂ ಉದ್ಧರಿಸುವದೆಂದರೆ ಇಡೀ ಕೃತಿಯನ್ನೇ ಪುನಃ ವಿವರ - ವಿವರವಾಗಿ ನಿರ್ದೇಶಿಸಬೇಕಾಗುತ್ತದೆ. ಒಟ್ಟಿನಲ್ಲಿ ಇದು ಅನುವಾದವಲ್ಲ—ಸ್ವತಂತ್ರ ಕೃತಿಯೇನೊ ಎನ್ನುವಷ್ಟರ ಮಟ್ಟಿಗೆ ಅನುವಾದ ಮರೆಯಾಗಿ ಸಹಜ ಸುಂದರ ಕೃತಿ ನಮ್ಮೆದುರಿಗಿದೆ. ಅಂತೂ ಸಶಕ್ತ, ಸಾರ್ಥಕ ಸುಂದರ ಹಾಗೂ ಸಹಜ ಅನುವಾದಕ್ಕೆ ಒಂದು ಜ್ವಲಂತ ನಿದರ್ಶನ 'ಕಡಲ ತೋಳ'.

'Translators are murderers' ಎಂಬ ಆಂಗ್ಲೋಕ್ತಿ ಭಾಷಾಂತರಕಾರರ ಗುರುತರ ಜವಾಬ್ದಾರಿಯನ್ನು ನಿರ್ದೇಶಿಸುತ್ತದೆ. ಆದರೆ ಶ್ರೀಮಾನ್ ರಾಜಪುರೋಹಿತರು ಈ ಅಪವಾದದಿಂದ ಮುಕ್ತರಾಗಿದ್ದಾರೆಂದು ಘಂಟಾ ಘೋಷವಾಗಿ ಸಾರಿ ಹೇಳಬಹುದು ಇದು ಅವರ ಸಾಮರ್ಥ್ಯದ ಪ್ರತಿಭೆಯ ಅಗ್ಗಳಿಕೆ. ಎಂತಲೇ 'ಖೂನಿ' ಅವರ ಲೇಖನಿಯಿಂದ ಖಂಡಿತ ಅಸಾಧ್ಯ. 'Art lies in concealing art' ಎಂಬ ಇನ್ನೊಂದು ಉಕ್ತಿಯೂ ಆಂಗ್ಲ ಭಾಷೆಯಲ್ಲಿದೆ. ಭಾಷಾಂತರವೂ

ಒಂದು ಮಹತ್ವದ ಕಲೆ. ಯಶಸ್ವೀ ಭಾಷಾಂತರದ ನಿಕಷವೆಂದರೆ ಭಾಷಾಂತರ, ಇದು ಭಾಷಾಂತರ ಎನ್ನಿಸದಿರುವದು. ಈ ಒರೆಗಲ್ಲಿಗೆ ತಿಕ್ಕಿ ನೋಡಿದಾಗ 'ಕಡಲ ತೋಳ' ಭಾಷಾಂತರವನ್ನು 'ಅಡಗಿಸಿದ' ಒಂದು ಯಶಸ್ವೀ ಅನುವಾದ ಎಂಬುದ ರಲ್ಲಿ ಸ್ವಲ್ಪವೂ ಅತಿಶಯೋಕ್ತಿ ಇಲ್ಲ. ಶ್ರೀಮಾನ್ ರಾಜಪುರೋಹಿತರ ಪ್ರತಿಭಶಾಲಿ ಲೇಖನಿಯಿಂದ ಸೃಜನಾತ್ಮಕ ಕಲಾಕೃತಿಗಳೂ ಅನುವಾದ ಕೃತಿಗಳೂ ಇತೋಪ್ಯತಿ ಶಯಃವಾಗಿ ಹೊರಬಂದು ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತವಾಗಿಸಲಿ ಎಂಬ ಹಾರ್ದಿಕ ಕಳಕಳಿಯ ಹಾರೈಕೆ, ಪ್ರಾರ್ಥನೆಯೊಂದಿಗೆ ಈ ಲೇಖನವನ್ನು ವಿರಾಮಿ ಸುತ್ತೇನೆ.

# ಶಿಥಿಲಶಿಲೆ – ಐತಿಹಾಸಿಕ ಕಥೆಗಳು

**ಎಸ್. ಟಿ. ಕಲ್ಲಾಪುರ**

ಇಂಡಿಯನ್ ಎಕ್ಸ್‌ಪ್ರೆಸ್ 9–12–73

ಇದು ಚೆನ್ನಾಗಿ ಬರೆದ ಹನ್ನೊಂದು ಕಥೆಗಳ ಸಂಗ್ರಹ. ಚಾರಿತ್ರಿಕ ಘಟನೆಗಳನ್ನು ಅವಗಳಲ್ಲಡಗಿದ ನಾಟಕೀಯ ಅಂಶ ಮತ್ತು ಮಾನವೀಯ ಆಸಕ್ತಿಗಳಿಗಾಗಿ ಆಯ್ದುಕೊಳ್ಳಲಾಗಿದೆ. ಆಗಿನ ಕಾಲದ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಜೀವನದ ಮೇಲೆ ಈ ಘಟನೆಗಳು ಬೆಳಕು ಚೆಲ್ಲುತ್ತವೆ. ಮೊದಲ ಕಥೆ ತುಂಬ ಚೆನ್ನಾಗಿ ಬಂದಿದೆ. ಒಬ್ಬ ಆಧುನಿಕ ಮನುಷ್ಯ ಚಾರಿತ್ರಿಕ ಘಟನೆಯನ್ನು ಕಲ್ಪಿಸಿಕೊಂಡ ರೀತಿ (ಕುಣಿತ ನಿಂತಿತು) ಹೃದ್ಯವಾಗಿದೆ. ಇತರ ಎಲ್ಲ ಕಥೆಗಳ ಶೈಲಿಯಂತೆ ಈ ಕಥೆಯ ಶೈಲಿಯೂ ವಿಷಯಕ್ಕೆ ತಕ್ಕುದಾಗಿದೆ. ಅಂದರೆ ಶೈಲಿಯ ನಾವೀನ್ಯ ವಸ್ತುವಿಗೆ ಒಂದು ಬಗೆಯ ಆಳವನ್ನು ತಂದು ಕೊಡುವ ಮೂಲಕ ಕಾಲ ಪರಿಮಿತಿಯನ್ನು ಮೀರಿ ನಿಲ್ಲುತ್ತದೆ. 'ಕೊರಳು ಕತ್ತರಿಸಿದ ಬಿರುದು' 'ಮುದಗಲ್‌ನಲ್ಲಿ ಮೇರಿಯಾ' 'ಶ್ವೇತ ಸನ್ಯಾಸಿ' ಇವು ಉತ್ತಮತರ ಕಥೆಗಳು. ಈ ಕಥೆಗಳಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರರ ಪ್ರಭಾವ ಕಂಡುಬರುತ್ತದೆ.

# ರಾಜಪುರೋಹಿತರ ಸಣ್ಣ ಕತೆಗಳು

ಪ್ರೊ. ಜಿ. ಕೃಷ್ಣರಾವ್
ರಾಯಚೂರು

ಸ್ವಕೀಯ ಹಾಗೂ ರಾಜಕೀಯ ಘಟನೆಗಳ ಪ್ರತಿಕ್ರಿಯೆಯಿಂದ ಹೊರ ಹೊಮ್ಮಿದ ಹತ್ತು ಕಥೆಗಳ ಪ್ರಥಮ ಕಥಾ ಸಂಕಲನವೇ 'ಪಾರವ್ವನ ಪಂಚಾಯಿತಿ.' ರಕ್ತ ಸಂಬಂಧಕ್ಕಿಂತ ಭಾವ ಸಂಬಂಧ ಮುಖ್ಯ ; ನಮ್ಮವರು-ಪರರು ಎಂಬ ಸ್ಪಷ್ಟ ಅರಿವು ಮೂಡುವದು ಆಪತ್ಕಾಲದಲ್ಲಿ, ಎಂಬ ಕಥೆ 'ನಮ್ಮವರು ಯಾರು?'. ಮಾನಸಿಕ ದೌರ್ಬಲ್ಯದಿಂದ ವ್ಯಕ್ತಿ ಒಮ್ಮೆ ಜಾರಿದರೆ ಇಡೀ ಜೀವನವೇ ಹಾಳೆಂದು ಚಿತ್ರಿಸುವದು 'ಸಯಿದಾ ಸುಮತಿಯಾದಳು.' ಸಮಾಜ ನಡೆಸಿಕೊಳ್ಳುವ ದುರ್ಬಲರ ಚಿತ್ರಣವೇ 'ದೇವಿಯೋ ಹುಚ್ಚಿಯೋ ?'. ನಮಗಾಗಿ ಸಾಯುವವರು ದುರ್ಬಲರಾದಾಗ ನಾವು ಅವರಿಗಾಗಿ ಸಾಯಬೇಕೆಂದು 'ಡಾ॥ ಶಾಲಿನಿ ವಾರಿಖ.' ಯಾರ ತಪ್ಪಿಗೆ ಯಾರಿಗೆ ಶಿಕ್ಷೆ ? ಎಂದ ಪ್ರಶ್ನೆಯೇ 'ಮುಂದೇನು ?'. ಕಾಯಿದೆ ಜಗಳ ಆಡಲಿಕ್ಕಲ್ಲ ; ಜಗಳದಿಂದ ಉಳಿಯಲಿಕ್ಕೆನ್ನುವದು 'ಗೌರಮ್ಮನ ಹಾಲು'. ವರ್ಣಗಳು ಮಾನವ ನಿರ್ಮಿತ ; ರಕ್ತಗಳು ದೇವ ನಿರ್ಮಿತವೆಂದರುಹುವದು 'ರಕ್ತಋಣ'. ದೈವ ಪಿಶಾಚಿಗಳ ಅಸ್ತಿತ್ವದ ಮೇಲೆ ನಡೆಸಿದ ಜಿಜ್ಞಾಸುವೇ 'ದೆವ್ವದ ಬಂಗಾರ'. ಅಚ್ಚು ಹಾಕಿಸುವ ಹವ್ಯಾಸದಿಂದ, ಮಹಿಳೆಯರ ಹೆಸರಾದರೆ ಅಚ್ಚಾಗುವದೆಂಬ ಆಸೆಯಿಂದ, ಕತೆಗಳನ್ನು ಪತ್ನಿಯ ಹೆಸರಿನಲ್ಲಿ ಕಳಿಸಿ ಪೇಚಿಗೆ ಬಿದ್ದು ಕೊನೆಗೆ ಅವಳನ್ನು ಬರಹಗಾರಳನ್ನಾಗಿ ಮಾಡುವದು 'ಕತೆಗಾರ್ತಿ'. 1961 ರಲ್ಲಿ ರಾಯಚೂರಿನ ಕರ್ನಾಟಕ ಸಂಘವು ಬೆಳ್ಳಿಹಬ್ಬದ ಉತ್ಸವದ ಅಂಗವಾಗಿ ಏರ್ಪಡಿಸಿದ 'ಅಖಿಲ ಕರ್ನಾಟಕ ಕಥಾ ಸ್ಪರ್ಧೆ'ಯಲ್ಲಿ ಮೊದಲನೇ ಬಹುಮಾನ ಗಳಿಸಿದ ಕಥೆಯೇ "ಪಾರವ್ವನ ಪಂಚಾಯಿತಿ". ಎಲ್ಲರ ಹುಳುಕುಗಳನ್ನರಿತ ಸಿಂಗಾರಹಳ್ಳಿಯ ಪಾರಾಸಾನಿ ಪಂಚಾಯಿತಿಯ ಚೇರಮನ್ನಳಾಗಿ ಎಲ್ಲರಿಂದಲೂ 'ಹೌದು' ಎನಿಸಿಕೊಳ್ಳುವ ಕೆಲಸ ಹೇಗೆ ಮಾಡಿದಳೆಂಬುದನ್ನು ತಿಳಿಸುವದು.

ಈ ಹತ್ತು ಕಥೆಗಳಲ್ಲಿ ಎದ್ದು ಕಾಣುವ ಅಂಶವೆಂದರೆ ರಸಿಕತೆ. 'ದೇವಿಯೊ

ಹುಚ್ಚಿಯೊ ?' ಎಂಬ ಕಥೆಯಲ್ಲಿ ಬಳಸಿದ ರೂಪಕ. ಗಾಯಗೊಂಡ ನಾಯಿಯನ್ನು ರಣಹದ್ದುಗಳು ಕುಕ್ಕಿ ಕುಕ್ಕಿ ತಿನ್ನುವದು—ಕಥೆಗೆ ಸಾರ್ಥಕ ಸಂಕೇತವಾಗಿದೆ.

ಸಮಕಾಲೀನತೆಯ ಉಡುಪುಗಳನ್ನು ಧರಿಸಿ ಬಂದ ಎಂಟು ಕಥೆಗಳ ಎರಡನೆಯ ಕಥಾ ಸಂಕಲನವೇ 'ರೋಹಿಣಿ'. ವಾಸ್ತವ ಪ್ರಜ್ಞೆಯಿಲ್ಲದ ಕರ್ಮಜ್ಞಾನ. ಉಪಯೋಗಕ್ಕೆ ಬಾರದೆಂಬ ನೀತಿ ಕಥೆಯೇ 'ರೋಹಿಣಿ'. ತನಗೆಷ್ಟೇ ಅನ್ಯಾಯವಾದರೂ ಅದರ ಸೇಡನ್ನು ವ್ಯಕ್ತಿ ಮರೆತೂ ದೇಶದ ಮೇಲೆ ತೆಗೆದುಕೊಳ್ಳಬಾರದೆಂಬುದು 'ಕೊನೆಯ ಇಂಟರ್‌ವ್ಯೂ'. ಸೃಷ್ಟಿಯ ಆದಿಯನ್ನು ಕುರಿತ ಚರ್ಚೆಯೇ 'ಪ್ರಶ್ನೆಗರ್ಭ'. ಇನ್ನೊಂದು ಕಡೆ 'ಕಂಡಕ್ಟ ಸರ್ಟಿಫಿಕೇಟ'. ಅದು ಎಲ್ಲರಿಗೂ ಬೇಕು. ಕೊಡುವಾಗ ಹಿನ್ನೆಲೆಯನ್ನು ಅರಿಯುವರಾರು ? ಮಣ್ಣಿನ ವಾಸನೆ ಮಸಣಕ್ಕೆ ಹೋಗುವವರೆಗೂ ಬಿಡದು. "ಮಣ್ಣು ನೋಡುವ ಕಣ್ಣು ಮುಗಿಲ ಮರೆತೀತು–" ಎಂದು ಹೇಳುತ್ತದೆ 'ಗಂಧವತೀ ಪೃಥವಿ'. ಸ್ವಾರ್ಥಕ್ಕಾಗಿ, ಲಾಭಕ್ಕಾಗಿ ಎಲ್ಲರೂ ಸಂತ್ರಸ್ತರು ; ನಿಸ್ವಾರ್ಥ ಮತ್ತು ತ್ಯಾಗಗಳಿಗಾಗಿ 'ಯಾರು ಸಂತ್ರಸ್ತ ?' ಪ್ರೇಮಕ್ಕಿಂತ ರಾಷ್ಟ್ರ ದೊಡ್ಡದೆನ್ನುತ್ತದೆ 'ಜಾನ್ ಷಣ್ಮುಗನ್' ಎಂಬ ಕಥೆ. ಕುಟುಂಬ ಯೋಜನೆಯ ಬಲದ ಮೇಲೆ ನಿಂತಿದೆ 'ಬಹದ್ದೂರ ನನ ಗಂಡ.' ಗಂಭೀರ ಸಮಸ್ಯೆಗಳನ್ನು ಕುರಿತು ಚರ್ಚಿಸುವ ಈ ಕಥೆಗಳು, ವಾಚಕರನ್ನು ವಿಚಾರ ಮಾಡಲು ಹಚ್ಚುತ್ತವೆ.

ಸಾಮಾಜಿಕ ಮೌಲ್ಯಗಳನ್ನು ವಿಶ್ಲೇಷಿಸುವ ಒಂಬತ್ತು ಕಥೆಗಳ ಸಂಗ್ರಹ 'ಮೌಲ್ಯಗಳು'. ಶೀಲ ಅಶ್ಲೀಲಗಳು ಹೊರಗಿನಾಚರಣೆಯಿಂದಲ್ಲ ಒಳಗಿನಿಂದ ಗುರುತಿಸಬೇಕು. ಅವು ದೇಹಕ್ಕಿಂತ ಹೆಚ್ಚು ಮನಸ್ಸಿಗೆ ಸಂಬಂಧಪಟ್ಟವು. ರಾಯಚೂರು ಜಿಲ್ಲೆಯ ಆವೂರ (ಕನಕಗಿರಿ) ಹೋಳಿ ಹುಣ್ಣಿಮೆಯ ಜಾತ್ರೆಯಲ್ಲಿ ಕುಣಿಯುತ್ತಿದ್ದ 'ಮಹಿಮರ ಅಥವಾ ಹುರ್‍ರ' ಕುಣಿತದ ಕತೆ 'ಇಲ್ಲಿ ಕಾಮ ಸತ್ತಿಲ್ಲ' ವೆಂಬುದು ತಿಳಿಸುತ್ತದೆ. ಗಂಡು ತೊರೆದಾಗ ಕಾಮವನ್ನು ದಮನಮಾಡಿ ಅವನ ಒಳಿತನ್ನೇ ಹಾರೈಸುವದು ಒಂದು ಮೌಲ್ಯ. ಗಂಡ ದೀರ್ಘಾವಧಿ ದೂರ ಉಳಿದಾಗ ಅದಮ್ಯ ಕಾಮವನ್ನು ತಾಳದೆ ಗರತಿಯಾದವಳು ಎಲ್ಲರ ಎಂಜಲು ಆಗುವದರ ಬದಲು ಇರುವಷ್ಟು ದಿನ ಸುಖದಿಂದ ಕಾಲಕಳೆದು ಅವನು ತಿರುಗಿ ಬಂದ ಮೇಲೆ ಪುನಃ ಕೂಡಿಕೊಳ್ಳುವದು ಮತ್ತೊಂದು ಮೌಲ್ಯ—'ಇವೆರಡೂ ಮೌಲ್ಯಗಳು' ಬೇಕಾದುದನ್ನು ತೆಗೆದುಕೊಳ್ಳಿ. ಸಮಾಜದೊಳಗಿನ ಸಂಪ್ರದಾಯಗಳನ್ನು ತಿಳಿದು ಆಚರಿಸಬೇಕು, ಮೌಢ್ಯತೆಯಿಂದಲ್ಲ ಎಂದು 'ಗೋಮಯ ವಿವೇಕ ಹೇಳುತ್ತದೆ'. ಅಧಿಕಾರಿಗಳೂ, ಮಂತ್ರಿಗಳೂ ಪ್ರವಾಸ ಕೈಗೊಂಡಾಗ ಎಲ್ಲ ತೆರನಾದ ಸರಬರಾಜು ಆಗಬೇಕು. ಆಗುವದು ಹೇಗೆ ? ಎಂಬ ವಿವೇಚನೆ ಮಾತ್ರ ಬೇಡ. ಇವರನ್ನು ಸಂತೋಷಗೊಳಿಸುವದೇ ಗುರಿಯಾಗಿಟ್ಟುಕೊಂಡ ಇತರ ಪದಾಧಿಕಾರಿಗಳು ತಮಗಿಂತಲೂ ಕೆಳವರ್ಗದವರಿಂದ ಸುಲಿದು ಮೇಲಿನವರನ್ನು ಸಂತೋಷಪಡಿಸುತ್ತಾರೆ.

ಕೆಳಗಿನ ಸುಲಿಗೆ ಸಮಾಜದ ದೃಷ್ಟಿಯಲ್ಲಿ ಅಪರಾಧ ; ಮೇಲಿನದು ಆದರಣೀಯ. ಆದರೆ ಇವೆರಡರ ತಾಕಲಾಟದಲ್ಲಿ ಸಾಯುವವನು ಯಾವನೋ ? ಅಥವಾ ಕೊಲ್ಲು ವವನು ಯಾವನೋ ? ಎಂಬುದು ವಿಶದ ಪಡಿಸುತ್ತದೆ "ನಾನೆ ಕೊಂದೆನೆ ?" ಇಂದಿನ ಪ್ರಜಾರಾಜ್ಯದ ಆದರ್ಶ ವಾದಗಳೆಲ್ಲವೂ ಚಲಿಸುವ ಬಸ್ಸಿನೊಳಗೆ ಕುಳಿತ ಹಾಗೆ. ಬಸ್ಸು ನಿಂತಾಗ ಸತ್ಯದ ಮುಖವೆಲ್ಲ ಧೂಳುಮಯ. ಸತ್ತ ಕೂಸಿನ ಪ್ರತಿಮೆ 'ಧೂಳು' ಕಥೆಯ ಬಿಗುವನ್ನು ಹೆಚ್ಚಿಸಿದೆ. ಆಚರಣೆಯಲ್ಲಿ ಕುರುಡುತನಕ್ಕಿಂತ ನಂಬಿಕೆ ಮುಖ್ಯ—ನಂಬಿಕೆ ಮೂಢತನದಿಂದ ಕೂಡಿದ್ದರೂ ಅಡ್ಡಿಯಿಲ್ಲ. ಏಕೆಂದರೆ ಮೊದಲಿನದರಲ್ಲಿ ಶ್ರದ್ಧೆಯಿಲ್ಲ : ಎರಡನೆಯದರಲ್ಲಿ ಶ್ರದ್ಧೆಯಿದೆ. ಈ ಶ್ರದ್ಧೆ ಮುಖ್ಯವೆಂದು ಹೇಳುವದು 'ನಂಬಿಕೆ'ಯ ಕಥೆ. ಒಳಗಿನ ದೋಷಗಳು ಹೊರ ಕಣ್ಣಿಗೆ ಕಾಣಿಸುವದಿಲ್ಲವಾದ್ದರಿಂದ ಹೊರಗಿನ ದೇಹಗಳು ಕೂಡಿದರೂ ಒಳಗೆ ತೃಪ್ತಿಯಿರುವದಿಲ್ಲವೆನ್ನುವದು 'ವಿಕೃತಿ'. 'ಗಣತಿ-ಗಣಾಚಾರಿ'ಯೆಂಬ ಹಾಸ್ಯ ಕಥೆಯೊಂದರಲ್ಲಿ, ಜನಗಣತಿಯ ಮೂಲಕ, ನಮ್ಮ ಸಮಾಜದಲ್ಲಿ ಕಂಡುಬರುವ ಏರುಪೇರು. ದ್ವಂದ್ವತ್ವವನ್ನು ಚೆನ್ನಾಗಿ ಚಿತ್ರಿಸಿದ್ದಾರೆ.

ಇವರ ಇನ್ನೊಂದು ಕಥಾ ಸಂಕಲನ 'ಶಿಥಿಲಶಿಲೆ'. ಇದರಲ್ಲಿ ಸುಮಾರು ಹನ್ನೊಂದು ಕಥೆಗಳು. ಈ ಎಲ್ಲ ಕಥೆಗಳಿಗೂ ಐತಿಹಾಸಿಕ ಹಿನ್ನೆಲೆಯೇ ಆಧಾರ. ರಾಜಪುರೋಹಿತರಿಗೆ ಇತಿಹಾಸದಲ್ಲಿ ವಿಶೇಷ ಆಸಕ್ತಿ. ಕೆಲವು ಐತಿಹಾಸಿಕ ವ್ಯಕ್ತಿಗಳು ಹಾಗೂ ಘಟನೆಗಳೇ ಈ ಕಥೆಗಳಿಗೆ ಪ್ರೇರಕ ಶಕ್ತಿಯಾಗಿವೆ. ತಾರುಣ್ಯದಲ್ಲಿ ವಿಷಯ ಲೋಲನಾದ ಬಾಣನು ಪ್ರಥಮ ಸಲ ಹರ್ಷವರ್ಧನನನ್ನು ಯಾವ ಚಾಣ್ಮೆಯಿಂದ ಎದುರಿಸಿದನೆಂಬುದು 'ಬಾಣ ಸಂದರ್ಶನ'. ಮುಳ್ಳನ್ನು ಮುಳ್ಳಿನಿಂದ ತೆಗೆಯಬೇಕೆನ್ನುವ ನೀತಿಯ ಆಧಾರದ ಮೇಲೆ, ಎರಡು ಬೆಟ್ಟಗಳ ಸಂಕೇತದ ಮೇಲೆ ಸುಂದರವಾಗಿ ನಿಂತ ಐತಿಹಾಸಿಕ ಕಥೆ 'ಕುಣಿತ ನಿಂತಿತು'. ಗೌರವ ಪ್ರತಿಷ್ಠೆಗಳಿಂದ ಕೂಡಿದ ಅಭಿಮಾನವೆಲ್ಲರಿಗೂ ಬೇಕು. ಆದರೆ ಈ ಅಭಿಮಾನ ದುರಭಿಮಾನ ಹೊಂದುವಷ್ಟು ದೂರ ಹೋಗಬಾರದೆಂದು 'ನಾರಿಯೋ ಧಾರುಣಿಯೋ' ಎಂಬ ಕಥೆ ತಿಳಿಸುತ್ತದೆ. ಕ್ರಿಶ್ಚಿಯನ್ ಪಾದ್ರಿಗಳ ಮತಾಂತರ ಪ್ರಚಾರವನ್ನಾಧರಿಸಿ ಬರೆದ ಕಥೆ 'ಸ್ವೇತ ಸನ್ಯಾಸಿ'. ಇದೇ ಹಿನ್ನೆಲೆಯಲ್ಲಿ ಬರೆದ ಇನ್ನೊಂದು ಕಥೆ 'ಮುದಗಲ್ಲಿನಲ್ಲಿ ಮೇರಿಯಾ' 'ಸ್ವೇತಸನ್ಯಾಸಿ'ಯಲ್ಲಿ ಮತಾಂತರ ಪ್ರಚಾರ ಪೂರ್ವಸಿದ್ಧತೆ ಮತ್ತು ಆದರ ನಿಷ್ಫಲ ಪರಿಣಾಮದ ಚಿತ್ರಣವಿದೆ. "ಮುದುಗಲ್ಲಿನಲ್ಲಿ ಮೇರಿಯಾ" ಐತಿಹಾಸಿಕ ಘಟನೆ. ಈ ಘಟನೆಯನ್ನು ಕಲಾತ್ಮಕವಾಗಿ ಲೇಖಕರು ಜೀವಂತಗೊಳಿಸಿದ್ದಾರೆ. ಇದೇ ಘಟನೆಯನ್ನು ಬೆಳಸಿಕೊಂಡು 'ಜೋಹರಾ' ಎಂಬ ಐತಿಹಾಸಿಕ ಕಾದಂಬರಿ ಬರೆದಿದ್ದಾರೆ.

ಒಟ್ಟು ಕಥೆಗಳನ್ನು ಆಮೂಲಾಗ್ರವಾಗಿ ನೋಡಿದಾಗ ರಾಜಪುರೋಹಿತರಿಗೆ

ಕಥನಕಲೆ ಸಿದ್ಧಿಸಿದೆಯೆಂದೇ ಹೇಳಬಹುದು. ವಿಷಯ ಯಾವದೇ ಇರಲಿ ರಾಜಕೀಯ ವಾಗಲಿ, ಸಾಮಾಜಿಕವಾಗಲಿ, ಐತಿಹಾಸಿಕವಾಗಲಿ, ಆಡಳಿತದ್ದೇ ಆಗಲಿ, ಮನೋ ವಿಶ್ಲೇಷಣಾತ್ಮಕವಾಗಲಿ—ಸುಂದರವಾಗಿ ರೂಪಿಸುವ ಕಲೆಗಾರಿಕೆ ಅವರದು.

ಭಾಷೆ ಟಾರ್ ರೋಡಿನ ಮೇಲೆ ಸೈಕಲ್ ಓಡುವಂತೆ ಓಡುತ್ತದೆ. ಅಪಘಾತ ಕ್ಕೀಡಾಗುವದೆಂಬ ಹೆದರಿಕೆಯಿಲ್ಲ. ಹಾಗೆನಿಸಿದಾಗ ಅವರೇ ಬ್ರೇಕು ಹಾಕಿ ತಡೆಯು ತ್ತಾರೆ.

# 'ಪಾರವ್ವನ ಪಂಚಾಯಿತಿ'

ಇಟಗಿ ರಾಘವೇಂದ್ರ
ಆಕಾಶವಾಣಿ-ಮಧ್ಯ ಪ್ರದೇಶ

'ಪಾರವ್ವನ ಪಂಚಾಯಿತಿ' ಶ್ರೀ ಜಯತೀರ್ಥ ರಾಜಪುರೋಹಿತ ಅವರ ಪ್ರಥಮ ಕಥಾ ಸಂಕಲನ. ವಿದ್ಯಾರ್ಥಿಯಾಗಿದ್ದಾಗ ಆಗೀಗ ಪದ್ಯಗಳನ್ನೋ, ಪದ್ಯಾತ್ಮಕ ದೃಶ್ಯಗಳನ್ನೋ ರಚಿಸುತ್ತಾ, ಕೊನೆಗೆ ಗದ್ಯ ಸೃಷ್ಟಿಗೆ ತೊಡಗಿದ್ದಾರೆ ಇವರು. ಸಾಂಪ್ರದಾಯಿಕ ಸಂಸ್ಕೃತ ಅಧ್ಯಯನದಿಂದ ಆರಂಭವಾದ ವಿದ್ಯಾರ್ಜನೆ ಆಧುನಿಕ ವಿದ್ಯಾ ಪದ್ಧತಿಯಲ್ಲಿ ಪರ್ಯವಸಾನಗೊಂಡಿದ್ದರಿಂದ ಇವರು ಹಳೆಯದನ್ನೂ ಹೊಸದನ್ನೂ ತೆರೆದ ಬಗೆಯಿಂದ ನೋಡಲು ಸಮರ್ಥರಾಗಿದ್ದಾರೆ. ರಭಸದಿಂದ ಸಾಹಿತ್ಯ ಸೃಷ್ಟಿಯಲ್ಲಿ ತೊಡಗಿದ ಇವರಿಗೆ ಇದೊಂದು ವಿಶೇಷ ಸೌಲಭ್ಯ ಎಂದು ಬೇರೆ ಹೇಳಬೇಕಾಗಿಲ್ಲ. ಇವರ ಕಥೆಗಳನ್ನು ಓದುವಾಗ ಈ ಅಂಶವನ್ನು ಗಮನಿಸುವದು ಯುಕ್ತ. ಏಕೆಂದರೆ ಇವರ ಕಥೆಗಳಲ್ಲಿ ರಸಾತ್ಮಕ ಸಂಸ್ಕೃತ ವಾಕ್ಯಗಳ ಮಿಂಚು ಅಲ್ಲಲ್ಲಿ ಹರಿದಾಡುತ್ತಿರುವದನ್ನೂ ನಾವು ಕಾಣುತ್ತೇವೆ.

'ಪಾರವ್ವನ ಪಂಚಾಯಿತಿ'ಯಲ್ಲಿ ಹತ್ತು ಕಥೆಗಳಿವೆ. ಈ ಹತ್ತು ಕಥೆಗಳ ವಸ್ತು ಹೆಚ್ಚು ಕಡಿಮೆ ಒಂದೇ ಜಾತಿಯವು. ರಾಜಕೀಯ ಏರುಪೇರುಗಳಿಂದಾಗಿ ಬದಲಾಗುತ್ತಿರುವ ನಮ್ಮ ಸಮಾಜದ ಸ್ವರೂಪ ಚಿತ್ರಣ. ಮುಖ ಬೇರೆ ಬೇರೆ ಎನ್ನಿಸಿದರೂ ಮೂಲ ಒಡಲು ಒಂದೇ ಎನ್ನುವಷ್ಟರಮಟ್ಟಿಗೆ ಪರಿಸರ, ಸನ್ನಿವೇಶಗಳಲ್ಲಿ ಸಾಮ್ಯವಿದೆ. ಈ ಎಲ್ಲ ಕಥೆಗಳನ್ನು ಒಂದು ಕ್ರಮದಲ್ಲಿ ಜೋಡಿಸಿದರೆ, ಬಹುಶಃ ಕಳೆದ ಇಪ್ಪತ್ತು ವರುಷಗಳ ನಮ್ಮ ರಾಜಕೀಯ ಚರಿತ್ರೆಯ ಹೊಳಹುಗಳ ಸುಳಿ ಬಿಡಿಸಿದಂತಾಗುತ್ತದೋ ಏನೋ! —ಎಂದ ಮಾತ್ರಕ್ಕೆ ಇವುಗಳಲ್ಲಿ ವೈವಿಧ್ಯವಿಲ್ಲ ಎಂದರ್ಥವಲ್ಲ. ಇದು ಇವರ ಅನುಭವ ತೀವ್ರತೆಗೆ, ಪ್ರಾಮಾಣಿಕತೆಗೆ ಒಂದು ಸಾಕ್ಷಿ. ಇವೇ ಅಲ್ಲವೇ ನಿಜವಾದ ಸಾಹಿತಿಯ ಸೃಷ್ಟಿ ರಚನೆಯ ಮೂಲ ದ್ರವ್ಯಗಳು!

ವಾಸ್ತವಿಕತೆ ರಾಜಪುರೋಹಿತರ ಕಥೆಗಳ ಅಡಿಪಾಯ. ಇದರ ಮೇಲೆ ಚಲ್ಲವರಿದಂತೆ ಇವರ ಕಥಾವಲ್ಲರಿ ಹಬ್ಬಿ, ಬೆಳೆದಿದೆ. ಇಲ್ಲಿಯ ಅನೇಕ ಕಥೆಗಳಲ್ಲಿ ಇವರೇ

ವ್ಯಕ್ತಿಗತ ನಾಯಕನಾಗಿರುವದನ್ನೂ ನನ್ನಂಥ ಅವರ ಹತ್ತಿರದ ಸ್ನೇಹಿತರಿಗೆ ಗ್ರಹಿಸುವದು ಕಷ್ಟವಾಗಲಾರದು.

ನಿಜಾಂಶಾಹಿಯ ನಿರಂಕುಶ ಸತ್ತೆಯ ವಿರುದ್ಧ ನಡೆದ ಚಳುವಳಿ, ಸ್ವಾತಂತ್ರ್ಯೋತ್ತರ ಭಾರತದಲ್ಲಿ ಅತಿ ಗಮನಾರ್ಹವಾದ ಸಂಗತಿ. ಈ ವಿಷಯದ ವಿವರವುಳ್ಳ ಹಿನ್ನೆಲೆಯುಳ್ಳ ಸಾಹಿತ್ಯ ನಮ್ಮಲ್ಲಿ ಅಷ್ಟಾಗಿ ಬಂದಿಲ್ಲ. ಬಂದಿದ್ದರೂ ಗುಣದಿಂದ ಗಮನಾರ್ಹವಲ್ಲ. ಈ ಕೊರತೆಯನ್ನು ರಾಜಪುರೋಹಿತರು ತಮ್ಮ ಕಥೆಗಳಿಂದ ತುಂಬಿಕೊಟ್ಟಿದ್ದಾರೆ.

'ಯಾರು ನಮ್ಮವರು ?'—ಈ ಕಥೆಯ ರಾಜಪುರೋಹಿತರು ಆ ಹೋರಾಟದ ಚಿತ್ರವನ್ನು ಬಹು ಮನನೀಯವಾಗಿ ನೀಡಿದ್ದಾರೆ. ಅಂಥ ನಂಬಿಯಣ್ಣರು ಆಗ ಹಳ್ಳಿ ಹಳ್ಳಿಗೆ ಇದ್ದಿರಬೇಕು ಎಂಬುದರ ಕಲ್ಪನೆಯನ್ನೂ ತಂದುಕೊಟ್ಟಿರುವರು. 'ಸಯೀದಾ ಸುಮತಿಯಾದಳು'—ಓರ್ವ ನಾರಿಯು ದಾರುಣ ಜೀವನದ ಪರಿಯನ್ನು ಒರೆದರೂ ಕೊನೆಯಲ್ಲಿ ರಾಷ್ಟ್ರದ್ರೋಹವೊಂದನ್ನು ತಪ್ಪಿಸುವಲ್ಲಿ, ಅವಳು ತೋರಿದ ಜಾಣ್ಮೆ – ಸಾಹಸಗಳಿಗೆ ನಾವು ತಲೆದೂಗಿ ಈಕೆ ನಿಜವಾಗಿಯೂ ಸು–ಮತಿ ಎಂದೆನ್ನುತ್ತೇವೆ. ಈ ಕಥೆಯ ಓಟ, ಉತ್ಸುಕತೆಯನ್ನು ಹೆಚ್ಚಿಸುವ ಆವೇಗ, ರಾಜಪುರೋಹಿತರ ಕಥನ ಕೈಚಳಕಕ್ಕೆ ಒಳ್ಳೆಯ ನಿದರ್ಶನ. 'ದೇವಿಯೋ, ಹುಚ್ಚಿಯೋ' ಈ ಕಥೆಗೆ ಎರಡು ಮುಖ ಇವೆ. ನಮ್ಮ ಕುರುಡು ನಂಬಿಕೆಗೆ ಕೈಮರದಂತಿರುವ ಒಂದು ಮುಖ, ಮಾನವೀಯತೆಯನ್ನು ಕಳೆದುಕೊಂಡ ಸಮಾಜ ವ್ಯವಸ್ಥೆಗೆ ಬಲಿಯಾಗಿ ದೇವಿಯಾಗಿಯೋ ? ಹುಚ್ಚಿಯಾಗಿಯೋ—ಅಂತೂ ಬೀದಿ ಪಾಲಾದ ಅಬಲೆಯ ದುರವಸ್ಥೆಯ ಇನ್ನೊಂದು ಮುಖ. ಸಹಜವಾಗಿಯೇ ಕೆರಳಿದ ರಾಜಪುರೋಹಿತರು ಅನುಕಂಪಿತ ಹೃದಯದಿಂದ ಅವಳ ಅಂತಸ್ಸತ್ವದ ಪರಿಯನ್ನು ಕೆದಕಿ ನೋಡಿದ್ದಾರೆ. ನೋಡಿ ಕೇಳಿದ್ದಾರೆ—'ಆಕೆ ತೆತ್ತ ಬೆಲೆ ?' ಈ ಪ್ರಶ್ನೆಯೇ ಈ ಕಥೆಯ ಜೀವಾಳ.

'ಡಾಕ್ಟರ್ ಶಾಲಿನೀ'—ಹಿಂದಿ ಚಿತ್ರದಲ್ಲಿ ಕಾಣಬರುವ ಆಶ್ಚರ್ಯ, ಅಕಸ್ಮಾತ್ತುಗಳನ್ನು ನೆನಪಿಗೆ ತರುವ ಕಥೆ. ಇಲ್ಲಿಯ ಪಾತ್ರಗಳ ಹೆಸರು, ಸನ್ನಿವೇಶಗಳ ಮೂಲಕ ಸಾಧ್ಯವಿದ್ದಷ್ಟೂ ಸಹಜತೆ ಸಾಧಿಸಲು ಯತ್ನಿಸಿದ್ದರೂ ಒಂದು ಬಗೆಯ ಕೃತಕತೆಯಿಂದ ಇದು ಕಾಂತಿಹೀನವಾಗಿದೆ. ನಾಟಕೀಯ ಆರಂಭ, ಶ್ರುತಿ ಬಿದ್ದ ಹಾಡುಗಾರಿಕೆಯ ಮುಕ್ತಾಯ ಈ ಕಥೆಯ ಆದ್ಯಂತಗಳು, ಆದರೂ ಓದಲು ರೋಚಕ ವಸ್ತುವನ್ನು ಒದಗಿಸುವ ಕಥೆ ಇದು.

'ಮುಂದೇನು ?' ಕಥೆ ಮಾತ್ರ ಮೇಲಿನ ಕಥೆಯ ಕೃತಕತೆಯನ್ನು ಮೆಟ್ಟಿ ನಿಂತ ಉತ್ಕೃಷ್ಟ ಕಥೆ. ವಸ್ತು, ಶೈಲಿ, ಆರಂಭ, ಮುಕ್ತಾಯ ಯಾವ ದೃಷ್ಟಿಯಿಂದಲೂ ಮನಂಬುಗುವ ಶ್ರೇಷ್ಠ ದರ್ಜೆಯ ಕಥೆ. ಭಾರತ ವಿಭಜನೆ, ನಿರಾಶ್ರಿತರ ಆಗಮನ, ಆಹಾರ ಸಮಸ್ಯೆ ಇವುಗಳ ಹಿನ್ನೆಲೆ ಈ ಕಥಾ ವಸ್ತುವಿನಲ್ಲಿ ಬಹು ಮಾರ್ಮಿಕವಾಗಿ

ಬಂದಿದೆ. ಅಲ್ಲದೆ ಇಲ್ಲಿಯು ಪಾತ್ರಗಳಿಗೆ ತಕ್ಕ ಭಾಷೆ, ಶೈಲಿ ರೂಪುಗೊಂಡಿರುವದು ಕಥೆಯ ಸಫಲತೆಗೆ ಇನ್ನೊಂದು ಕಾರಣ. ಇಲ್ಲಿ ಕಥೆಗಾರನ ಪ್ರಜ್ಞೆ ಪೂರ್ಣ ಜಾಗೃತ ಗೊಂಡಿರುವದನ್ನು ನಾವು ಕಾಣುತ್ತೇವೆ. ಆದರೆ ಇದರ ತಲೆಬರಹ ಮಾತ್ರ ಯಾಕೋ ಸಪ್ಪಗೆ, ಅರ್ಥಪೂರ್ಣವಾಗಿಲ್ಲ ಎನ್ನಿಸುತ್ತದೆ. ಕಥೆಯು ಮುಕ್ತಾಯಕ್ಕೆ ಬಂದಾಗ ಮುಂದೇನು ಎನ್ನುವ ಪ್ರಶ್ನೆ ಉಳಿದಿದೆಯೇ ?

'ಗೌರವ್ವನ ಹಾಲು' — ರಾಜಪುರೋಹಿತರು ಆರಿಸಿಕೊಂಡಿರುವ ಬಹು ಒಳ್ಳೆಯ ವಸ್ತು. ಆದರೆ ಆ ಸಫಲತೆ, ಯಾವುದೋ ಆತುರಾತುರತೆಯಿಂದ ಮುಕ್ತಾಯಕ್ಕೆ ಬಂದಂತಿದೆ. ಇಲ್ಲಿ ಕಥೆ ಮೊದಲಾದಾಗ ಇದ್ದ ತೀವ್ರತೆ, ಕಾವು, ಹುಮ್ಮಸ್ಸು ಮುಂದೆ ಉಳಿಯದಿರುವದು ಇದಕ್ಕೊಂದು ಕುಂದು. ಇದು ಸರ್ವಾಂಗ ಪರಿಪೂರ್ಣವಾಗಿದ್ದಲ್ಲಿ ಈ ಸಂಗ್ರಹದ ಅತ್ಯುತ್ತಮ ಕಥೆಯಾಗುವ ಯೋಗ್ಯತೆ ಇದಕ್ಕಿದೆ.

ಪ್ರಾರಂಭದಲ್ಲಿಯ ಸಂಭಾಷಣಾ ಚತುರತೆ, ಹಳ್ಳಿಯ ದಂಪತಿಗಳ ರಸಿಕತೆ ಯನ್ನು ಬಹು ಸಹಜವಾಗಿ ಒದಗಿಸಿದೆ. ಅಷ್ಟು ಸುಂದರವಾಗಿ ಬಂದಿದೆ ಅದು. ಮುಂದಿನ ನಾಲ್ಕು ಕಥೆಗಳಲ್ಲಿ—'ದೆವ್ವದ ಬಂಗಾರ' ಒಂದು ಒಳ್ಳೆಯ ಕಥೆ. ಅದಕ್ಕೆ ವಸ್ತುವಿದೆ, ತನ್ನ ಶೈಲಿಯಿದೆ, ಆ ಶೈಲಿಗೆ ತಕ್ಕ ಓಜಸ್ಸಿದೆ, ಅಲ್ಲಲ್ಲಿ ತಿಳಿಹಾಸ್ಯವಿದೆ. ಅಚ್ಚುಕಟ್ಟಾದ ಉಡಿಗೆ ತೊಡಿಗೆ ತೊಟ್ಟ ಮಗುವೊಂದು ನಡೆದಾಡುವಂತೆ ಸುರಮ್ಯ ಕಥೆ ಇದು. ಕಥೆಗಾರ್ತಿ ಹಾಸ್ಯವನ್ನು ಒದಗಿಸುವ ಲಘು ವಿಡಂಬನೆಯ ಚಿತ್ರ. 'ರಕ್ತ ಋಣ' ಮಾತ್ರ ಅಷ್ಟೇನೂ ಹೇಳಿಕೊಳ್ಳುವಂಥ ಕಥೆಯಲ್ಲ. ಕೊನೆಯ ಕಥೆ 'ಪಾರವ್ವನ ಪಂಚಾಯಿತಿ' ಈ ಹತ್ತು ಕಥೆಗಳ ಸಂಗ್ರಹದ ಹೆಸರು ಹೊತ್ತ ಕಥೆ ಇದು. ಬಹುಶಃ ಈ ಹತ್ತು ಕಥೆಗಳಲ್ಲಿ ಬರೆದುದು ಇದೇ ಮೊದಲಿನದಿರಬೇಕು. ಆದರೂ ಎಲ್ಲ ಕಥೆಗಳಿಗಿಂತ ಉತ್ತಮ ಕಥೆ ಇದು. ಮಿಂಚು ಹರಿದಾಡಿದಂತೆ ಪಾರವ್ವನ ವ್ಯಕ್ತಿತ್ವ ಕಥೆಯ ತುಂಬ ಹರಿದಾಡಿದೆ. ಒಳ ಎಂಬುದೇ ಇಲ್ಲ ಎಂಬ ಷ್ಟರ ಮಟ್ಟಿಗೆ ಖಂಡಿತವಾದಿ ಈಕೆ. ಯಾರೋ ತಮ್ಮ ಸೇಡಿನ ಸಾಧನೆಗೆ ಈಕೆ ಯನ್ನು ಎಲೆಕ್ಷನ್ನಿಗೆ ನಿಲ್ಲಿಸಲು ಪ್ರೇರೇಪಿಸಿದರು. ಆದರೆ, ಅದೇನು ಅವರ ಪುಣ್ಯವೋ, ಅವಳಲ್ಲಿ ಹುದುಗಿದ್ದ ಒಳ್ಳೆಯ ಭಾವ ಜಾಗೃತವಾಗಿ, ಕ್ರತುಶಕ್ತಿಯಾಗಿ ಊರನ್ನೂ ಉದ್ಧರಿಸಿತು. ಪಂಚಾಯಿತಿಯಲ್ಲಿ ಎಲ್ಲರೂ ಪಾರವ್ವನಂತಾದರೆ...... ಎಂಬ ಆಶಾಭಾವದೊಂದಿಗೆ ಕಥೆ ಮುಗಿಯುತ್ತದೆ. ಇದೊಂದು ಸುಂದರ ಕಥೆ. ಹೊತ್ತಿಗೆಯ ತಲೆಬರಹಕ್ಕೆ ತಕ್ಕ ಕಥೆ. ಊರ ರಾಜಕಾರಣ ಸುರಸವಾಗಿ ಚಿತ್ರಿತ ವಾಗಿದೆ ಇಲ್ಲಿ, ಇಂದಿನ ನಮ್ಮ ಗ್ರಾಮಗಳ ತುಂಬ ಇರುವದು ಇದೇ ರಾಜಕೀಯ ಅಲ್ಲವೇ ?......

ಒಟ್ಟಿನಲ್ಲಿ ಶ್ರೀ ರಾಜಪುರೋಹಿತರ ಈ ಕಥಾ ಸಂಕಲನ, ಅವರ ಬಗ್ಗೆ ಒಳ್ಳೆಯ ಭರವಸೆ ಹುಟ್ಟಿಸಿದೆ. ಅವರಿಗೆ ಒಳ್ಳೆಯ ಶೈಲಿ ಇದೆ. ತಮ್ಮ ಅನುಭವಗಳಿಗೆ ರಸಾತ್ಮಕ ಅಭಿವ್ಯಕ್ತಿ ನೀಡುವ ಸಾಮರ್ಥ್ಯವಿದೆ, ಪ್ರಾಮಾಣಿಕತೆ ಇದೆ.

## 'ತುಂಗೆಯಂಗಳದಲ್ಲಿ' ಅಂತಸ್ಸತ್ವವುಳ್ಳ ರೂಪಕಗಳು

ಪ್ರೊ. ಎಂ. ವಿ. ಸೀತಾರಾಮಯ್ಯ

ಶ್ರೀಮಾನ್ ಜಯತೀರ್ಥ ರಾಜಪುರೋಹಿತರ 'ತುಂಗೆಯಂಗಳದಲ್ಲಿ' ಮತ್ತು 'ಕುಮಾರ ವ್ಯಾಸ' ಈ ಎರಡೂ ದೃಶ್ಯಕಾವ್ಯಗಳನ್ನು ಓದಿದಾಗ ಇಂದಿನ ಕನ್ನಡ ಕಾವ್ಯ ಪ್ರಪಂಚದ ಎರಡು ದಶಕಗಳ ಹಿಂದಿನ ಕವಿಯ ಕೃತಿಗಳಾದ 'ನಾಗರಿಕ', 'ಧರ್ಮದುರಂತ' ರೂಪಕಗಳು ನೆನಪಿಗೆ ತರುತ್ತವೆ. ಇವುಗಳ ಕರ್ತೃಗಳಾದ ಎಂ. ಆರ್. ಶ್ರೀಯವರು ತಮ್ಮ ಮೇಲಿನ ಕೃತಿಗಳಲ್ಲಿ ಪ್ರಾಮಾಣಿಕ ಅಭಿವ್ಯಕ್ತಿಯ ಸತ್ವಪೂರ್ಣತೆಯನ್ನು ಸರಳವಾದ ಶೈಲಿಯಲ್ಲಿ ನೀಡಿದ್ದಾರೆ. ಈ ಪರಂಪರೆಯಲ್ಲಿಯೇ 'ತುಂಗೆಯಂಗಳದಲ್ಲಿ' ಬಂದುದನ್ನು ಕಾಣುತ್ತೇವೆ. ಅಂದಿನ ನಾಗರಿಕನಂತೆ ಇಂದು ಯುಗಪುರುಷ ತುಂಗೆಯಂಗಳದಲ್ಲಿ ಕಾಣುತ್ತಾನೆ. ಕ್ರಾಂತಿಕಾರಕವಾದ ಉದ್ಯಮದ ಪೌರೋಹಿತ್ಯವನ್ನು ಇಲ್ಲಿ, ಯುಗಪುರುಷ ವಹಿಸಿದ್ದಾನೆ. ತನ್ನ ಗುರಿಯ ಸಾಧನೆಗಾಗಿ ಪ್ರಕೃತಿಯೊಡನೆ ಹೋರಾಡುತ್ತಾನೆ. ಹೊಸಪೇಟೆಯ ಬಳಿ ತುಂಗಭದ್ರೆಗೆ ಕಟ್ಟಿದ ಅಣೆಕಟ್ಟನ್ನು ಕಂಡ ಕವಿ ತನ್ನ ಅಭಿವ್ಯಕ್ತಿಯನ್ನು ಸರಳವಾದ ಶೈಲಿಯಲ್ಲಿ ಸುಂದರವಾಗಿ ಹೆಣೆದಿದ್ದಾರೆ. ಇನ್ನು ಇಲ್ಲಿನ ಕಥೆಯ ಕಲ್ಪನೆ ಕವಿಯ ಸ್ವಂತದ್ದು. ಕವಿಯ ಕಲ್ಪನಾ ಸಾಮರ್ಥ್ಯ ಎಂಥ ವಿಷಯವನ್ನಾದರೂ ಕಾವ್ಯವನ್ನಾಗಿ ಮಾಡ ಬಲ್ಲದು ಎಂಬುದನ್ನು 'ತುಂಗೆಯಂಗಳದಲ್ಲಿ' ಕಾಣದಿರಲಾರೆವು.

ಇದರಲ್ಲಿಯ ಇನ್ನೊಂದು ರೂಪಕವಾದ 'ಕುಮಾರ ವ್ಯಾಸ' ಕನ್ನಡ ಮಹಾಭಾರತದ ಕರ್ತೃವಾದ ನಾರಣಪ್ಪನಿಗೆ ಸಂಬಂಧಿಸಿದ ದಂತ ಕಥೆ. ಇಲ್ಲಿಯ ಪಾತ್ರಗಳಾದರೂ ಕವಿಯ ಕಲ್ಪನೆಯಿಂದಲೇ ಬಂದವುಗಳು. ಲೇಖಕರೇ ಹೇಳುವಂತೆ ಬಹಳ ದಿನಗಳ ಹಿಂದೆ ಬರೆದ ಈ ರೂಪಕದಲ್ಲಿ ಕಾವ್ಯದ ಸರಳತೆ ಇದ್ದರೂ, ನಿರೂಪಣೆಯಲ್ಲಿ ಇನ್ನೂ ಸ್ವಲ್ಪ ಹೊಸತನವನ್ನು ತೋರಿಸಬಹುದಾಗಿತ್ತು. ಒಟ್ಟಿನಲ್ಲಿ ನಿರೂಪಣೆಯ ದೃಷ್ಟಿಯಿಂದ ಎರಡು ದಶಕಗಳ ಹಿಂದಿನ ಕಾವ್ಯವೆನಿಸಿದರೂ ಲೇಖಕರ ಆಳವಾದ ಅನುಭವದಿಂದ ಕಾವ್ಯದ ಅಂತಸ್ಸತ್ವ ಹೆಚ್ಚಿ ರೂಪಕಕ್ಕೆ ಹೊಸ ಮೆರುಗನ್ನೇ ಕೊಟ್ಟಿದೆ.

## 'ತುಂಗೆಯಂಗಳದಲ್ಲಿ' ಏಕಾಂಕ ರೂಪಕ

**ಎ. ಕೃ. ಗೋಕಾಕ್**

'ತುಂಗೆಯಂಗಳದಲ್ಲಿ' ಮತ್ತು 'ಕುಮಾರವ್ಯಾಸ' ಎಂಬ ಎರಡು ಪ್ರಯೋಗ ಗಳಲ್ಲಿ ರಾಜಪುರೋಹಿತರು ದೃಶ್ಯ ಕಾವ್ಯದ ದಾರಿಯನ್ನು ಹಿಡಿದು ಸರಳ ರಗಳೆಯಲ್ಲಿ ಅಭಿವ್ಯಕ್ತಿಯನ್ನು ಕಂಡುಕೊಂಡಿದ್ದಾರೆ. ಇವುಗಳಲ್ಲಿ 'ತುಂಗೆಯಂಗಳದಲ್ಲಿ' ಎಂಬ ದೃಶ್ಯ ಹೆಚ್ಚಿನ ಸಿದ್ಧಿಗಾಗಿ ಮುನ್ನಡೆದಿದೆ. 'ನಾಗರಿಕ'ದ ಕರ್ತೃಗಳಾದ ದಿವಂಗತ ಶ್ರೀನಿವಾಸ ಮೂರ್ತಿಯವರು ಈ ದೃಶ್ಯವನ್ನು ಓದಿದ್ದರೆ ತಮ್ಮ ಪರಂಪರೆಯಲ್ಲಿ ಒಂದು ಅರ್ಥಪೂರ್ಣ ಕೃತಿಯನ್ನು ಅವರು ತುಂಬಿದ ಅಂತಃಕರಣದಿಂದ ಸ್ವಾಗತಿಸು ತ್ತಿದ್ದರು. 'ನಾಗರಿಕ'ದ ಪರಂಪರೆಯಲ್ಲಿ ಬಂದ ದೃಶ್ಯವಾದರೂ 'ತುಂಗೆಯಂಗಳ ದಲ್ಲಿ' ಎಂಬ ದೃಶ್ಯಕ್ಕೆ ಅದರ ಸ್ವಂತಿಕೆ ಇದೆ. ನಾಗರಿಕನ ಬದಲು ಇಲ್ಲಿ ನಾವು ಯುಗಪುರುಷನನ್ನು ಕಾಣುತ್ತೇವೆ. ವಿದ್ಯಾರಣ್ಯರು ನುಡಿಯುವ ಮಂಗಲ ವಾಕ್ಯದ ಬದಲು ತುಂಗಭದ್ರೆಯ ವಿಮರ್ಶೆ ಹಾಗೂ ವಿದ್ಯಾರಣ್ಯ-ವ್ಯಾಸರಾಯರ ಆಶೀರ್ವಾದ ಗಳು ಇಲ್ಲಿವೆ. ಆದರೆ ಯಾವ ಸಂವಿಧಾನದ ಸಲುವಾಗಿ ಈ ಕ್ರಮ ಯೋಜಿತವಾಗಿ ದೆಯೋ ಅದು ಮಾತ್ರ ಸ್ವಂತದ್ದು ಹಾಗೂ ಹೊಸ ತಲೆಮಾರಿನದು. ನಾಗರಿಕ ತನ್ನ ಅಸ್ತಿತ್ವವನ್ನು ಸಂಪಾದಿಸಿದ. ಯುಗಪುರುಷ ಮಾರ್ಪಡುತ್ತಿರುವ ಇಂದಿನ ಸಮಾಜದ ಕ್ರಾಂತಿಪುರುಷನಾಗಿದ್ದಾನೆ. ಔದ್ಯೋಗೀಕರಣದ ಗುಣಾವಗುಣಗಳನ್ನು ಯುಗಪುರುಷ ಹಾಗೂ ತುಂಗಭದ್ರೆ ಇಲ್ಲಿ ನಿರೂಪಿಸುತ್ತಾರೆ. ವಿಜಯನಗರದ ಕೃಷ್ಣದೇವರಾಯನ ಪರಂಪರೆ ಈ ಕ್ರಾಂತಿಗೂ ಒಂದು ಹಿನ್ನೆಲೆಯನ್ನು ಕಲ್ಪಿಸಿ ಕೊಟ್ಟಿದೆಯೆಂಬುದನ್ನು ಮೆಚ್ಚತಕ್ಕಂಥ ಉಪಮೆಗಳ ಮೂಲಕ ಜಯತೀರ್ಥರು ಇಲ್ಲಿ ಚಿತ್ರಿಸಿದ್ದಾರೆ. ವಿವರಗಳಲ್ಲಿ ಚಿತ್ರಶಕ್ತಿಯ ಆಟವಿದ್ದರೂ ಅವುಗಳ ಹಿಂದೆ ನಿಚ್ಚಳವಾದ ಕಲ್ಪಕತೆಯಿದೆ. ಅಂತೆಯೇ ಈ ಕೃತಿ ಕಾಂತಿಯುತವಾಗಿದೆ.

ಇಲ್ಲಿ ಸರಳ ರಗಳೆಯಲ್ಲಿ ತಾಳ ಲಯದ ವೈವಿಧ್ಯ ಇನ್ನಿಷ್ಟು ಬೇಕೆನ್ನಿಸಿದರೂ ಅದು ಒಂದು ನೇರವಾದ ಓಟವನ್ನು ಪಡೆದಿದೆ. ಶೈಲಿಯಲ್ಲಿ ಇನ್ನಿಷ್ಟು ಸೂಕ್ಷ್ಮತೆ ಬರಬಹುದಾಗಿತ್ತು. ಅದು ಮುಂದೆ ಸಾಧಿಸಬಹುದು. ಏನಿದ್ದರೂ ತಿರುಳುಳ್ಳ ಕೃತಿ ಯಾವಾಗಲೂ ತಲೆಯೆತ್ತಿ ನಿಲ್ಲಬಲ್ಲದು. ಅಂಥದೊಂದು ಸ್ವಂತಿಕೆ ಈ ಕೃತಿಯಲ್ಲಿದೆ.

# ಶ್ರೀ ಜಯತೀರ್ಥ ರಾಜಪುರೋಹಿತರ ಕಿರು ಪುಸ್ತಕಗಳು

ವೆಂ. ಮು. ಜೋಶಿ

ಶ್ರೀ ಜಯತೀರ್ಥ ರಾಜಪುರೋಹಿತರ ಹೆಸರು ನಮ್ಮೆದುರು ನಿಂತಾಗ ನಮ್ಮ ಗಮನಕ್ಕೆ ತಕ್ಷಣಕ್ಕೆ ಬರುವದು ಅವರ 'ಸುಳಿಗಾಳಿ' ಕಾದಂಬರಿ ಹಾಗೂ 'ಪಾರವ್ವನ ಪಂಚಾಯಿತಿ' ಮತ್ತಿತರ ಸಣ್ಣ ಕಥೆಗಳು. ವಿಮೋಚನಾ ಪೂರ್ವದ ಹಾಗೂ ತದನಂತರದ ಹೈದ್ರಾಬಾದಿನ ಇಸ್ಲಾಮೀ ಸಂಸ್ಕೃತಿಯ ಸಹಜಪೂರ್ಣ ಸ್ವಾಭಾವಿಕ ಚಿತ್ರಣವನ್ನು ಕನ್ನಡ ಓದುಗರಿಗೆ ಕೊಡಮಾಡಿದವರಲ್ಲಿ ಜಯತೀರ್ಥ ರಾಜಪುರೋಹಿತರೇ ಮೊದಲಿಗರು. ತದನಂತರ ಹಿಂದೀ ಚಲನಚಿತ್ರ ಪ್ರಪಂಚಕ್ಕೆ ಅಂಥ ಚಿತ್ರಣವನ್ನು ಜನೂನ್ ಮೂಲಕ ನೀಡಿದವರು ಶ್ಯಾಮ ಬೆನೆಗಲ್. ಹೀಗೆ ಕನ್ನಡ ಕಾದಂಬರಿ ಕ್ಷೇತ್ರಕ್ಕೆ ತಮ್ಮದೇ ಆದ ಅಪೂರ್ವ ಕೊಡುಗೆಯನ್ನು ನೀಡಿದ ರಾಜಪುರೋಹಿತರು ಕನ್ನಡ ಕಾದಂಬರಿ ಕ್ಷೇತ್ರವನ್ನು ಅಗ್ಗಲಿಸಿದ್ದಾರೆ. ಅದರ ಆಳವನ್ನು ಇಮ್ಮಡಿಸಿದ್ದಾರೆ.

ಅವರ ಈ ಅಪೂರ್ವ ಪ್ರೌಢ ಸಾಹಿತ್ಯದ ಬೆಳ್ಳಂಬೆಳಕಿನಲ್ಲಿ ಅವರ ಇನ್ನಿತರ ಕೃತಿಗಳು ಅದರಲ್ಲೂ ಮಕ್ಕಳಿಗಾಗಿ ಬರೆದ ಕಿರು ಪುಸ್ತಕಗಳು ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕಾಗಿ ಬರೆದ 'ವ್ಯಾಸರಾಯರ' ಉಪನ್ಯಾಸ ಹಾಗೂ ಜಯಬಂಗ್ಲಾ ಕಿರು ನಾಟಕಗಳನ್ನು ವಿಮರ್ಶಕರಾಗಲಿ ಓದುಗರಾಗಲೀ ಗಮನಿಸಿದಂತಿಲ್ಲ.

ರಾಜಪುರೋಹಿತರ ಖುದ್ದು ಊರಾದ ಕನಕಗಿರಿ ರಾಯಚೂರು ಜಿಲ್ಲೆಗೆ ಸೇರಿದ್ದು; ಆ ಊರಿಗೂ ಒಂದು ಐತಿಹಾಸಿಕ ಮಹತ್ತ್ವವಿದೆ. ಹಾಗೆಯೇ ಶ್ರೀ ಜಯತೀರ್ಥ ರಾಜಪುರೋಹಿತರ ಮನೆತನಕ್ಕೂ ಒಂದು ಇತಿಹಾಸವಿದೆ ಎಂಬ ಮಾತೂ ಅದರ ಒಂದು ಭಾಗವಾಗಿ ಬಿಡುತ್ತದೆ.'ರಾಜಪುರೋಹಿತರ' ಮನೆತನ ಬೆಳೆದು ಬಂದ ಪರಿಸರ – ವಾತಾವರಣಗಳ ಪರಿಚಯಕ್ಕಾಗಿ ಹಾಗೂ ವಿಜಯನಗರ – ಆದಿಲ್ ಶಾಹಿಗಳ ಕೊನೆಗಾಲದ ವೈರತ್ವದ ಇತಿಹಾಸವನ್ನು ತಿಳಿದುಕೊಳ್ಳಬೇಕಿದ್ದಲ್ಲಿ ರಾಜಪುರೋಹಿತರು ಬರೆದ 'ಕನಕಗಿರಿ' ಈ ಕಿರು ಪುಸ್ತಕ ಒಂದು ಸಲ ಓದಲೇಬೇಕಾದ ಕಿರು ಗ್ರಂಥವಾಗಿದೆ. ಅದರ ಪ್ರಾರಂಭದಲ್ಲಿಯೇ ಕನಕಗಿರಿಯ ಮಹತ್ತ್ವವನ್ನು

ಲೇಖಕರು ಹೀಗೆ ಹೇಳುತ್ತಾರೆ: 'ಕಣ್ಣಿದ್ದವರು ಕನಕಗಿರಿ, ಕಾಲಿದ್ದವರು ಹಂಪಿ ನೋಡಲೇಬೇಕೆಂಬ ನಾಣ್ಣುಡಿ ಇದೆ.' ನಮ್ಮ ನಾಣ್ಣುಡಿಗಳು ಅನೇಕ ಜನರ ಅನುಭವ, ಒಬ್ಬ ರಸಿಕನ ಮಾತಾಗಿ ಹೊರಬರುವದು ಎಂದು ನಾಣ್ಣುಡಿ ಸಂಶೋಧಕರು ಹೇಳುತ್ತಾರೆ. 'ವಿಸ್ಡಮ್ ಆಫ್ ಮೆನಿ ವಿಟ್ ಆಫ್ ಒನ್' ಎಂಬ ಆಂಗ್ಲ ನುಡಿಯೂ ಈ ಮಾತನ್ನೇ ಪುಷ್ಟೀಕರಿಸುತ್ತದೆ. ಕನಕಗಿರಿಯ ಅರಸು – ವಿಜಯನಗರದ ಮಾಂಡಲೀಕ, ತನ್ನ ಆಸ್ಥಾನದಲ್ಲಿ ಕವಿಗಳು ಪಂಡಿತರಿಗೆ ಆಶ್ರಯ ನೀಡಿದ ಮಹಾ ಕಲಾರಸಿಕ. ರಕ್ಕಸತಂಗಡಿ ಯುದ್ಧದ ನಂತರ, ವಿಜಯನಗರ ಸಾಮ್ರಾಜ್ಯ ಧೂಳಿಪಟವಾದ ನಂತರ ಅದರ ಶಾಖ ಈ ಮಾಂಡಲೀಕರಿಗೂ ತಗಲುವದು ನಿಶ್ಚಿತ. ಆ ಗೊಂದಲದಲ್ಲಿಯೂ ಸಹ ಕನಕಗಿರಿ ನಾಯಕರು ತಮ್ಮ ಅಸ್ತಿತ್ವದ ಉಳಿವಿಗಾಗಿ ಹೋರಾಡುತ್ತಲೇ ಇದ್ದರು. ಕಲೆ, ಸಾಹಿತ್ಯ, ಪಾಂಡಿತ್ಯಕ್ಕೆ ಅವರ ಆಶ್ರಯ ತಪ್ಪಲಿಲ್ಲ. ಆ ಕಾಲದ ದೊರೆಯಾದ ಹಿರೇ ರಂಗಪ್ಪನಾಯಕ ಸ್ಮರಣೀಯ ವ್ಯಕ್ತಿ. 'ಕೃಷ್ಣಪಾರಿಜಾತ' ಕನ್ನಡ ಸಾಂಗತ್ಯದಲ್ಲಿ ರಚಿಸಿದ ಅಪರಾಳ ತಮ್ಮಣ್ಣ ಕವಿ ಈ ರಾಜನ ಆಶ್ರಯದಲ್ಲಿದ್ದ ಕನ್ನಡದ ಪ್ರಖ್ಯಾತ ಪಂಡಿತರಾಗಿದ್ದ ಜಯ ವೆಂಕಟಾಚಾರ್ಯರೂ ಆಸ್ಥಾನ ವಿದ್ವಾಂಸರಾಗಿದ್ದರು. ಇವರು ಒಂದು ಗಳಿಗೆಯಲ್ಲಿ ನೂರು ಶ್ಲೋಕಗಳನ್ನು ರಚಿಸುವ ಸಾಮರ್ಥ್ಯ ಪಡೆದಿದ್ದರು. ಅಂಥ ಪೂರ್ವಿಕರನ್ನು ಪಡೆದ ಜಯತೀರ್ಥ ರಾಜಪುರೋಹಿತರ ರಕ್ತದಲ್ಲಿ ಸಾಹಿತ್ಯಿಕ ಗುಣ ಚಿಮ್ಮುತ್ತಿದ್ದುದರಲ್ಲಿ ಆಶ್ಚರ್ಯವೇನಿಲ್ಲ.

ಇವರ ಇನ್ನೊಂದು ಕಿರು ಗ್ರಂಥ 'ಶ್ರೀ ಕೃಷ್ಣ ದೇವರಾಯ' ಮಕ್ಕಳಿಗಾಗಿ ಬರೆದ ಪುಸ್ತಕ. ಮಕ್ಕಳಿಗಾಗಿ ಬರೆಯುವದು ಅತ್ಯಂತ ಸುಲಭದ ಮಾತು ಎಂದು ಕೆಲವರು ಬಗೆದಿದ್ದಾರೆ. ಆದರೆ ಪ್ರೌಢರಿಗಾಗಿ ಬರೆಯುವಷ್ಟು ಸುಲಭ ಈ ಕೆಲಸವಲ್ಲ. ಅದಕ್ಕೆ ಮುಖ್ಯವಾಗಿ ಮಕ್ಕಳ ಮಾನಸ ಶಾಸ್ತ್ರದ ಪರಿಚಯವನ್ನು ಮಾಡಿಕೊಂಡಿರಬೇಕು. ಶಬ್ದಗಳ ಜೋಡಣೆ–ವಾಕ್ಯ ಸಂಯೋಜನೆಗಳಲ್ಲಿ ಎಚ್ಚರ–ತೂಕಬದ್ಧತೆ ಅನಿವಾರ್ಯ. ಈ ಕಿರು ಪುಸ್ತಕವನ್ನು ಬರೆಯುವಲ್ಲಿ ರಾಜಪುರೋಹಿತರು ಯಶಸ್ವಿಯಾಗಿದ್ದಾರೆ–ಎಂದು ಧಾರಾಳವಾಗಿ ಹೇಳಬಹುದು. ಮಕ್ಕಳಿಗಾಗಿ ಈ ಪುಸ್ತಿಕೆಯನ್ನು ಬರೆದಿದ್ದರೂ, ಪ್ರೌಢರೂ ಇದನ್ನು ಓದಿ ಆನಂದಿಸಬಹುದು. ಕೃಷ್ಣದೇವರಾಯ ಈ ವ್ಯಕ್ತಿ ಪರಿಚಯವನ್ನು ಓದುವಾಗ ನಮ್ಮ ಕಣ್ಣೆದುರಿನಲ್ಲಿ ವಿಜಯನಗರ ಸಾಮ್ರಾಜ್ಯದ ನೆನಪು ಪಳಕ್ಕನೆ ಮಿಂಚಿದಂತಾಗುತ್ತದೆ.

ಸೋಮನಾಥ ಕವಿ ಶ್ರೀ ವ್ಯಾಸರಾಯರನ್ನು ಕುರಿತು ಕಾವ್ಯ ಕಟ್ಟಿದುದನ್ನು ಶ್ರೀ ರಾಜಪುರೋಹಿತರು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗಕ್ಕಾಗಿ ಒಂದು ಕಿರು ಗ್ರಂಥ 'ವ್ಯಾಸರಾಯರು'—(ಸೋಮನಾಥ ಕವಿ ಕಂಡಂತೆ) ಬರೆದು

ಕೊಟ್ಟಿದ್ದಾರೆ. ಅದೊಂದು ಸಂಶೋಧನಾ ಲೇಖನವೆನಿಸುತ್ತದೆ. ಸಾಹಿತ್ಯ ಸಂಶೋಧಕರು ಅದರತ್ತ ಗಮನ ಹರಿಸುವದು ಅತ್ಯಂತ ಅವಶ್ಯಕವಾಗಿದೆ.

1971ರಲ್ಲಿ ಅದೇ ಆಗ ಬಾಂಗ್ಲಾದೇಶ ಪಾಕಿಸ್ತಾನದ ದಬ್ಬಾಳಿಕೆಯಿಂದ ಮುಕ್ತಗೊಂಡು ಸ್ವತಂತ್ರವಾಗಿತ್ತು. ಆಗಿನ ಪ್ರಚಲಿತ ವಿಷಯದ ಮೇಲೆಯೇ ರಾಜಪುರೋಹಿತರು 'ಜಯಬಾಂಗ್ಲಾ' ಎಂಬ ಕಿರು ನಾಟಕವನ್ನು ಅಥವಾ ಏಕಾಂಕವನ್ನು ಬರೆದರು. ಆದರೆ ನಾಟಕ ಪ್ರಪಂಚದಲ್ಲಿ ಅದಕ್ಕೆ ಸಿಗಬೇಕಾದ ಪ್ರಚಾರ–ಪ್ರಸಾರ ಸಿಗಲಿಲ್ಲ. ಅದಕ್ಕೆ ಹಲವು ಕಾರಣಗಳೂ ಇರಬಹುದು. ಆದರೆ ಪ್ರಾಸಂಗಿಕ ವಿಷಯದ ಮೇಲೆ ಬರೆದ ಏಕಾಂಕ ಆ ಪ್ರಸಂಗ ಮರೆಯಾದ ತಕ್ಷಣ ಕಾಲದ ಆವರಣ ದಪ್ಪನಾಗುತ್ತಿದ್ದಂತೆ ಜನಮಾನಸದಿಂದ ಅದು ದೂರ ಸರಿದು ಹೋಗುವದೂ ಸ್ವಾಭಾವಿಕ ಪ್ರಕ್ರಿಯೆಯೇ ಆಗಿದೆ. ಆದರೆ ಸಾಹಿತ್ಯದ ಇತಿಹಾಸಕಾರರು ಇಂಥ ಕೃತಿಗಳ ನೋಂದು ಮಾಡಿಕೊಳ್ಳಬೇಕಾದುದು ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಅನಿವಾರ್ಯವಾಗಿದೆ.

ರಾಷ್ಟ್ರ ಪ್ರೇಮಕ್ಕಾಗಿ ಬದ್ಧಕಂಕಣರಾದ ಸ್ವಾಮಿ ರಾಮತೀರ್ಥರ ವ್ಯಕ್ತಿ ಪರಿಚಯವನ್ನು ರಾಜಪುರೋಹಿತರು ಭಾರತ–ಭಾರತಿಯ ಮುಖಾಂತರ ಮಾಡಿಕೊಟ್ಟಿದ್ದಾರೆ.

'ಸುರಪುರದ ಶೂರನಾಯಕ' ಇನ್ನೊಂದು ಅವರ ಕಿರು ಐತಿಹಾಸಿಕ ಪುಸ್ತಕ. ಸುರಪುರದ ಬೇಡ ನಾಯಕ ನಮ್ಮ ಕನ್ನಡದ ಗಂಡು ಕುಲಕ್ಕೆ ಖ್ಯಾತಿಯನ್ನು ತಂದು ಕೊಟ್ಟ ಅವರ ವೀರಗಾಥೆಯನ್ನು ರಾಜಪುರೋಹಿತರು ಸಮರ್ಥವಾಗಿ ಚಿತ್ರಿಸಿದ್ದಾರೆ.

ಹೀಗೆ ಜಯತೀರ್ಥ ರಾಜಪುರೋಹಿತರ ಬರವಣಿಗೆ ಕೇವಲ ಕಥೆ ಕಾದಂಬರಿಗಳಿಗೆ ಸೀಮಿತವಾಗಿರದೆ, ಅದು ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಹಮ್ಮಿಕೊಂಡು ನಿಂತಿದೆ. ಅದಕ್ಕೆ ಅವರ ಲೇಖನಿಗೆ, ಅಷ್ಟತೈಲು ಮೊನಚು ಇದ್ದುದು ಓದುಗರಿಗೆ ಗೋಚರಿಸದೇ ಇರಲಾರದು.

# ಸಾಹಿತ್ಯಿಕ ಅಭಿಪ್ರಾಯಗಳು

## ಹಾಲು – ಜೇನು

ಶ್ರೀ ಜಯತೀರ್ಥ ರಾಜಪುರೋಹಿತರು ಮೊದಲಿನ ಹೈದ್ರಾಬಾದ ಸಂಸ್ಥಾನ ದಲ್ಲಿ ಅದರಲ್ಲೂ ಹೈದ್ರಾಬಾದು ಕರ್ನಾಟಕದಲ್ಲಿ ಕಳೆದ ಕಾಲು ಶತಮಾನದಲ್ಲಿ ನಡೆದ ಘಟನೆಗಳನ್ನು ವಿಕಾರವಶರಾಗಿ ಅಲ್ಲ, ವಿಚಾರಪರರಾಗಿ ಅವಲೋಕಿಸಿ, ವಿಮರ್ಶಿ ಸುತ್ತ, ವಿಶ್ಲೇಷಿಸುತ್ತ ಬಂದಿರುವರೆಂಬುದಕ್ಕೆ ಈ ಕಾದಂಬರಿ ನಿದರ್ಶನವಾಗಿದೆ. ದ್ವಿರಾಷ್ಟ್ರವಾದದ ವಿಷವಾಯು ರಜಾಕಾರರ ಹಾವಳಿಯ ರೂಪದಲ್ಲಿ ಬೀಸಿದಾಗ ಅದರಲ್ಲಿ ಉಸಿರಾಡಿಸಿದ ಕಾದಂಬರಿಕಾರ ಹಾಲು - ಜೇನಿನಲ್ಲಿ ಕಥಾನಾಯಕ ಪೀರನ ಬಾಯಿಂದ "ನಮಾಜು ಮಾಡೋ ಪುಸ್ತಕ ಬ್ಯಾರೆ ಆದರ‍್ಯ, ಉಡೋ ಧೋತರ ಹರಿದು ಚಣ್ಣಾ ಹೊಲಿಸಿ ತೊಟಗೊಂಡುಬಿಟ್ರ ಮನಸೇರ ಬುಡಾನ ಬ್ಯಾರೇ ಆಗ್ತೈತೇನೋ ಹೇಳಪಾ ! ಇವೆಲ್ಲಾ ಶಹರದಾಗಿರೋರು ಬಂದು ತಲೀ ತುಂಬಿದ ಮಾತು" ಎಂದು ಆಡಿಸಿದ್ದಾರೆ–ಇಂಥ ಒಳ್ಳೆಯ ಕಾದಂಬರಿಯನ್ನು ಕೊಟ್ಟ ಗೆಳೆಯ ರಾಜಪುರೋಹಿತರನ್ನು ಅಭಿನಂದಿಸದೆ ಇರಲಾರೆ. ಅವರ ಕೃತಿಗಳಲ್ಲಿ ಮೌಲಿಕತೆ ಹೆಚ್ಚಾಗಿ ಮೂಡಿದೆ. ಸುಂದರ ಶೈಲಿ ಸಾಧಿಸಿದೆ.

—ಸಿದ್ಧಯ್ಯ ಪುರಾಣಿಕ

ಪ್ರಾದೇಶಿಕ ಹಿನ್ನೆಲೆಯ ಒಂದು ಮನೋಜ್ಞ ಕಾದಂಬರಿ 'ಹಾಲು–ಜೇನು'. ಆದರೆ ಈ ಪ್ರಾದೇಶಿಕತೆ ಕಲೆಯ ಒಂದು ಅಂಶವಾಗಿ ಇತರ ಅಂಶಗಳಿಗೆ ಪೂರಕವಾಗಿ ನಿಲ್ಲುವದು ರಾಜಪುರೋಹಿತರ ಬರವಣಿಗೆಯ ಪ್ರೌಢಿಮೆಯ ಚಿಹ್ನೆ. ಉಳಿ ತಾಗಿದ ಕಲ್ಲಿನಂತೆ ಇಲ್ಲಿ ಪಾತ್ರಗಳು ಅವು ಹಿರಿಯುವೊ ಕಿರಿಯವೋ ಸ್ಫುಟವಾಗಿ ನಿಲ್ಲುತ್ತವೆ. 'ಹಾಲು–ಜೇನು' ಕೆಲವು ಪಾತ್ರಗಳ ಕಥೆಯಲ್ಲ; ಕರ್ನಾಟಕದ ಒಂದು ಭಾಗದ ಕಥೆ. ಪ್ರಾದೇಶಿಕತೆ, ಇತಿಹಾಸ—ಇವು ಪಾತ್ರಗಳ ಕಥೆಯೊಡನೆ ಮೂಡಿ ಬರುವದು ಈ ಕಾದಂಬರಿಯ ಒಂದು ಸ್ವಾರಸ್ಯ. ಹಾಲು–ಜೇನು ಕುಶಲ ನೆಯ್ಗೆಯ ಕೆಲಸವನ್ನು ನೆನಪಿಗೆ ತರುತ್ತದೆ. ಪೀರ–ಹಂಪಿಯರ ಪಾತ್ರಗಳಲ್ಲಿ ಕಾದಂಬರಿಯ ಸ್ಪಂದನವನ್ನು ಕಾಣಬಹುದು.

—ಕನ್ನಡ ಪ್ರಭ

ನಿಜಾಮರು ಹೈದ್ರಾಬಾದನ್ನು ಆಳುತ್ತಿದ್ದಾಗ ಅಲ್ಲಿಯ ರಾಜಕೀಯ, ಸಾಮಾಜಿಕ, ಧಾರ್ಮಿಕ, ಮತೀಯ ಸನ್ನಿವೇಶಗಳನ್ನೆಲ್ಲ ಒಳಗೊಂಡು ರಚಿಸಿರುವ ಕಾದಂಬರಿ ಹಾಲು-ಜೇನು. ಶ್ರೀ ಜಯತೀರ್ಥರಿಗೆ ಸನ್ನಿವೇಶ ಸಂದರ್ಭಗಳನ್ನು ಚಿತ್ರಿಸುವ, ವ್ಯಕ್ತಿಗಳ ಅಂತರಂಗವನ್ನು ಹೊಕ್ಕು ನೋಡುವ ಕಲೆಗಾರಿಕೆ ಇದೆ. ಕಾದಂಬರಿಯಲ್ಲಿ ಸತ್ಯ ಇದೆ. ರಸ ಇದೆ.

—ಸಂಯುಕ್ತ ಕರ್ನಾಟಕ

'ಹಾಲು-ಜೇನು' ಕಾದಂಬರಿಯಲ್ಲಿ ಮೂರು ಮುಖಗಳನ್ನು ಓದುಗರು ಸ್ಪಷ್ಟವಾಗಿ ಗುರುತಿಸಬಹುದು...ಒಂದು ದ್ವಿರಾಷ್ಟ್ರವಾದಿಗಳ ಕುತಂತ್ರ; ಎರಡನೆಯ ಮುಖ, ಜಾತಿಯಿಂದ ಮುಸ್ಲಿಮರಾದರೂ ವೃತ್ತಿಯಿಂದ ರೈತರಾಗಿ, ಪ್ರವೃತ್ತಿಯಿಂದ ಸಂಭಾವಿತ ವ್ಯಕ್ತಿಗಳಾಗಿ...ನೆರೆಯವರೊಂದಿಗೆ ಕೂಡಿ ಬಾಳಬಯಸುವ ಶೇಕಣ್ಣಾ, ಪೀರ, ಹಸೀನವ್ವ, ಹಂಪಿಯರು. ಮೂರನೆಯದು...ಹಿಂದೂ ಧರ್ಮ ಹಾಗೂ ಇಸ್ಲಾಂಗಳ ಒಳತಿರುಳು ಒಂದೇ ಆಗಿರುವದನ್ನರಿತು ಅದನ್ನು ನೆರೆಯವರಿಗೂ ಮನವರಿಕೆ ಮಾಡಿಕೊಟ್ಟು ಹೊಂದಾಣಿಕೆಯ ಬಾಳನ್ನು ಆಶಿಸುವ ಜೋಯಿಸರು, ಪೀರನ ಪಾತ್ರಚಿತ್ರಣ ಮನೋಜ್ಞ. ಹಂಪಿಯ ಪಾತ್ರಚಿತ್ರ ಇವನ್ನು ಸಮರ್ಥವಾಗಿ ನಿರೂಪಿಸಿದ್ದಾರೆ. ಪ್ರಾದೇಶಿಕತೆಯ ಸಿರಿಯಿಂದೊಡಗೂಡಿದ 'ಹಾಲು-ಜೇನು' ಪ್ರಾಂತ್ಯಕ್ಕೆ ತಕ್ಕಂತೆ 'ರೊಟ್ಟಿ-ತುಪ್ಪದ' ಹೊಂದಾಣಿಕೆಯಿಂದ ಉತ್ತಮಗೊಂಡಿದೆ.

—ಸುಧಾ – ವಿಮರ್ಶೆ

18-1-70

ಇಲ್ಲಿಯ ಕಥಾವಸ್ತು ಸಾಮಾಜಿಕ ರಾಜಕೀಯ ಸ್ಥಿತ್ಯಂತರಗಳನ್ನೊದಗಿಸುವದಾಗಿದ್ದರೂ ಅದನ್ನು ಪೂರೈಸುವ ರೀತಿಯಲ್ಲಿ ಪೀರ - ಹಂಪಿಯರ ಪ್ರಣಯದ ಕಥೆಯನ್ನು ಜೋಡಿಸಿರುವದರಿಂದ ಕಾದಂಬರಿಯ ಆಕರ್ಷಣೆ ಹೆಚ್ಚಿದೆ. ಸಮಕಾಲೀನ ಬಾಳಿನ ಸುಂದರ ಚಿತ್ರಣವನ್ನು ಕೊಡುವಲ್ಲಿ ಸಾರ್ಥಕವಾದ 'ಹಾಲು-ಜೇನು' ಹೈದ್ರಾಬಾದಿನ ಅಂದಿನ ಸ್ಥಿತಿಗತಿಗಳು ಗೊತ್ತಿರದ ಕನ್ನಡಿಗರಿಗೆ ಕೈದೀವಿಗೆಯಾಗಿದೆ. "ಮನಿಶ್ಯಾಗ ಏನಾರ ಅಂಬೋದಕಿಂತ ಮುಂಚೆ ಸಮೀಪದಿಂದ ಪರಿಕಿಸಿ ಅನಬೇಕು" —ಇದು ಕಾದಂಬರಿಯ ಸಂದೇಶದಂತಿದೆ. ಭಾಷೆಯ ದೃಷ್ಟಿಯಿಂದ ಇದು ಪ್ರಾದೇಶಿಕ ಕಾದಂಬರಿಯೆನಿಸಿದರೂ, ಮಾನವಪ್ರಪಂಚದ ಭಾವನೆಯ ದೃಷ್ಟಿಯಿಂದ ಇದು ಸಮಗ್ರ ನಾಡಿನ ಕೃತಿಯಾಗಿದೆ. ಕಲೆಯ ದೃಷ್ಟಿಯಿಂದಲೂ ಇದೊಂದು ಉತ್ತಮ ಕೃತಿಯೆನಿಸಿಕೊಳ್ಳುವದರಲ್ಲಿ ಸಂದೇಹವೇ ಇಲ್ಲ.

—ಆಕಾಶವಾಣಿ, ಧಾರವಾಡ

The author has had personal experience of the freedom struggle by the people of Hyderabad State and has utilised his experience and power of observation, in projecting the life of Kannadigas in that state at that time in his first novel Halu-Jenu.

*—Hindu, 12-1-69*

**ಸುಳಿ-ಗಾಳಿ**

ಈ ಸಾರಿ ಸ್ಪರ್ಧೆಗೆ ಬಂದ 140 ಕಾದಂಬರಿಗಳಲ್ಲಿ ವಸ್ತು, ನವೀನತೆ, ಪರಿಣಾಮಕಾರಿಯಾದ ಶೈಲಿ, ಪಾತ್ರ ವೈವಿಧ್ಯ, ಕುತೂಹಲ ಹುಟ್ಟಿಸುವ ಸನ್ನಿವೇಶಗಳು, ಇವುಗಳಿಂದ ಓದುಗರ ಆಸಕ್ತಿ, ಆದರಗಳನ್ನು ಸೆರೆಹಿಡಿಯಬಲ್ಲ ಕಾದಂಬರಿ ಶ್ರೀ ಜಯತೀರ್ಥ ರಾಜಪುರೋಹಿತರ 'ಸುಳಿ-ಗಾಳಿ'...ಈ ಕಾದಂಬರಿ ಒಂದು ದೃಷ್ಟಿಯಿಂದ ಐತಿಹಾಸಿಕವಾದರೂ, ಇನ್ನೊಂದು ದೃಷ್ಟಿಯಿಂದ ಪರಿವರ್ತನಶೀಲ ಸಮಾಜದ ಪತನ ಉತ್ಥಾನಗಳ ಕಥೆಯಾಗಿದ್ದು ಸಾಮಾಜಿಕವೂ ಆಗಿದೆ...ಬೃಹತ್ ಕಾದಂಬರಿಯ ವಸ್ತುವನ್ನು 200–250 ಪುಟಗಳಲ್ಲಿ ಅಳವಡಿಸುವದು ಸಾಹಸದ ಕಾರ್ಯವಾದರೂ ಪರಿಣಾಮದಲ್ಲಿ ಲೇಖಕರ ಪ್ರಯತ್ನ ಸಫಲವಾಗಿದೆ. ಹೈದ್ರಾಬಾದಿನ ಕನ್ನಡ ಪ್ರದೇಶ, ಪರಿವರ್ತನೆಯ ಸುಳಿಯಲ್ಲಿ ಸಿಕ್ಕಿದ ಅಲ್ಲಿಯ ಶ್ರೀಮಂತ ಸಮಾಜ, ಇವುಗಳ ಸಮಸಾಮಯಿಕ ಇತಿಹಾಸವನ್ನು ವಸ್ತುವಾಗಿಟ್ಟುಕೊಂಡು ಕಾದಂಬರೀ ಕ್ಷೇತ್ರವನ್ನು ಪ್ರವೇಶಿಸಿ ಪ್ರಥಮ ಪ್ರಯತ್ನದಲ್ಲಿಯೇ 'ಸುಳಿ-ಗಾಳಿ' ಯಂಥ ಉತ್ತಮ ಕಾದಂಬರಿಯನ್ನು ಕನ್ನಡಕ್ಕೆ ನೀಡಿದ ಶ್ರೀ ಜಯತೀರ್ಥ ರಾಜಪುರೋಹಿತರು 'ಸುಧಾ' ಕಾದಂಬರಿ ಸ್ಪರ್ಧೆಯಲ್ಲಿ ಜಯಗಳಿಸಿ ಅಭಿನಂದನೀಯರಾಗಿದ್ದಾರೆ.

**—'ಸುಧಾ' ಕಾದಂಬರಿ ಸ್ಪರ್ಧೆ–ತೀರ್ಪುಗಾರರ ಸಮೀಕ್ಷೆ**

'ಸುಳಿ-ಗಾಳಿ'ಹೊಸ ವಸ್ತುವನ್ನು ಪಡೆದಿದೆ. ಒಂದು ಸಮಾಜದ ಕಟ್ಟು ಸಡಿಲಿ ಇನ್ನೊಂದು ಸಾಮಾಜಿಕ ವ್ಯವಸ್ಥೆ ರೂಪ ತಾಳಲು ಹವಣಿಸುವ ಸಂಕ್ರಮಣ ಕಾಲದ ...ನವೀನ ವಸ್ತುವನ್ನು ಲೇಖಕರು ತಕ್ಕಷ್ಟು ಮುತುವರ್ಜಿಯಿಂದ ನಿರೂಪಿಸಿದ್ದಾರೆ. ಜಮುರುದ್ ಬೇಗಮಳ ವಿಲಾಸೀ ಜೀವನ, ಅಲ್ಲಲ್ಲೇ ಬರುವ ಪ್ರಣಯ ಪ್ರಸಂಗಗಳು ಒರಟು ವಿವರಗಳಾಗದೇ, ಹದವಾದ ಬರವಣಿಗೆ ಲೇಖಕರಿಗೆ ಸಾಧಿಸಿದೆಯೆಂಬುದಕ್ಕೆ ನಿದರ್ಶನಗಳಾಗಿವೆ. ಇಡೀ ಕಥೆಗೆ ಸಾಂಕೇತಿಕ ಧ್ವನಿ ಒದಗಿಸುವ ಕೆಲವು ಘಟನೆಗಳು (ಗುಲಾಬಿ ಬೇಗಂಳ ವರ್ಣಚಿತ್ರ) ಕಾದಂಬರಿಗೆ ಸೊಗಸು ತಂದಿದೆ.

**—ಪ್ರಜಾವಾಣಿ**

'Suli-gali' the novel is set in a period that is one of the familiar upheavals of History. The subject matter of 'Suli-gali' has never been tackled before in Kannada. Perhaps no other language in India has tried to tell the story of Nizam's Hyderabad and his noblemen. The author was on virgin land and has explored well. 'Suli-gali' is a significant countribution to Kannada literature.

The author vividly depicts the way of life, thinking, values, morale and attitudes of a not very distant but vanished era in Hyderabad. He has succeeded marvellously in portraying the nostalgic memories of the halycon days of the Nawabs. None of the characters are hateful to the readers because each is etched with understanding, sympathy and affection.

Rajpurohit has a matured style, technique, and narrative. The conversation, behaviour and reaction of characters ring true, be it in a palace, club or hovel in Kanakgiri.

*—Sunday Standard-2-11-69—Review by R. Mohan*

ಗಂಭೀರವಾದ ವಸ್ತುವಿಶೇಷವನ್ನು, ಅಷ್ಟು ಸಂಗ್ರಹವಾಗಿ, ಭಾವೋದ್ರೇಕಕ್ಕೆ ಅವಕಾಶ ಕಲ್ಪಿಸಿಕೊಡಬಹುದಾದಂಥದನ್ನು ಅತ್ಯಂತ ನಿರ್ಲಿಪ್ತವಾಗಿ ಮಾನವೀಯವಾದ ಅನುಕಂಪೆಯೇ ಜೀವಜೀವಾಳವಾಗಿ ಒಡಮೂಡುತ್ತಿರುವ ಒಂದು ಐತಿಹಾಸಿಕ ಅಧ್ಯಾಯುವನ್ನು ಓದಿ ಸವಿದೆ. ಭಾವೈಕ್ಯದ ಬಗ್ಗೆ ಒಣಭಾಷಣ ಮಾಡುವದಕ್ಕಿಂತ ಇಂಥ ಸಮರ್ಥ ಲೇಖಕರು, ಸಹೃದಯರು ಲೇಖನಿ ಎತ್ತಿದರೆ ಯಾವುದು ಅಸಾಧ್ಯ? —ಎಂದೆನಿಸುತ್ತದೆ.

—ಎಂ. ಅಕಬರ ಅಲಿ

ಶ್ರೀ ರಾಜಪುರೋಹಿತರು ಒಳ್ಳೆಯ ಕಥೆಗಾರರೆಂದು ಈಗಾಗಲೇ ಹೆಸರಾಗಿದ್ದಾರೆ. ಪ್ರಪಂಚದ ವಿಸ್ತೃತ ಅನುಭವವನ್ನು ಅವರು ಕಲೋಪಾಸಕನ ದೃಷ್ಟಿಯಿಂದ ನೋಡಿ ಅರಗಿಸಿಕೊಳ್ಳಬಲ್ಲರು...ತಿರುಳುಳ್ಳ ಕೃತಿ. ಯಾವಾಗಲೂ ತಲೆಯೆತ್ತಿ ನಿಲ್ಲಬಲ್ಲದು. ಅಂಥದೊಂದು ಸ್ವಂತಿಕೆ ರಾಜಪುರೋಹಿತರ ಕೃತಿಯಲ್ಲಿದೆ.

—ವಿ. ಕೃ. ಗೋಕಾಕ

Sri Rajpurohit tells his stories effortlessly and absorbingly. There is humour which some times comes close to satire and art of characterisation reminds one of sculpture.

*—Deccan Herald-Review*

ಆಳವಾದ ಅನುಭವ, ಜೀವನದ ನಿರೀಕ್ಷಣೆ, ಕಲಾತ್ಮಕ ನಿರೂಪಣೆ, ಸಹೃದಯತೆ, ಅನುಕಂಪ ಇವೆಲ್ಲ ಸಣ್ಣ ಕಥೆಗಳಲ್ಲಿ ಕಾಣಬೇಕಾದ ಗುಣಗಳು. ಶ್ರೀ ರಾಜಪುರೋಹಿತರ ಕಥೆಗಳಲ್ಲಿ ಈ ಗುಣಗಳನ್ನು ಕಂಡಿದ್ದೇನೆ.

—ಕೃಷ್ಣಮೂರ್ತಿ ಪುರಾಣಿಕ

Stories offer variety in character, locale and theme, make delightful reading. Rajpurohit tells his story effortlessly and the art of characterisation reminds one of sculpture.

*—Deccan Herald*

'ಜಗನ್ನಾಥದಾಸರು' ಮತ್ತು 'ವ್ಯಾಸರಾಯರು' ಈ ಎರಡೂ ಪುಸ್ತಕಗಳು ತನ್ನ ತನ್ನ ಉದ್ದೇಶ ಸಾಧನೆಯಲ್ಲಿ ಸಫಲತೆಯನ್ನು ಪಡೆದಿವೆ. ನಿರೂಪಣೆ ಮನಂಬುಗುವಂತೆ ಹೃದಯಂಗಮವಾಗಿದೆ. ಜಗನ್ನಾಥದಾಸರ ವ್ಯಕ್ತಿತ್ವವನ್ನು, ಘನತೆಯನ್ನು ಮನೋಜ್ಞವಾಗಿ ಚಿತ್ರಿಸಿದ್ದೀರಿ. ವ್ಯಾಸತೀರ್ಥರ ಪ್ರತಿಮೆ ತನ್ನ ಆಳ, ಎತ್ತರ, ಹರವು, ಪ್ರೌಢಿಮೆ, ಗಾಂಭೀರ್ಯ ಪರಿಪುಷ್ಟತೆಯ ಸೊಬಗನ್ನು ತಳೆದಿದೆ. ನಿಮಗೆ ಹಾರ್ದಿಕ ಅಭಿವಂದನೆಗಳು. ಈಚಿನ ನಿಮ್ಮ ಸಾಹಿತ್ಯ ಕೃಷಿ ಹೆಚ್ಚು ಸತ್ವಯುತವೂ, ಸಚೇತನವೂ ಆಗಿದೆ. ಇದರಿಂದ ನೀವು ಬರೀ ಸಾಹಿತಿಗಳಾಗಿ ಮಾತ್ರವಲ್ಲ, ಸಂಸ್ಮರಣೀಯ ಸಾಹಿತಿಯೆಂದು ಮನ್ನಣೆ ಪಡೆಯುತ್ತೀರಿ. ನಿಮ್ಮ ಬಹುಶ್ರುತ ಪಾಂಡಿತ್ಯ, ಸಂಶೋಧನ ಪ್ರಜ್ಞೆ, ಇತಿಹಾಸದೃಷ್ಟಿ, ಸುದೀರ್ಘ ವ್ಯಾಸಂಗಬಲ, ಇವುಗಳಿಂದ ನಿಮ್ಮ ಲೇಖನವ್ಯವಸಾಯ ಚಿರಸ್ಥಾಯಿ ಆಗಬಲ್ಲದು.

ಧಾರವಾಡ, —ಡಾ. ಪಾಂ. ಭಿ. ದೇಸಾಯಿ
8-9-1971

# ಅನುಬಂಧ

ಕರ್ನಾಟಕ ಸರ್ಕಾರ

## 'ಕನ್ನಡ ತೀರ್ಪುಗಳು' ಗ್ರಂಥಕರ್ತ

## ಶ್ರೀ ಜಯತೀರ್ಥ ರಾಜಪುರೋಹಿತ ಅವರಿಗೆ

# ವಿಶೇಷ ಪ್ರಶಸ್ತಿ

ರಾಜ್ಯ ಸರ್ಕಾರದ ಆಡಳಿತ ಭಾಷಾ ನೀತಿಯನ್ನು ಜಾರಿಗೆ ತರುವಲ್ಲಿ ಶ್ರೀ ಜಯತೀರ್ಥ ರಾಜಪುರೋಹಿತರವರು ಮಹತ್ವಪೂರ್ಣವಾದ ಮತ್ತು ಮೌಲಿಕವಾದ ಕಾರ್ಯವನ್ನು ಸಾಧಿಸಿದ್ದಾರೆ. ನ್ಯಾಯಾಲಯಗಳಲ್ಲಿ ರಾಜ್ಯದ ರಾಜಭಾಷೆಯನ್ನು ಬಳಸುವುದರ ವಿಷಯದಲ್ಲಿ ಸರ್ಕಾರದವರು ಕೊಟ್ಟ ಕರೆಗೆ ಓಗೊಟ್ಟು 1974ರಷ್ಟು ಹಿಂದೆಯೇ ಅವರು ಕನ್ನಡದಲ್ಲಿ ಪ್ರಥಮ ತೀರ್ಪು ನೀಡಿ ಚರಿತ್ರಾರ್ಹವಾದ ಹೆಜ್ಜೆ ಇಟ್ಟಿದ್ದಾರೆ. ಅವರು ಚಿತ್ರದುರ್ಗ ಜಿಲ್ಲೆಯ ವಿಶೇಷ ಡೆಪ್ಯೂಟಿ ಕಮೀಷನರು ಮತ್ತು ಜಿಲ್ಲಾ ಮ್ಯಾಜಿಸ್ಟ್ರೇಟರಾಗಿ ಮೂಲತಃ ಕನ್ನಡದಲ್ಲಿ ಬರೆದು ನೀಡಿದ ತೀರ್ಪುಗಳಲ್ಲಿ 50 ತೀರ್ಪುಗಳನ್ನು ಆಯ್ದು 'ಕನ್ನಡ ತೀರ್ಪುಗಳು' ಎಂಬ ಹೆಸರಿನಿಂದ ಮೈಸೂರು ವಿಶ್ವವಿದ್ಯಾನಿಲಯದವರು ಗ್ರಂಥ ರೂಪದಲ್ಲಿ ಪ್ರಕಟಿಸಿದ್ದಾರೆ. ಈ ಗ್ರಂಥವು ದೇಶದಲ್ಲಿಯೇ ಇನ್ನಾವ ಭಾಷೆಯಲ್ಲಿಯೂ ಇಲ್ಲದ ಅದ್ವಿತೀಯ ಕೊಡುಗೆಯಾಗಿದೆಯೆಂದು ಕೇಂದ್ರ ರಾಜ ಭಾಷಾ ಆಯೋಗದವರು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಇನ್ನು ಮುಂದೆ ನ್ಯಾಯಾಲಯಗಳಲ್ಲಿ ತೀರ್ಪುಗಳನ್ನು ಮತ್ತು ಆದೇಶಗಳನ್ನು ಬರೆಯುವವರಿಗೆ ಇದು ಒಂದು ಮಾರ್ಗದರ್ಶಕ ಉಲ್ಲೇಖ ಗ್ರಂಥವಾಗುವುದೆಂದು ಭಾವಿಸಲಾಗಿದೆ.

ಶ್ರೀ ಜಯತೀರ್ಥ ರಾಜಪುರೋಹಿತರವರು ಸಾಧಿಸಿದ ಈ ಅಪೂರ್ವವಾದ ಕಾರ್ಯಕ್ಕೆ ಮನ್ನಣೆ ನೀಡುವ ವಿಷಯ ಸರ್ಕಾರದ ಪರಿಶೀಲನೆಯಲ್ಲಿತ್ತು. ಸರ್ಕಾರದವರು ಈ ವಿಷಯವನ್ನು ರಾಜ್ಯ ಅಧಿಕಾರಿ ಮಟ್ಟದ ಕನ್ನಡ ಅಭಿವೃದ್ಧಿ ಸಮಿತಿಯವರು ರಚಿಸಿದ ಕಾನೂನು ಇಲಾಖೆಯ ಅಡಿಷನಲ್ ಕಾರ್ಯದರ್ಶಿಗಳಾದ ಶ್ರೀ

ಸಿ. ಎಂ. ನಂದೀಶ್ವರ್ ಅವರು ಅಧ್ಯಕ್ಷರಾಗಿದ್ದ ಉಪಸಮಿತಿಯೊಂದಕ್ಕೆ ಪರಿಶೀಲನೆಗೆ ಒಪ್ಪಿಸಿದರು.

ಕನ್ನಡ ಭಾಷೆಯಲ್ಲಿ ಇದು ಈ ಬಗೆಯ ಪ್ರಥಮ ಗ್ರಂಥವಾಗಿದೆ. ಇತರ ಯಾವ ಭಾಷೆಯಲ್ಲಿಯೂ ಇಂಥ ಗ್ರಂಥಗಳು ಇಲ್ಲ. ಈ ಲೇಖಕರು ಆಡಳಿತಗಾರ ರಾಗಿ ತಮ್ಮ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸುತ್ತಲೇ ಇಂಥ ಒಂದು ವಿದ್ವತ್ಪೂರ್ಣವಾದ ಮತ್ತು ಅತ್ಯುಪಯುಕ್ತವಾದ ಕೃತಿ ರಚನೆಯನ್ನು ಸಾಧಿಸಿ ದುದಕ್ಕಾಗಿ ಅವರು ಅತ್ಯಂತ ಅಭಿನಂದನೀಯರಾಗಿದ್ದಾರೆ. ಅವರಿಗೆ ಇದಕ್ಕಾಗಿ ಯೋಗ್ಯ ಪ್ರೋತ್ಸಾಹ ದೊರೆಯಲೇಬೇಕು ಮತ್ತು ಈ ದೃಷ್ಟಿಯಿಂದ ಶ್ರೀ ಜಯ ತೀರ್ಥ ರಾಜಪುರೋಹಿತರಿಗೆ ವಿಶೇಷ ರಾಜ್ಯ ಪ್ರಶಸ್ತಿಯನ್ನು ಸೂಕ್ತವಾದ ಫಲಕ ದೊಂದಿಗೆ ನೀಡಬೇಕೆಂದು ಈ ವಿಷಯವನ್ನು ಪರಿಶೀಲಿಸಿದ ಉಪಸಮಿತಿಯವರು ಅಭಿಪ್ರಾಯ ಪಟ್ಟಿದ್ದಾರೆ.

ಈ ಉಪಸಮಿತಿಯ ಶಿಫಾರಸ್ಸನ್ನು ಕೂಲಂಕಷವಾಗಿ ಪರ್ಯಾಲೋಚಿಸಿ ಕರ್ನಾಟಕ ಸರ್ಕಾರವು ಮಂಜೂರು ಮಾಡಿದ ಪ್ರಕಾರ 'ಕನ್ನಡ ತೀರ್ಪುಗಳು' ಗ್ರಂಥದ ಲೇಖಕರಾದ ಶ್ರೀ ಜಯತೀರ್ಥ ರಾಜಪುರೋಹಿತರಿಗೆ ವಿಶೇಷ ರಾಜ್ಯ ಪ್ರಶಸ್ತಿಯನ್ನು ನೀಡಲಾಗುತ್ತಿದೆ.

ಎನ್. ನರಸಿಂಹರಾವ್

ಬೆಂಗಳೂರು. ಮುಖ್ಯ ಕಾರ್ಯದರ್ಶಿ,

ದಿನಾಂಕ : 25-10-1977 ಕರ್ನಾಟಕ ಸರ್ಕಾರ.

(ಆದೇಶ : ಕ್ರಮಾಂಕ : ಇ. ಡಿ. 11 ಎಂ. ಎಲ್. ಸಿ, 77 ದಿನಾಂಕ 2-9-77)



# ಕರ್ನಾಟಕ ಸಾಹಿತ್ಯ ಅಕಾಡೆಮಿ
# ಗೌರವ ಪ್ರಶಸ್ತಿ–1978

ಶ್ರೀ ಜಯತೀರ್ಥ ರಾಜಪುರೋಹಿತ ಅವರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿರುವ ಅಮೂಲ್ಯ ಸೇವೆಗಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಅವರಿಗೆ ನಟರಾಜ ವಿಗ್ರಹ, ಕಾಶ್ಮೀರೀ ಶಾಲು ಮತ್ತು ಐದು ಸಾವಿರ ರೂಪಾಯಿಗಳ ಹಮ್ಮಿಣಿ ನೀಡಿ ಗೌರವಿಸಿದ ಸಂದರ್ಭದಲ್ಲಿ ನೀಡಿದ

# ಪ್ರಶಸ್ತಿ ಪತ್ರ

ಅನಿರುದ್ಧ ದೇಸಾಯಿ
ಅಕಾಡೆಮಿಗಳ ರಿಜಿಸ್ಟ್ರಾರ್, ಹಾಗೂ
ನಿರ್ದೇಶಕರು, ಕನ್ನಡ ಮತ್ತು
ಸಂಸ್ಕೃತಿ ಇಲಾಖೆ.

ಡಾ. ಎಂ. ಶಿವರಾಮ್,
ಅಧ್ಯಕ್ಷರು,
ಕರ್ನಾಟಕ ಸಾಹಿತ್ಯ ಅಕಾಡೆಮಿ.

ಗೋವಿಂದನಾರಾಯಣ,
ಕರ್ನಾಟಕ ರಾಜ್ಯದ ರಾಜ್ಯಪಾಲರು,
ಬೆಂಗಳೂರು, 17–1–1978.

# ಜಯತೀರ್ಥ ರಾಜಪುರೋಹಿತರ ಕೃತಿಗಳು

**ಕಾದಂಬರಿಗಳು** **ಪ್ರಕಟಿತ ಕೃತಿಗಳ ವಿವರ**

1. ಹಾಲು ಜೇನು
2. ಸುಳಿ ಗಾಳಿ

   (3ನೇ ಆವೃತ್ತಿಯಲ್ಲಿ 'ಜೇನು ಸುಳಿ' ಹಾಗೂ ಮೈಸೂರು ವಿಶ್ವವಿದ್ಯಾನಿಲಯ ಬಿ. ಎ. ಬಿಎಸ್‌ಸಿ. ಪಠ್ಯವಾಯಿತು. 'ಸುಳಿ-ಗಾಳಿ' ರಾಜ್ಯಮಟ್ಟದ ಸುಧಾ ಕಾದಂಬರಿಯಲ್ಲಿ 140 ಕಾಂದಬರಿಗಳಲ್ಲಿ ಪ್ರಥಮ ಬಹುಮಾನ ಹಾಗೂ ಅನಂತರ ರಾಜ್ಯ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಪಡೆದುದು.
   ಈಗ ಬೆಂಗಳೂರು ವಿಶ್ವವಿದ್ಯಾಲಯದ ಬಿ.ಎ.,ಬಿ.ಎಸ್‌ಸಿಗೆ ಪಠ್ಯಪುಸ್ತಕವೆಂದು ಸ್ವೀಕೃತವಾಗಿದೆ.)
3. ಜೋಹರಾ
4. ಕಡಲ ತೋಳ (ಅನುವಾದ)

**ಸಣ್ಣ ಕಥೆಗಳು** (ಸಂಗ್ರಹಗಳು)

1. ಪಾರವ್ವನ ಪಂಚಾಯಿತಿ
2. ರೋಹಿಣಿ
3. ಮೌಲ್ಯಗಳು
4. ಶಿಥಿಲ ಶಿಲೆ (ಕರ್ನಾಟಕ ವಿಶ್ವವಿದ್ಯಾಲಯದ ಎಂ, ಎ. ತರಗತಿಗೆ ಪಠ್ಯಪುಸ್ತಕ ವಾಗಿದೆ)

**ನಾಟಕ**

1. ತುಂಗೆಯಂಗಳದಲ್ಲಿ (ಗೀತ ರೂಪಕ)
2. ಕುಮಾರವ್ಯಾಸ
3. ಜಯ ಬಂಗ್ಲಾ

**ಜೀವನ ಚರಿತ್ರೆ**

1. ವ್ಯಾಸರಾಯರು (ಪ್ರಸಾರಾಂಗ, ಮೈಸೂರು)
2. ಜಗನ್ನಾಥ ದಾಸರು (ಐಬಿಎಚ್ ಪ್ರಕಾಶನ)
3. ಸುರಪುರದ ಶೂರನಾಯಕರು (ಐಬಿಎಚ್ ಪ್ರಕಾಶನ)
4. ಸ್ವಾಮಿ ರಾಮತೀರ್ಥ (ಭಾರತ–ಭಾರತಿ ಪುಸ್ತಕ ಸಂಪದ ಹಿಂದಿ-ಇಂಗ್ಲಿಷ್‌ನಲ್ಲಿ.)
5. ಕೃಷ್ಣದೇವರಾಯ (ಭಾರತ ಭಾರತಿ ಪುಸ್ತಕ ಸಂಪದ)
6. ಕನಕಗಿರಿ (ಚರಿತ್ರೆ : ಐಬಿಎಚ್ ಪ್ರಕಾಶನ)

**ಇತರ**

1. **ಕನ್ನಡ ತೀರ್ಪುಗಳು**

   (ಪ್ರಪ್ರಥಮ ಕನ್ನಡ ನ್ಯಾಯಾಲಯ ತೀರ್ಪನ್ನೊಳಗೊಂಡ ಮೌಲಿಕ ಗ್ರಂಥ. ವಿಶೇಷ ರಾಜ್ಯ ಪ್ರಶಸ್ತಿ ಸಂಪಾದಿಸಿದ ಕೃತಿ. (ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣೆ)
2. (ಎ) ಆಡಳಿತದಲ್ಲಿ ಕನ್ನಡ (ಪ್ರಬಂಧ–ಮೈಸೂರಿನ ಆಡಳಿತ ತರಬೇತಿ ಸಂಸ್ಥೆಯ ಪ್ರಕಟಣೆ)

   (b) Kannada in Administration.

**ಸಂಪಾದಿತ ಕೃತಿಗಳು**

1. ತುಂಗಾ ತರಂಗ (ಇತರರೊಡನೆ) ವಾರ್ತಾ ಇಲಾಖೆ ಪ್ರಕಟಣೆ
2. ಕಚೇರಿ ಕೈಪಿಡಿ (ಇತರರೊಡನೆ) ಮೈಸೂರು, ವಿಶ್ವವಿದ್ಯಾನಿಲಯ ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆ
3. ಪಂಪಾಸಂಪದ (ಇತರರೊಡನೆ) ಬಳ್ಳಾರಿ ಜಿಲ್ಲಾ ಸಾಹಿತ್ಯ ಸಮಿತಿ ಪ್ರಕಟಣೆ
4. ಪಂಪಾ ತುಂತುರು (ಇತರರೊಡನೆ) ಬಳ್ಳಾರಿ ಜಿಲ್ಲಾ ಸಾಹಿತ್ಯ ಸಮಿತಿ ಪ್ರಕಟಣೆ
5. ಆಡಳಿತ ಭಾಷಾ ಸಮಸ್ಯೆಯ ವಿಶ್ಲೇಷಣೆ (ಇತರರೊಡನೆ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಕಟಣೆ
6. ಬಹುಮಾನಿತ ಕನ್ನಡ ತೀರ್ಪುಗಳು (ಇತರರೊಡನೆ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಕಟಣೆ
7. Official Language Problems Analysed.

**ಪ್ರಬಂಧಗಳು, ಬಿಡಿ ಲೇಖನಗಳು**

(ಸುಮಾರು 45ಕ್ಕೂ ಹೆಚ್ಚು ಸಂಖ್ಯೆಯಲ್ಲಿ ಪ್ರಕಟಗೊಂಡ ವಿವಿಧ ವಿಷಯಕ ವಾದ ಬಿಡಿ ಲೇಖನಗಳು.

## ಜಯತೀರ್ಥ ರಾಜಪುರೋಹಿತರ ಕೆಲವು ಬಿಡಿ ಲೇಖನಗಳು

| ಲೇಖನದ ಹೆಸರು | ಪ್ರಕಟವಾದ ಪತ್ರಿಕೆಯ ಹೆಸರು ಮತ್ತು ಪ್ರಕಟಿತ ವರ್ಷ. |
|---|---|
| 1) ಲಂಚವು ನಾಮಶೇಷವಾಗುವುದೇ? | ಪ್ರಜಾ – ಹೈದ್ರಾಬಾದ್ – 1945 |
| 2) ಆಡಳಿತದಲ್ಲಿ ದಕ್ಷತೆ ಏಕಿಲ್ಲ ? | ಕಸ್ತೂರಿ – ಹುಬ್ಬಳ್ಳಿ – 1962 |
| 3) ಎ. ಆರ್. ಕೃಷ್ಣಶಾಸ್ತ್ರಿಗಳ ಮಾನವೀಯತೆ | ಸಂಯುಕ್ತ ಕರ್ನಾಟಕ |
| 4) ಅಶಾಂತ ಪೀಳಿಗೆ | ಸುಧಾ – ಯುಗಾದಿ ಸಂಚಿಕೆ – 1970 |
| 5) ವಿಜಯನಗರ ಕಾಲದಲ್ಲಿ ನವರಾತ್ರಿ | ಸುಧಾ, 27–9–1970 |
| 6) ಸಾವಿನ ಸಮಾಲೋಚನೆ | ಕರ್ಮವೀರ, 8–12–68 |
| 7) ಗೊರಕೆ | ಕರ್ಮವೀರ, 17–3–68 |
| 8) ಸತಿಯಲ್ಲದ ಸವತಿ | ಕರ್ಮವೀರ, 19–11–1961 |
| 9) ಪ್ರಾಚೀನ ಭಾರತದಲ್ಲಿ ಭೂಸ್ವಾಮ್ಯ | ಉದಯವಾಣಿ–ದೀಪಾವಳಿ ಸಂಚಿಕೆ–1972 |
| 10) ಆಡಳಿತ ಭಾಷೆ | ಕನ್ನಡ ನುಡಿ (ಮಂಡ್ಯ ಸಾಹಿತ್ಯ ಸಮ್ಮೇಳನ ಭಾಷಣ) 1974 |
| 11) ನಾಟಕ ಪ್ರೇಕ್ಷಕ | ಜೀವನ ವಿಕಾಸ, ಕಲಬುರ್ಗಿ |
| 12) ಎಲ್ಲ ಕ್ಷೇತ್ರಗಳಲ್ಲಿ ಕನ್ನಡದ ಬಳಕೆ | ಕನ್ನಡ ನುಡಿ (ವಜ್ರಮಹೋತ್ಸವ ಭಾಷಣ) |
| 13) ವಿಮರ್ಶೆಯ ಪೂರ್ವ ಪಶ್ಚಿಮ | ಕರ್ಮವೀರ (ರಾಯಚೂರು ಜಿಲ್ಲಾ ಸಾಹಿತ್ಯ ಸಮ್ಮೇಳನ ಭಾಷಣ) |
| 14) ವಿಜಯನಗರದ ಹಜಾಮರು | ಕರ್ಮವೀರ, 1–11–1970 |
| 15) ಜಯವೇಂಕಟಾಚಾರ್ಯರು | ಪ್ರಬುದ್ಧ ಕರ್ನಾಟಕ ಮತ್ತು ಕನ್ನಡ ವಿಶ್ವಕೋಶ ಸಂ. 7 |
| 16) ಗಣೇಕಲ್ ಸಂಗವಿಭು | ಕನ್ನಡ ವಿಶ್ವಕೋಶ (ಸಂ. 6 ಪು 92) |
| 17) ಚಾರ್ವಾಕ ಸಿದ್ಧಾಂತ | " ಸಂ. 7 ಪು. 302 |
| 18) ರಮಾನಂದ ಚಟರ್ಜಿ | " ಸಂ. 7 |
| 19) ಕಮಲಾದೇವಿ ಚಟ್ಟೋಪಾಧ್ಯಾಯ | " " |
| 20) ಚಿಂಚೋಳಿ | " " |
| 21) ಚೀಕಲ ಪರವಿ | " " |
| 22) ಚುನಾವಣೆ | " " |
| 23) ಚಳ್ಳಗುರ್ತಿ | " " |
| 24) ಜೋಸಫ್ ಚೇಂಬರ್ಲಿನ್ | " " |

| | |
|---|---|
| 25) ನೆವಿಲ್ ಚೆಂಬರ್ಲಿನ್ | ಕನ್ನಡ ವಿಶ್ವಕೋಶ ಸಂ. |
| 26) ಛಾಯಾ | |
| 27) ಜನಮತಗಣನೆ | |
| 28) ಜಯತೀರ್ಥರು | |
| 29) ಕೆ. ಪಿ. ಜಯಸ್ವಾಲ್ | |
| 30) ಟಿಳಕ ಬಾಳಗಂಗಾಧರ | " ಸಂಪುಟ 8 |
| 31) ಕ್ರಾಂತಿಕಾರಿ ಕವಿ ಪಿ. ಕೇಶವದೇವ | ಕರ್ಮವೀರ, 4-5-69 |
| 32) ಹರಿಜನರ ನರಹರಿ (ಕನಕಗಿರಿ) | ನವಕಲ್ಯಾಣ, ಕಲಬುರ್ಗಿ, 21-1-67 ಮತ್ತು ಸಂಯುಕ್ತ ಕರ್ನಾಟಕ |
| 33) ತಬ್ಬಲಿಯು ನೀನಾದೆ ಮಗನೆ ವಿಮರ್ಶೆ (ಇಂಗ್ಲಿಷ್ ನಲ್ಲಿ) | ಡೆಕನ್ ಹೆರಾಲ್ಡ್ |
| 34) ಪರ್ಯಟನ – ವಿಮರ್ಶೆ | ಸುಧಾ |
| 35) ಚಪ್ರಾಸಿ | ಸುಧಾ, 4–5–1969 |
| 36) ಕನ್ನಡ ಅಭಿವೃದ್ಧಿಯ ಎರಡು ವರ್ಷಗಳು | ಕನ್ನಡ ಸಂಸ್ಕೃತಿ ಇಲಾಖೆ ಪ್ರಕಟಣೆ(1978) ಮತ್ತು ಸಂಯುಕ್ತ ಕರ್ನಾಟಕ ಕನ್ನಡ ನುಡಿ, ಉದಯವಾಣಿಗಳಲ್ಲಿ |
| 37) ಹೈದ್ರಾಬಾದು ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ | ಸ್ವಾತಂತ್ರ ಸಂಗ್ರಾಮದ ಸ್ಮೃತಿಗಳು ಸಂಪುಟ 2. 1977(ಡಾ.ಕಾಮತರ ಗ್ರಂಥ) |
| 38) ನನ್ನ ಸ್ಮೃತಿ | |
| 39) ಕೊಪ್ಪಳ ನಾಡಿನಲ್ಲಿ ಸ್ವಾತಂತ್ರ್ಯ ಹೋರಾಟ | ಗವಿದೀಪ್ತಿ ಸ್ಮರಣ ಗ್ರಂಥದಲ್ಲಿ 1976 |
| 40) ಜಿಜ್ಞಾಸುಕೂಟ | ಗೋಕಾಕ ಅಭಿನಂದನ ಗ್ರಂಥದಲ್ಲಿ ಲೇಖನ |
| 41) ಬಳ್ಳಾರಿ ಸಾಹಿತ್ಯ ಸಮ್ಮೇಳನ – ಸಾಹಿತ್ಯ ಗೋಷ್ಠಿಯಲ್ಲಿ ಅಧ್ಯಕ್ಷ ಭಾಷಣ | (ಕಾವ್ಯ ಸಮಾಲೋಚನೆ) ಕನ್ನಡನುಡಿ 1970 |
| 42) ಆಡಳಿತದಲ್ಲಿ ಕನ್ನಡವೇ ಏಕೆ ಬೇಕು | ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶನಾಲಯದ ಪ್ರಕಟಣೆ 1977 |
| 43) ಲೋಕಸೇವಾ ಆಯೋಗ ಪರೀಕ್ಷೆಗಳಲ್ಲಿ ಕನ್ನಡ | ಆಡಳಿತ ಭಾಷೆ ಸಮಸ್ಯೆಗಳ ವಿಶ್ಲೇಷಣೆ ಗ್ರಂಥದಲ್ಲಿ 1977 |

# ಹಿರಿಕಿರಿಯರ ಅನಿಸಿಕೆಗಳು

ಕನ್ನಡದ ಅಭಿವೃದ್ಧಿಯಷ್ಟೆ ಅಲ್ಲದೆ ಅದು ಸರ್ಕಾರದ ಎಲ್ಲ ಹಂತಗಳಲ್ಲೂ ಆಡಳಿತ ಭಾಷೆಯಾಗುವಂತೆ ನಾವು ಪ್ರಯತ್ನಿಸಬೇಕಾಗಿದೆ. ಇದು ಸಾಧ್ಯವಾಗುವಂತೆ ವಿಶಿಷ್ಟ ಕ್ರಮಗಳನ್ನು ಕೈಕೊಳ್ಳುವುದಕ್ಕೆ ಅನುಕೂಲವಾದ ಕೆಲವೊಂದು ಟಿಪ್ಪಣಿಗಳನ್ನು ತಯಾರಿಸಲು ಈಗಲೇ ಆರಂಭಿಸಿರಿ.

**ಜಿ. ವಿ. ಕೆ. ರಾವ್**, ಐ.ಎ.ಎಸ್

ಬೆಂಗಳೂರು–11
2–5–1974

*

ಕನ್ನಡ ಭಾಷಾ ನಿರ್ದೇಶನಾಲಯದ ಕರ್ಣಧಾರತ್ವ ವಹಿಸಿಕೊಂಡ ಮೇಲೆ ಜಯತೀರ್ಥ ರಾಜಪುರೋಹಿತರು, ತಮ್ಮ ಕಾರ್ಯವನ್ನು ಪಾದ್ರಿಯ ಶ್ರದ್ಧೆಯಿಂದ ಕೈಕೊಂಡಿದ್ದಾರೆ. ಅವರಿಗೆ ಕನ್ನಡದ ಬಗೆಗೆ ಅಪಾರ ಆಸಕ್ತಿ. ಆಸಕ್ತಿ ಇರುವ ಅಂಥವರನ್ನು ಕನ್ನಡದ ಕೆಲಸಕ್ಕೆ ಹಚ್ಚಿ ರಾಜ್ಯ ಸರ್ಕಾರವು ಕನ್ನಡಕ್ಕೆ ಒಳ್ಳೆಯದನ್ನೇ ಮಾಡಿದೆ.

ರಾಜಪುರೋಹಿತರಿಗಿಂತ ಹೆಚ್ಚು ಅರ್ಹರಾದ ಜನರು ಸಿಕ್ಕುತ್ತಿರಲಿಲ್ಲ. ಅವರಿಗೆ ಆಡಳಿತದ ಅನುಭವವೂ ಇದೆ. ಕನ್ನಡ ಭಾಷೆಯ ಮೇಲೆ ಪ್ರಭುತ್ವವೂ ಇದೆ. ಮೇಲಾಗಿ ಅವರು ಅನೇಕ ಭಾಷೆಗಳನ್ನು ಬಲ್ಲವರಾಗಿರುವದು ಭಾಷಾ ನಿರ್ದೇಶನಾಲಯಕ್ಕೆ ಬಹು ದೊಡ್ಡ ಲಾಭವೆನಿಸಿದೆ.

**ಪಾಟೀಲ ಪುಟ್ಟಪ್ಪ**
'ಪ್ರಪಂಚ'

ಹುಬ್ಬಳ್ಳಿ
25–4–1976

*

ನೀವು ಸಂಸ್ಕೃತಿ ಮತ್ತು ವಿದ್ಯಾಪ್ರಚಾರ ಕಾರ್ಯಗಳಿಂದ ಈಗ ಹೊರಗೆ ಹೋಗಿದ್ದೀರಿ. ಇಲ್ಲೇ ಇದ್ದು ಇನ್ನೆಷ್ಟೋ ಮಾಡಬಹುದಾಗಿತ್ತು. ಆದರೆ ನಾಡಿನ ಜೀವನದ ವ್ಯಾಪ್ತಿಯಲ್ಲಿ ನಾಲ್ಕಾರು ಕೆಲಸಗಳು ಮಾಡಬಲ್ಲವರ ಪಾಲಿಗೆ ಬರುತ್ತವೆ. ಸಂತೋಷ.

**ಪ್ರೊ. ವಿ. ಸೀತಾರಾಮಯ್ಯ**, ಎಂ. ಎ.

ಚಾಮರಾಜಪೇಟೆ, ಬೆಂಗಳೂರು
16–4–1979

ಆಡಳಿತ ಕ್ಷೇತ್ರದ ಮೂಲೆ ಮೊಡಕುಗಳನ್ನು ಗರುಡ ದೃಷ್ಟಿಯಿಂದ ನೋಡಿರುವ ಮತ್ತು ಹಿರಿಯ ಕಿರಿಯ ಅಧಿಕಾರಿಗಳ ಜಾತಕವನ್ನು ಆಮೂಲಾಗ್ರವಾಗಿ ಪರಿಶೀಲಿಸಿರುವ ಜಯತೀರ್ಥ ರಾಜಪುರೋಹಿತರು ಎಲ್ಲ ಕ್ಷೇತ್ರಗಳಲ್ಲಿ ಕನ್ನಡದ ಬಳಕೆಯ ವಿಷಯದ ಮೇಲೆ ಮಾತಾಡಲು ಅದಕ್ಕೆ ಸಂಬಂಧಿಸಿದ ಸಮಸ್ಯೆಗಳಿಗೆ ಪರಿಹಾರಗಳನ್ನು ಸೂಚಿಸಲು ಸರ್ವಾರ್ಹರಾಗಿದ್ದಾರೆ. ಕನ್ನಡದ ಬಳಕೆ ಇಂದು ಭಾವನಾತ್ಮಕ ಪ್ರಶ್ನೆಗಿಂತ ಹೆಚ್ಚಾಗಿ ವ್ಯಾವಹಾರಿಕ ಅವಶ್ಯಕತೆಯಾಗಿದೆಯೆನ್ನುವದನ್ನವರು ಸ್ಪಷ್ಟಪಡಿಸಿದ್ದಾರೆ.

ಈ ವಿಷಯದಲ್ಲಿ ರಾಜಪುರೋಹಿತರು ಮಂಡಿಸಿರುವ ಸೂಚನೆಗಳು ಸ್ವಾಗತಾರ್ಹವಾಗಿದ್ದು, ಪರಿಷತ್ತಿನಂಥ ಸಂಸ್ಥೆಗಳೂ ಮತ್ತು ಕನ್ನಡ ಚಳುವಳಿಗಾರರೂ ಅವುಗಳ ಚಾಲ್ತೀಕರಣದಲ್ಲಿ ಮುತುವರ್ಜಿ ವಹಿಸಬೇಕು – ('ಕನ್ನಡದ ಸರ್ವಾಂಗೀಣ ಪ್ರಗತಿ' ವಜ್ರಮಹೋತ್ಸವ ಪ್ರಕಟಣೆಯಿಂದ)

**ಡಾ. ದೆ. ಜವರೇಗೌಡರು**

ಮಾಜಿ ಉಪಕುಲಪತಿ

ಮೈಸೂರು ವಿಶ್ವವಿದ್ಯಾನಿಲಯ.

ಮೈಸೂರು

1977

ಸ್ವತಃ ರಚನಾತ್ಮಕ ಬರಹಗಾರರಾಗಿರುವಿರಲ್ಲದೆ, ಕನ್ನಡ ಅಭಿವೃದ್ಧಿಗಾಗಿ ನೀವು ಅವಿಶ್ರಾಂತವಾಗಿ ದುಡಿದುದು ಅವಿಸ್ಮರಣೀಯ. ಕನ್ನಡದ ಮುನ್ನಡೆಗಾಗಿ ನೀವು ನಿಮ್ಮ ಸಾಮರ್ಥ್ಯವನ್ನೂ, ಪ್ರತಿಷ್ಠೆಯನ್ನೂ ಸರ್ವಸ್ವವನ್ನೂ ಪಣಕ್ಕೆ ಇಟ್ಟಿದ್ದೀರಿ. ಕೇವಲ ಒಬ್ಬ ಸರ್ಕಾರಿ ನೌಕರನೆಂದು ನೀವು ಕೆಲಸಮಾಡುವದಾಗಿದ್ದರೆ, ಸಮಸ್ಯೆಯ ಅಂಚಿಗೂ ಕೂಡ ಪರಿಹಾರ ದೊರಕುತ್ತಿರಲಿಲ್ಲ. ಕನ್ನಡದ ಪ್ರಶ್ನೆ ಒಂದು ವೈಯಕ್ತಿಕ ಪ್ರಶ್ನೆ ಎಂಬಂತೆ, ನೀವು ರಭಸದಿಂದ, ಉತ್ಸಾಹದಿಂದ, 'ಪ್ರಾಣಾನ್ ಹರನ್ ಇವ' ಹೋರಾಡಿದ್ದೀರಿ. ಈ ಧರ್ಮಯುದ್ಧದಲ್ಲಿ ನೀವು ನಿಮ್ಮ ಸ್ವಂತದ ಸುರಕ್ಷಿತತೆಯನ್ನು ಸಹ ಗಮನಿಸದೆ ಮುನ್ನುಗ್ಗಿದ್ದೀರಿ. ಕನ್ನಡದ ಕೆಲಸದಲ್ಲಿ ಒಬ್ಬ ರಸೆಲ್, ಒಬ್ಬ ಡೆಪ್ಯೂಟಿ ಚೆನ್ನಬಸಪ್ಪ, ಒಬ್ಬ ಶಾಂತಕವಿ, ಎಂ. ಎಸ್. ಸುಬ್ಬಣ್ಣ, ಬಿ. ವೆಂಕಟಾಚಾರ್, ಗಳಗನಾಥರ ಜತೆಗೆ ನಿಮ್ಮ ಹೆಸರು ಸೇರಿಹೋಯಿತು. ಯೋಗ್ಯತೆಯನ್ನು ಮನ್ನಿಸುವದು, ಸಾಮಾನ್ಯವಾಗಿ—ನಿಧಾನವಾಗಿರುತ್ತದೆ. ಆದರೆ, ನಿಮ್ಮ ವಿಷಯದಲ್ಲಿ ಅಕಾಡೆಮಿ ಸಕಾಲಕ್ಕೆ ತೋರಿದ ಈ ಪುರಸ್ಕಾರಕ್ಕಾಗಿ ಅಕಾಡೆಮಿಯೂ ಅಭಿನಂದನಾರ್ಹ.

**ಡಾ. ರಾ. ಯ. ಧಾರವಾಡಕರ**

ಬೆಂಗಳೂರು

11–10–1978

### ತಂದೆಯ ಆಶೀರ್ವಚನ

ಸಂತೋಷದ ವಾರ್ತೆ. ನಿನಗೆ 'ಸುಳಿ-ಗಾಳಿ' ಕಾದಂಬರಿಯ ಲೇಖನದ ಬಗ್ಗೆ ಅತ್ಯುಚ್ಚತರಗತಿಯ ಬಹುಮಾನ ದೊರತದ್ದು, ಯುಗಾದಿ ವಿಶೇಷಾಂಕ 'ಸುಧಾ' ದಲ್ಲಿ ನೋಡಿ ಅತ್ಯುದ್ರಿಕ್ತ ಉತ್ಸಾಹ ಮನಸ್ಕನಾಗಿರುವೆ. "ಪುತ್ರಾದಿಚ್ಛೇತ್ ಪರಾಭವಂ" ಪರಾಭವಂ-ನಾಮು, ಸದ್ಯಶಸಾಪರಾಭವಂ.

"ಏಕೋಹಿಗುಣವಾನ್ ಪುತ್ರೋನಿರ್ಗುಣೈಶ್ಚ ಶತೈಶ್ಚಕಿಂ" ಉತ್ತರೋತ್ತರಾಭಿವೃದ್ಧಿ ರಸ್ತು.

**ಶೇಷಾಚಾರ್ಯ ರಾಜಪುರೋಹಿತ**

ಕನಕಗಿರಿ
28-3-68

*

### ಮಾವನ ಆಶೀರ್ವಾದ

'ತುಂಗೆ ಯಂಗಳದಲ್ಲಿ'ರುವುದನ್ನು ಓದಿಯಾಯಿತು. ಶೈಲಿ ನಿರರ್ಗಳವಾಗಿದೆ. ಕಾವ್ಯಂ ಗ್ರಾಹ್ಯಮಲಂಕಾರಾತ್ ಸೌಂದರ್ಯಮಲಂಕಾರಃ (ವಾಮನ) ಆತನ ಗ್ರಂಥ ಸ್ವಲ್ಪ ನೋಡಿರಿ. ನಿಮಗೆ ಅದರಿಂದ ಕಾವ್ಯಸೃಷ್ಟಿಯಲ್ಲಿ ಹೆಚ್ಚಿನ ಪ್ರೋದ್ಬಲ ದೊರೆಯುತ್ತದೆ. ಗುರು ಶ್ರೀ ಕೃಷ್ಣಶಾಸ್ತ್ರಿಗಳ ಮಾನವೀಯತೆಯನ್ನು ಕಂಡೆನು. ನಿಮ್ಮ ಸಾಹಿತ್ಯ ವ್ಯವಸಾಯ ಅಭಿವೃದ್ಧಿ ಹೊಂದಲಿ. ಹಿಂದೆ ಒಮ್ಮೆ ರೂಪಿಸಿದ ಇಲ್ಲಿಯ ಮುಖಂಡರ ಜೀವನ ಚರಿತೆಗೆ ಜೀವದುಸಿರು ಬರಲಿ. ಪ್ರೊ. ಗೋಕಾಕರೂ ಚೆನ್ನಾಗಿ ಆಶೀರ್ವದಿಸಿದ್ದಾರೆ.

**ಪ್ರೊ. ರಾಮಚಂದ್ರರಾವ್ ಪಟ್ವಾರಿ**

ಹೈದ್ರಾಬಾದು
9-2-68

ತಮ್ಮ ಅಮೂಲ್ಯಸಾಧನೆಗಾಗಿ ತಮ್ಮನ್ನು ಅಭಿನಂದಿಸಬಯಸುತ್ತೇನೆ. ಕನ್ನಡವನ್ನೇ ನಮ್ಮ ಪ್ರಾಂತ್ಯದ ನಾನಾ ಕಾರ್ಯಗಳಲ್ಲಿ ಉಪಯೋಗಿಸಲು ನೆರವಾಗುವ ಇಂಥ ಆಗತ್ಯ ಪ್ರಯತ್ನ ಶ್ರೇಯಸ್ಕರವಾಗಿ ಮುಂದುವರಿಯಲೆಂದು ಹಾರೈಸುತ್ತೇನೆ.

**ನಿಟ್ಟೂರು ಶ್ರೀನಿವಾಸರಾವ್**

ಬೆಂಗಳೂರು, 1976

ನಿವೃತ್ತ ಮುಖ್ಯನ್ಯಾಯ ಮೂರ್ತಿಗಳು,
ಕರ್ನಾಟಕ ಶ್ರೇಷ್ಠ ನ್ಯಾಯಾಲಯ

## ಶ್ರೀಮತಿ ಗೊರೂರು ರಾಮಸ್ವಾಮಿ ಅಯ್ಯಂಗಾರರ ಅನಿಸಿಕೆ

ನನಗಾಗಿ ಶ್ರಮವಹಿಸಿ ತುಂಬ ಆತಿಥ್ಯ ಮಾಡಿದಿರಿ. ನಿಮ್ಮ ಹೆಂಡತಿಗೆ ಅವಕಾಶವಾಗದಿದ್ದರೂ ನಾನು ಹೊರಡುವ ದಿನ ನೀವೇ ಎದ್ದು ಹಾಲು ಕಾಯಿಸಿ ನನಗೆ ಉಪಚಾರ ಮಾಡಿದಿರಿ. ಈ ವಿಷಯ ನನ್ನ ಹೆಂಡತಿಗೆ ಹೇಳಿದಾಗ ಅವಳು "ಯಾರಿಗೆ ಗೊತ್ತು, ನಿತ್ಯ ಅವರೇ ಎದ್ದು ಕಾಫಿ ಮಾಡುವದು ಅವರ ಮನೆ ಪದ್ಧತಿ ಇರಬಹುದೇನೋ" ಎಂದಳು. ಹೀಗಿದೆ ಈ ಹಿಡಿಂಬಿ ಸಂವತ್ಸರದಲ್ಲಿ ಮಹಿಳೆಯರ ಪೊಗರು. ನಮಗೆ ವಯಸ್ಸಾಗುತ್ತಿರುವದರಿಂದ, ದಿನ ದಿನಕ್ಕೆ ನಮ್ಮ ನಿಶ್ಶಕ್ತಿಯೂ ಅವರ ಮೇಲೆ ನಮ್ಮ ಅವಲಂಬನೆಯೂ ಹೆಚ್ಚಾಗುತ್ತಿದೆ. ನಿಮಗೆ ಇನ್ನೂ ನನ್ನಷ್ಟು ವಯಸ್ಸಾಗಿಲ್ಲ, ನಿಜ. ಆದರೆ ನಿಮ್ಮ ಹಲ್ಲನ್ನೇ ಮುರಿದು ಹಾಕಿದ್ದಾರಲ್ಲ ?

ನಾನು ಪ್ರಯಾಣದಲ್ಲಿ 'ನಿಮ್ಮ ಮೌಲ್ಯಗಳು' ಪುಸ್ತಕ ಓದಿದೆ. ಎಲ್ಲ ಕಥೆಗಳೂ ಚೆನ್ನಾಗಿವೆ. ಪ್ರತಿ ಕಥೆಯಲ್ಲಿಯೂ ಒಂದು ಉನ್ನತ ಮೌಲ್ಯವನ್ನೂ ಇಟ್ಟಿದ್ದೀರಿ.

ನನ್ನ ಹೆಂಡತಿಗೆ ತಾವು ಇಲ್ಲಿ ನಮ್ಮ ಮನೆಗೆ ದಯಮಾಡಿಸಿದ್ದ ಪರಿಚಯವಿದೆ. "ಜ್ಞಾಪಕವಿದೆ. ಕೆಂಪಗೆ ಚೆನ್ನಾಗಿದ್ದಾರೆ. ಕೆನ್ನೆ ಜಿಗುಟಿದರೆ ರಕ್ತ ತೊಟ್ಟಿಕ್ಕುತ್ತೆ" ಎಂದಳು. (She is sixtyfour). ನಿಮ್ಮ ಪತ್ನಿಯವರಿಗೆ ಹೇಳಿ. ಇದು ಮಹಿಳೆಯರ ಅಂತರರಾಷ್ಟ್ರೀಯ ವರುಷ. ಅವರಿಗೆ ಇದಕ್ಕಿಂತ ಇನ್ನೇನು ಬೇಕು.

ಗೊರೂರು **ಗೊರೂರು ರಾಮಸ್ವಾಮಿ ಅಯ್ಯಂಗಾರ್**
29-10-75

ಒಂದು ಸುದ್ದಿ ಏನೋ ಪತ್ರಿಕೆಯಲ್ಲಿ ಓದಿದೆ : ಕನ್ನಡದಲ್ಲಿ ತೀರ್ಪುಕೊಟ್ಟರು ಎಂದು. ಅದು ನೀವೇ ಎಂದು ಒಬ್ಬರು ಅಂದರು. ಆದರೆ ಅದು ಚಿತ್ರದುರ್ಗ ದಿಂದ ಎಂದಿತ್ತು. ಮತ್ತೆ ಅನುಮಾನವಾಯಿತು. ನೀವೇ ಹೌದೇ ? ಹೌದಾಗಿದ್ದರೆ ಅಭಿನಂದನೆಗಳು.

ಧಾರವಾಡ **ಜಿ. ಬಿ. ಜೋಶಿ,**
10-11-1974 ಮನೋಹರ ಗ್ರಂಥ ಮಾಲೆ

ಈ ಗೌರವ ನೀವು ಕನ್ನಡ ಸಾಹಿತಿಗಳೆಂದು ನಿಮಗೆ ಜ್ಞಾಪಕ ಮಾಡಿ ಕೊಡಬಹುದು.

ನಿಮ್ಮ ಬರವಣಿಗೆ ನಿಂತಿದೆಯಲ್ಲ ಎಂದು ಈ ಮಾತು ಹೇಳುತ್ತಿರುವೆ.

10-10-1978 **ಡಾ. ಸೂರ್ಯನಾಥ ಕಾಮತ್**

## 'Kannada Teerpugalu'

Kindly accept my congratulations on behalf of the Commission on publication of such a useful book in Kannada. Truely this publication has no parallel in any other language.

B. K. SHARMA

New Delhi *Secretary,*
26-5-1976 *Official Languages Commission*

I am extremely happy to learn that the Karnataka Academy of Literature has after all recognised your merit and your contribution to Kannada Literature; and granted the award to you.

PROF. T. S. SHAMARAYA, M.A.

Mysore
10-10-1978

ತಮ್ಮ ಸಾಹಿತ್ಯ ಸೇವೆ, ಪ್ರಶಂಸೆಗೆ ಪಾತ್ರವಾಗುತ್ತಿರುವದು ಹೈದ್ರಾಬಾದ್ ಕನ್ನಡಿಗರಿಗೆ ಒಂದು ಹೆಮ್ಮೆಯ ಸಂಗತಿ. ತಮಗಿತ್ತ ಗೌರವ, ಇಲ್ಲಿಯ ಎಲ್ಲ ಬರಹಗಾರರಿಗೂ ಸಂದ ಗೌರವ.

**ಸಗರ ಕೃಷ್ಣಾಚಾರ್ಯ**, ಎಂ.ಎ, ಬಿ.ಇಡಿ.

ಶಹಪುರ, ಜಿ. ಕಲಬುರ್ಗ (ಕರ್ನಾಟಕ)
16-1-1979

ಈಚೆಗೆ ತಾವು ಮಾಡಿದ ಒಂದು ಉಪನ್ಯಾಸದ ತುಣುಕನ್ನು ಪತ್ರಿಕೆಯಲ್ಲಿ ಓದಿ ತುಂಬ ಹರ್ಷಗೊಂಡೆ. ತಾವು ಧೀಮಂತರು. ಆಸ್ತಿಕ್ಯವನ್ನು ಒತ್ತಿ ಹೇಳಿದ್ದೀರಿ, ಧಾರ್ಮಿಕ ಭಾವ ನಮ್ಮ ಅಸ್ಥಿಗತವಾಗಿದೆ ಎಂಬ ಮಾತನ್ನು ಮೊಳಗಿಸಿದ್ದೀರಿ. ಬೇಸಿಗೆಯ ದಗೆಯಲ್ಲಿ ತಣ್ಣೀರಿನ ಚಿಲುಮೆಯಾಗಿದ್ದಂತೆ ನನಗೆ ಆ ಮಾತುಗಳು ಕಂಡು ಬಂದವು. ಧನ್ಯವಾದಗಳು.

ಜಯಲಕ್ಷ್ಮೀಪುರಂ, ಮೈಸೂರು **ಡಾ. ಪು. ತಿ. ನರಸಿಂಹಾಚಾರ್**
13-3-1979

